# ಜನಪದ ಲಾವಣಿಗಳ ಮುಖೇನ ವಸಾಹತುಶಾಹಿಗೆ ಪ್ರತಿರೋಧದ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಗಂಜ್ಯಾಳ ಬೋರಮ್ಮ ಬಸವಂತ್ರಾಯ

ಮಾರ್ಗದರ್ಶಕರು
ಡಾ. ಎಂ. ಮಲ್ಲಿಕಾರ್ಜುನಗೌಡ
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೫

# ಜನಪದ ಲಾವಣಿಗಳ ಮುಖೇನ ವಸಾಹತುಶಾಹಿಗೆ ಪ್ರತಿರೋಧದ ನೆಲೆಗಳು

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು
**ಗಂಜ್ಯಾಳ ಬೋರಮ್ಮ ಬಸವಂತ್ರಾಯ**

ಮಾರ್ಗದರ್ಶಕರು
**ಡಾ. ಎಂ. ಮಲ್ಲಿಕಾರ್ಜುನಗೌಡ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೫

# ದೃಢೀಕರಣ ಪತ್ರ

“ಜನಪದ ಲಾವಣಿಗಳ ಮುಖೇನ ವಸಾಹತುಶಾಹಿಗೆ ಪ್ರತಿರೋಧದ ನೆಲೆಗಳು” ಎಂಬ ವಿಷಯದ ಕುರಿತು ಶ್ರೀಮತಿ ಗಂಜ್ಯಾಳ ಬೋರಮ್ಮ ಬಸವಂತ್ರಾಯ ಇವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದು ಇವರ ಸ್ವತಂತ್ರ ಸಂಶೋಧನ ಅಧ್ಯಯನವಾಗಿದೆ. ಇದನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಾಗಿದೆ.

ಮಾರ್ಗದರ್ಶಕರು

**ಡಾ. ಎಂ. ಮಲ್ಲಿಕಾರ್ಜುನಗೌಡ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ದಿನಾಂಕ :
ಸ್ಥಳ : ವಿದ್ಯಾರಣ್ಯ

# ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ **"ಜನಪದ ಲಾವಣಿಗಳ ಮುಖೇನ ವಸಾಹತುಶಾಹಿಗೆ ಪ್ರತಿರೋಧದ ನೆಲೆಗಳು"** ಎಂಬ ಮಹಾಪ್ರಬಂಧವು **ಡಾ. ಎಂ. ಮಲ್ಲಿಕಾರ್ಜುನಗೌಡ,** ಸಹಾಯಕ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನವನ್ನು ಆಧರಿಸಿ ರಚನೆಗೊಂಡಿದ್ದಾಗಿದೆ. ಈ ಮಹಾಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಹಾಗೂ ಇದು ಬಿಡಿ ಇಲ್ಲವೆ ಇಡಿಯಾಗಿ ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಗಂಜ್ಯಾಳ ಬೋರಮ್ಮ ಬಸವಂತ್ರಾಯ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

**ದಿನಾಂಕ** : 08/08/2015
**ಸ್ಥಳ** : **ವಿದ್ಯಾರಣ್ಯ**

# ಪರಿವಿಡಿ

ಅಧ್ಯಾಯ : ಒಂದು

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ೧ - ೯

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸಂಯೋಜನೆ

ಅಧ್ಯಾಯ : ಎರಡು

ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ೧೦ - ೨೭

ಅಧ್ಯಾಯ : ಮೂರು

ಪ್ರತಿರೋಧ : ಒಂದು ತಾತ್ವಿಕ ಚರ್ಚೆ ೨೮ - ೪೨

ಅಧ್ಯಾಯ : ನಾಲ್ಕು

ಲಾವಣಿ ಸಾಹಿತ್ಯ ಪರಿಚಯ ೪೩ - ೫೩

೪.೧. ಲಾವಣಿ ಪದದ ಉತ್ಪತ್ತಿ ಹಾಗೂ ಅರ್ಥ ವಿವರಣೆ

೪.೨. ಲಾವಣಿ ಇತಿಹಾಸ

೪.೩. ಲಾವಣಿ ಲಕ್ಷಣ

೪.೪. ಲಾವಣಿ ಪ್ರಕಾರ

ಅಧ್ಯಾಯ : ಐದು

ಲಾವಣಿ ಸಾಹಿತ್ಯ ಪ್ರತಿರೋಧದ ನೆಲೆಗಳು ೫೪ - ೧೯೬

೫.೧. ಸ್ವಾತಂತ್ರ್ಯದ ನೆಲೆ

೫.೨. ರಾಜಕೀಯ ನೆಲೆ

೫.೨.೧. ನಿಶ್ಯಸ್ತ್ರೀಕರಣ ಕಾಯಿದೆ ಹಾಗೂ ಸ್ಥಳೀಯ ಪ್ರತಿರೋಧಗಳು

೫.೨.೨. ದತ್ತು ಪದ್ಧತಿಯ ನೆಲೆಯ ಪ್ರತಿರೋಧಗಳು

೫.೨.೩. ಸಹಾಯಕ ಸೈನ್ಯ ಪದ್ಧತಿಯ ನೆಲೆಯ ಪ್ರತಿರೋಧಗಳು

೫.೩. ರಾಷ್ಟ್ರೀಯತೆಯ ನೆಲೆ

೫.೩.೧. ರಾಷ್ಟ್ರೀಯತೆಯ ಅರ್ಥ

೫.೩.೨. ರಾಷ್ಟ್ರೀಯತೆಯ ಉಗಮ

೫.೩.೩. ರಾಷ್ಟ್ರೀಯತೆಯ ಪರಿಕಲ್ಪನೆ
೫.೩.೪. ರಾಷ್ಟ್ರೀಯತೆಯ ಸ್ವರೂಪ
೫.೩.೫. ಲಾವಣಿಯಲ್ಲಿ ರಾಷ್ಟ್ರೀಯತೆಯ ನೆಲೆಯ ಪ್ರತಿರೋಧ
೫.೪. ಸಾಮಾಜಿಕ ನೆಲೆ
೫.೪.೧. ದಾರ್ಶನಿಕ ಮತ್ತು ಪರೋಪಕಾರಿ ನೆಲೆಯ ಪ್ರತಿರೋಧಗಳು
೫.೪.೨. ಜಾತಿ ಅಸಮಾನತೆಯ ನೆಲೆಯ ಪ್ರತಿರೋಧಗಳು
೫.೫. ಆರ್ಥಿಕ ನೆಲೆ
೫.೫.೧. ವ್ಯವಹಾರದ ನೆಲೆಯ ಪ್ರತಿರೋಧಗಳು
೫.೫.೨. ಆದಾಯ ತೆರಿಗೆ ನೆಲೆಯ ಪ್ರತಿರೋಧಗಳು
ಅಧ್ಯಾಯ : ಆರು
**ಲಾವಣಿಗಳ ಸಾಹಿತ್ಯಿಕ ಅಧ್ಯಯನ** ೧೯೭ - ೨೧೦
ಅಧ್ಯಾಯ : ಏಳು
**ಸಮಾರೋಪ** ೨೧೧ - ೨೧೮
**ಅಧ್ಯಯನದ ಫಲಿತಗಳು**
**ಪರಾಮರ್ಶನ ಗ್ರಂಥಗಳು** ೨೧೯ - ೨೨೩

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

---

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸಂಯೋಜನೆ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ೧.೧. ಅಧ್ಯಯನದ ಉದ್ದೇಶ

ವಸಾಹತುಶಾಹಿ ಕಾಲಘಟ್ಟದಲ್ಲಿ ಸ್ಥಿತ್ಯಂತರಗೊಳ್ಳುತ್ತಿದ್ದ ಭಾರತೀಯ ಸಾಂಸ್ಕೃತಿಕ ಚಹರೆಗಳನ್ನು ದಾಖಲಿಸಿರುವುದರಲ್ಲಿ ಜಾನಪದ ಸಾಹಿತ್ಯವೂ ಒಂದು ಪ್ರಮುಖ ಮಾಧ್ಯಮವಾಗಿದೆ. ಶಿಷ್ಟ ಸಾಹಿತ್ಯಕ್ಕಿಂತ ಭಿನ್ನವಾದ ಪಾಶ್ಚಿಮಾತ್ಯ ಸಾಹಿತ್ಯದ ವಸ್ತು, ತಂತ್ರ, ನಿರೂಪಣಾ ವಿಧಾನಗಳಿಗಿಂತ ಭಿನ್ನವಾದ ದೇಶೀ ಸಂಕಥನಗಳನ್ನು ಒಳಗೊಂಡ ಜಾನಪದ ಸಾಹಿತ್ಯ ಏಕಕಾಲಕ್ಕೆ ತನ್ನ ದೇಶೀ ನೆಲೆಯ ಬೇರುಗಳಿಂದ ವಸಾಹತುಶಾಹಿಯ ಆಕ್ರಮಣಶೀಲತೆಯ ವಿರುದ್ಧ ಆಧುನಿಕತೆಯೊಂದಿಗಿನ ಸಂಘರ್ಷದ ಮೂಲಕ ಅರ್ಥಪೂರ್ಣವಾದ ಸಾಂಸ್ಕೃತಿಕ ಸಂಕಥನಗಳನ್ನು ತೆರೆದಿಡುವ ಕ್ರಮವು ವೈಶಿಷ್ಟ್ಯಪೂರ್ಣವಾದುದಾಗಿದೆ. ನಿದರ್ಶನಕ್ಕೆ ಹಲಗಲಿಯ ಬೇಡರು ಎನ್ನುವ ಜನಪದ ವೀರ ಕಾವ್ಯವನ್ನೇ ನೋಡಬಹುದಾಗಿದೆ. ಇಲ್ಲಿ ವಸಾಹತುಶಾಹಿಯ ಆಕ್ರಮಣಶೀಲತೆಗೆ ಪ್ರತಿರೋಧವೊಂದು ರೂಪುಗೊಂಡಿರುವುದನ್ನು ಅದು ಜನಪದ ಕಥನ ಕ್ರಮದ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದಾಗಿದೆ. ಪಾಶ್ಚಾತ್ಯರ ದೃಷ್ಟಿಕೋನದಿಂದ ಮೈದಳೆದ ಪೌರಾತ್ಯವಾದವೊಂದು ಮುನ್ನೆಲೆಗೆ ಬಂದ ಪಾಶ್ಚಾತ್ಯ ಸಿದ್ಧಾಂತಗಳಿಂದ ದೇಶೀ ಭಾಷೆಗಳಲ್ಲಿ ಹುಟ್ಟಿಕೊಂಡ ಸಾಹಿತ್ಯಿಕ ಪ್ರಕಾರಗಳಿಗಿಂತ ಭಿನ್ನವಾದ ಅಪ್ಪಟ ದೇಶೀ ಚಿಂತನೆಯ ಹೊಳಹುಗಳನ್ನು ಇಲ್ಲಿ ಕಾಣಬಹುದಾಗಿದೆ.

ಜಾನಪದ ಸಾಹಿತ್ಯ ಪ್ರಕಾರಗಳಲ್ಲೊಂದಾದ ಲಾವಣಿ ಸಾಹಿತ್ಯ ರಾಷ್ಟ್ರೀಯ ಚಳವಳಿಯ ವಿದ್ಯಾಮಾನಗಳನ್ನು ಗ್ರಾಮಾಂತರ ಪ್ರದೇಶಗಳ ಜನರಿಗೆ ವಿವರಿಸಿ ಅವರಲ್ಲಿ ರಾಷ್ಟ್ರ ರಾಷ್ಟ್ರೀಯತೆಯ ಪರಿಕಲ್ಪನೆ ಮೂಡಿಸುವಲ್ಲಿ ಯಶಸ್ವಿಯಾಗುವ ಮೂಲಕ ರಾಷ್ಟ್ರೀಯ ಚಳವಳಿಯನ್ನು ಗ್ರಾಮಾಂತರ ಪ್ರದೇಶಗಳಿಗೆ ಪಸರಿಸಲು ಕಾರಣವಾಯಿತೆಂಬುದನ್ನು ಶಿವಾನಂದ ಗುಬ್ಬಣನವರ್ ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ ಎಂಬ ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಲಾವಣಿಯ ಚಾರಿತ್ರಿಕ ಬಳಕೆಯ ಕುರಿತಂತೆ ನಿರೂಪಿಸುತ್ತಾರೆ. ಆದರೆ ಲಾವಣಿ ಸಾಹಿತ್ಯವು ಜಾನಪದದ ಗೇಯ ಪ್ರಕಾರಗಳಲ್ಲೊಂದಾದ ಕಥನ ಕ್ರಮದ ನಿರೂಪಣೆಯ ಪ್ರಕಾರಗಳಲ್ಲೊಂದಾಗಿದೆ. ಪ್ರಜ್ಞಾಪೂರ್ವಕವಾಗಿ ವಸಾಹತುಶಾಹಿಗೆ ಪ್ರತಿರೋಧದ ನೆಲೆಯಲ್ಲಿ ಇವು ಹುಟ್ಟಿಕೊಂಡವು ಎಂದು ಹೇಳುವುದು

ಅಷ್ಟಾಗಿ ಸಮಂಜಸವೆನಿಸಲಾರದು. ಜಾನಪದ ಕವಿಯೊಬ್ಬ ತನ್ನ ಕಾಲದ ಸಂವೇದನೆಯನ್ನು ಮತ್ತು ಕಾಲದ ಸಂದರ್ಭಗಳಿಗೆ ಪ್ರತಿಕ್ರಿಯಿಸುವ ನೆಲೆಯಲ್ಲಿ ಮಾತ್ರ ಸ್ಪಂದಿಸಿರುತ್ತಾನೆ. ಅಖಂಡ ಭಾರತದ ಕಲ್ಪನೆಯೇ ಇಲ್ಲದಿದ್ದ ಕಾಲದಲ್ಲಿ, ರಾಜ್ಯ ರಾಜ್ಯಗಳು, ಪಾಳೆಯಪಟ್ಟುಗಳು, ಸ್ವತಂತ್ರ ಸಂಸ್ಥಾನಗಳು ತಮ್ಮದೇ ಭಿನ್ನ ರಾಜ್ಯದ ಕಲ್ಪನೆಯಲ್ಲಿದ್ದಾಗ ರಾಷ್ಟ್ರೀಯತೆಯನ್ನು ಉದ್ಬೋಧಿಸುವ ವಾಹಕಗಳಾಗಿ ಲಾವಣಿ ಕೆಲಸ ನಿರ್ವಹಿಸಿತು ಎಂದು ನಂಬುವುದು ಕಷ್ಟಕರವಾದುದು. ಕಿತ್ತೂರು ಚೆನ್ನಮ್ಮನೇ ಆಗಲಿ ಅಥವಾ ಸರ್ಜಪ್ಪ ನಾಯಕನೇ ಆಗಿರಲಿ ಅವರ ಆಳ್ವಿಕೆಯ ಪ್ರದೇಶಗಳ ಸಮುದಾಯಗಳಿಗೆ ಅವರೆ ಸ್ವತಂತ್ರ ರಾಜರಾಗಿದ್ದರು. ಅವರ ಸಂಸ್ಥಾನಗಳೇ ಪ್ರತ್ಯೇಕ ರಾಷ್ಟ್ರಗಳಾಗಿದ್ದವು. ಭಿನ್ನ ಸಮುದಾಯಗಳ, ಭಿನ್ನ ಸಂಸ್ಕೃತಿಗಳ, ಭಿನ್ನ ಭಾಷೆಗಳ ಭಾರತದಂತಹ ವಿಶಾಲ ಭೂಭಾಗಕ್ಕೆ ರಾಷ್ಟ್ರೀಯತೆಯ ಪರಿಕಲ್ಪನೆ ಬಂದದ್ದೇ ಇಂಗ್ಲೀಷ ಶಿಕ್ಷಣದ ಪ್ರಭಾವದಿಂದಾಗಿ. ಆದರೆ ದೇಶೀ ಕವಿಗಳು ಇಂತಹ ಇಂಗ್ಲಿಷ ವಿದ್ಯಾಭ್ಯಾಸದಿಂದ ದೂರವೇ ಉಳಿದಿದ್ದರು. ಅಂತಹುದರಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯ ಮಾತಂತೂ ದೂರವೇ ಉಳಿದಿತ್ತು. ಬಹುಶ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಆಕಾಶವಾಣಿಯಂತಹ ರೇಡಿಯೋ ಕಾರ್ಯಕ್ರಮಗಳ ಮೂಲಕ ಭಾರತದ ಭವ್ಯತೆ, ರಾಷ್ಟ್ರೀಯತೆ, ಸ್ವಾತಂತ್ರ್ಯಸಂಗ್ರಾಮಕ್ಕೆ ಸಂಬಂಧಿಸಿದ ಕಥನಗಳನ್ನು ಆಧುನಿಕವಾಗಿ ಜಾನಪದ ಪ್ರಕಾರಗಳಲ್ಲಿ ಕಟ್ಟುವ ಪ್ರಯತ್ನದ ಭಾಗವಾಗಿ ಇಂತಹ ಪರಿಕಲ್ಪನೆಗಳು ಹುಟ್ಟಿಕೊಂಡಿರಬಹುದಾಗಿದೆ. ಸರ್ಜಪ್ಪನಾಯಕನ ಕಥನವೇ ಆಗಲಿ, ಕಿತ್ತೂರು ರಾಣಿ ಚೆನ್ನಮ್ಮನ ಪ್ರಸಂಗವೇ ಆಗಲಿ, ಇಲ್ಲವೆ ಇದಕ್ಕೆ ಪೂರಕವಾಗಿ ಸಂಗೊಳ್ಳಿರಾಯಣ್ಣನ ಜೀವನ ಕಥನವೇ ಆಗಿರಲಿ ಇವು ತಮ್ಮ ಸಮಕಾಲೀನ ಸ್ಥಳೀಯ ರಾಜಕೀಯ ಸಂಘರ್ಷದ ಫಲಗಳಾಗಿದ್ದವಷ್ಟೇ. ಇಂತಹ ಸ್ಥಳೀಯ ಸಂಘರ್ಷದ ನೆಲೆಗಳೇ ಮುಂದೆ ಗಾಂಧೀಜಿಯಂತಹ ನಾಯಕರ ಪ್ರಭಾವದಿಂದ, ಸ್ಥಳೀಯ ಪಾಳೆಯಗಾರರ, ಸಂಸ್ಥಾನಗಳ, ರಾಜಪ್ರಭುತ್ವಗಳ ಅಳಿವಿನ ನಂತರದ ಭಾರತದಲ್ಲಿ ಕಾಣಿಸಿಕೊಂಡ ರಾಷ್ಟ್ರೀಯತೆಗೆ ಮೂಲ ಪ್ರೇರಕವಾದವು. ಇಂತಲ್ಲಿ ಕಿತ್ತೂರು ರಾಣಿಚೆನ್ನಮ್ಮಳಿಗೆ ಅಥವಾ ಸಂಗೊಳ್ಳಿ ರಾಯಣ್ಣನಿಗೆ ಬ್ರಿಟಿಷರು ತಮ್ಮ ನೆರೆಯ ದಾಯಾದಿ ಶತ್ರುಗಳಂತೆಯೇ ಇದ್ದರು. ಪರಸ್ಪರ ಅಂತಃಕಲಹಗಳಲ್ಲಿ ತೊಡಗಿರುತ್ತಿದ್ದ ಭಾರತೀಯ ಸ್ಥಳೀಯ ಪ್ರಭುತ್ವಗಳು ಬ್ರಿಟಿಷರನ್ನು ಭಿನ್ನ ಬಗೆಯಲ್ಲೇನೂ ಕಂಡಿರಲಿಲ್ಲವೆಂಬ ವಾಸ್ತವವನ್ನು ತಳ್ಳಿಹಾಕಲಾಗದು.

ಇಂತಹ ಸಂದರ್ಭದಲ್ಲಿ ಜಾನಪದ ಸಾಹಿತ್ಯವು ಅದರಲ್ಲೂ ಲಾವಣಿಯಂತಹ ವಿಶಿಷ್ಟ ಕಥನ ಗೇಯವು ಹೇಗೆ ಚಾರಿತ್ರಿಕ ಅಂಶಗಳನ್ನು ಅರ್ಥೈಸಲು ಪ್ರಯತ್ನಿಸಿತು ಮತ್ತು ಅದು ಯಾವ ಬಗೆಯಲ್ಲಿ ವಸಾಹತುಶಾಹಿಗೆ ಪ್ರತಿಕ್ರಿಯಿಸಿತು ಎಂಬುದು ಕುತೂಹಲಕಾರಿ ಸಂಗತಿಯಾಗಿದೆ. ಹಾಗೂ ಇಂತಹ ವಸಾಹತುಶಾಹಿಗೆ ಅದು ಯಾವ ಬಗೆಯ ಪ್ರತಿರೋಧವನ್ನು ಒಡ್ಡಿತು ಮತ್ತದರ ಸ್ವರೂಪವೇನು ಎಂಬುದನ್ನು ಅರ್ಥೈಸುವ ಪ್ರಯತ್ನವನ್ನು ಪ್ರಸ್ತುತ ಮಹಾಪ್ರಬಂಧವು ಮಾಡಿದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಸ್ಥಿತ್ಯಂತರಗೊಳ್ಳುತ್ತಿದ್ದ ಭಾರತೀಯ ಸಾಂಸ್ಕೃತಿಕ ಸ್ವರೂಪವನ್ನು ನೀಡುವಲ್ಲಿ ಜಾನಪದ ಸಾಹಿತ್ಯವು ಅಗ್ರಗಣ್ಯವಾದದ್ದು ಎಂಬುದನ್ನು ಈಗಾಗಲೇ ವಿವರಿಸಲಾಗಿದೆ. ಶಿಷ್ಟಸಾಹಿತ್ಯಕ್ಕಿಂತ ಭಿನ್ನವಾದ ಪಾಶ್ಚಿಮಾತ್ಯ ಸಾಹಿತ್ಯದ ವಸ್ತು, ತಂತ್ರ, ನಿರೂಪಣಾ ವಿಧಾನಗಳಿಗಿಂತ ಭಿನ್ನವಾದ ಜಾನಪದ ಸಾಹಿತ್ಯವು ಏಕಕಾಲಕ್ಕೆ ತನ್ನ ದೇಶೀ ನೆಲೆಯ ಬೇರುಗಳಿಂದ ವಸಾಹತುಶಾಹಿ ಆಕ್ರಮಣಶೀಲತೆಯ ವಿರುದ್ಧ ಆಧುನಿಕತೆಯೊಂದಿಗಿನ ಸಂಘರ್ಷದ ಮೂಲಕ ಅರ್ಥಪೂರ್ಣವಾದ ಸಾಂಸ್ಕೃತಿಕ ಸಂಕಥನಗಳನ್ನು ನಿರೂಪಿಸುವುದು ವೈಶಿಷ್ಟ್ಯಪೂರ್ಣವಾಗಿದೆ. ನಿದರ್ಶನಕ್ಕೆ ಹಲಗಲಿಯ ಬೇಡರು ಎನ್ನುವ ಜನಪದ ವೀರಕಾವ್ಯವನ್ನೇ ನೋಡಬಹುದಾಗಿದೆ. ಇಲ್ಲಿ ವಸಾಹತುಶಾಹಿಯ ಆಕ್ರಮಣಶೀಲತೆಗೆ ಪ್ರತಿರೋಧವೊಂದು ರೂಪುಗೊಂಡಿರುವುದನ್ನು ಅದು ಜನಪದ ಕಥನಕ್ರಮದ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದಾಗಿದೆ. ಪಾಶ್ಚಾತ್ಯರ ದೃಷ್ಟಿಕೋನದಿಂದ ಮೈದೆಳೆದ ಪೌರಾತ್ಯವಾದವೊಂದು ಮುನ್ನೆಲೆಗೆ ಬಂದ ಪಾಶ್ಚಾತ್ಯ ಸಿದ್ಧಾಂತಗಳಿಂದ ದೇಶೀ ಭಾಷೆಗಳಲ್ಲಿ ಹುಟ್ಟಿಕೊಂಡ ಸಾಹಿತ್ಯಿಕ ಪ್ರಕಾರಗಳಿಗಿಂತ ಭಿನ್ನವಾದ ಅಪ್ಪಟ ದೇಶೀಚಿಂತನೆಯ ಹೊಳಹುಗಳನ್ನು ಇಲ್ಲಿ ಕಾಣಬಹುದಾಗಿದೆ. ಮಧ್ಯಯುಗೀನ ಕಾಲದ ಕುಮಾರರಾಮನ ಕುರಿತಾದ ವೀರ ಸಾಹಿತ್ಯವನ್ನು ಹೊರೆತುಪಡಿಸಿದರೆ ಬಹುಪಾಲು ವೀರ ಸಾಹಿತ್ಯವು ಸೃಷ್ಟಿಗೊಂಡುದು ವಸಾಹತುಶಾಹಿ ಕಾಲಘಟ್ಟದಲ್ಲಾಗಿರುವುದು ವಿಶೇಷ. ಬ್ರಿಟಿಷರ ಆಳ್ವಿಕೆಯೊಂದಿಗೆ ಬದಲಾಗುತ್ತಿದ್ದ ಭಾರತೀಯ ಸಮಾಜದ ತಲ್ಲಣಗಳನ್ನು ಹಿಡಿದಿಡುವಲ್ಲಿ ಈ ಸಾಹಿತ್ಯ ಪ್ರಕಾರವು ಯಶಸ್ವಿಯಾಗಿದೆ. ನಾವು ಅಂದಿನ ಸಮಾಜ ಸುಧಾರಕರ ಚಿಂತನೆಗಳಿಗಿಂತ ಭಿನ್ನವಾದ, ರಾಷ್ಟ್ರೀಯವಾದ ಚಿಂತನಾ ನೆಲೆಗಳಿಗಿಂತ ವಿಶಿಷ್ಟವಾದ ಹೊಳಹುಗಳನ್ನು ಈ ಅಧ್ಯಯನ ನೀಡುತ್ತದೆ.

ಸಬಾಲ್ಟ್ರನ್ ಅಧ್ಯಯನದ ನೆಲೆಯಲ್ಲಂತು ಇದಕ್ಕಿರುವ ಅಧ್ಯಯನದ ಸಾಧ್ಯತೆ ಮತ್ತು ಅವಕಾಶಗಳು ಅಧಿಕವಾಗಿವೆ. ನಿರ್ಲಕ್ಷಿತ ಸಮುದಾಯಗಳ ಧ್ವನಿ ಮತ್ತು ಪ್ರತಿಭಟನೆ ವಿಚ್ಛಿನ್ನಗೊಳ್ಳ ತೊಡಗಿದ ಭಾರತೀಯ ಸಮಾಜದ ವೃತ್ತಿ ಸಮುದಾಯಗಳ ಬದುಕು ಪಾಳೆಯಗಾರರ, ಸ್ಥಳೀಯ ಸಂಸ್ಥಾನಿಕರ ಸಾಮ್ರಾಜ್ಯಶಾಹಿ ವಿರುದ್ಧದ ಹೋರಾಟಗಳು ಜನಪದ ವೀರಕಾವ್ಯಗಳಲ್ಲಿ ನಿರೂಪಿತವಾಗಿವೆ.

ಹಾಗಾಗಿ ವಸಾಹತುಶಾಹಿ ಕಾಲಘಟ್ಟದ ವಿದ್ಯಾಮಾನಗಳನ್ನು ಸಾಂಸ್ಕೃತಿಕ ಸ್ಥಿತ್ಯಂತರಗಳ ಸ್ವರೂಪವನ್ನು ಸಬಾಲ್ಟ್ರನ್ ನೆಲೆಯಲ್ಲಿ ಅರ್ಥೈಸುವ ಪ್ರಯತ್ನ ಪ್ರಸ್ತುತ ಅಧ್ಯಯನದ ಮೂಲಕ ನಡೆಯುವುದು ಅರ್ಥಪೂರ್ಣವಾದುದೆಂದು ನಂಬಲಾಗಿದೆ. ಈಗಾಗಲೇ ಸಂಗ್ರಹಗೊಂಡ ಜಾನಪ ವೀರಕಾವ್ಯಗಳು ಅಂದರೆ ವೀರಕಾವ್ಯದ ಮತ್ತೊಂದು ರೂಪವಾದ ಲಾವಣಿಗಳನ್ನು ಪರೀಶೀಲಿಸಿ ಅವುಗಳನ್ನು ವರ್ಗೀಕರಿಸಿಕೊಳ್ಳಲಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಈ ಕೆಳಗಿನಂತೆ ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗುತ್ತದೆ.

ಲಾವಣಿಯಲ್ಲಿ ಕ್ರಾಂತಿಕಾರಿ ವಿರುಪಣ್ಣಗೌಡ ಎಂಬ ಲೇಖನವನ್ನು ಪ್ರಕಟಿಸಿದವರು ಶಂಕರಗೌಡ

ಬೀರಾದಾರ. ವಿರುಪಣ್ಣಗೌಡ ಈಚಿನವನು. ಲಾವಣಿಗಳ ಸಾಲಿನಲ್ಲಿ ಅವನದು ಹೊಸ ಲಾವಣಿ. ಇತರ ಚಾರಿತ್ರಿಕ ಲಾವಣಿಗಳಂತೆಯೇ ಇದೂ ಸಹ ಹೋರಾಟಗಾರನೊಬ್ಬನ ದಿಟ್ಟತನ ಮತ್ತು ಅವನ ದುರಂತಾಂತ್ಯವನ್ನು ಹೇಳುತ್ತದೆ. ಕ್ರಿ.ಶ. ೧೮೫೮ರ ಸುಮಾರಿಗೆ ಇಂಗ್ಲಿಷರ ವಿರುದ್ಧ ಕ್ರಾಂತಿ ಮಾಡಿದ ಸುರಪುರ ಸಂಸ್ಥಾನದ ರಾಜಾ ವೆಂಕಟಪ್ಪನಾಯಕನಂತೆಯೇ ೧೯೪೮ರ ಸುಮಾರಿಗೆ ಅದೇ ತಾಲ್ಲೂಕಿನ ರಾಜನಕೋಳೂರು ಗ್ರಾಮದ ವಿರುಪಣ್ಣ ಗೌಡನು ಹೈದ್ರಾಬಾದ್‌ನ ರಜಾಕಾರರ ವಿರುದ್ಧ ಹೋರಾಟ ನಡೆಸಿ ಹಿತವಂಚಕರ ದೆಸೆಯಿಂದಾಗಿ ಶತ್ರುಗಳ ಕೈಯಲ್ಲಿ ಸಿಕ್ಕು ಹತನಾದ. ಈ ಸತ್ಯ ಘಟನೆಯನ್ನು ಲಾವಣಿ ಮಾಡಿ ಹಾಡಿರುವವನು ಅಲ್ಲಾಳ ವೆಂಕಪ್ಪ ಎಂಬ ಕವಿ.

ಭಾರತದ ಸ್ವಾತಂತ್ರ್ಯಾನಂತರ ಹೈದ್ರಾಬಾದ್ ನಿಜಾಮನು ಜವಾಹರಲಾಲ್ ನೆಹರೂ ಸರ್ಕಾರಕ್ಕೆ ತಲೆನೋವಾಗಿ ಪರಿಣಮಿಸಿದುದು ಚರಿತ್ರೆಯ ವಿಷಯ. ಆಗ ಅವನ ಸಂಸ್ಥಾನದಲ್ಲಿ ಹಿಂದೂಗಳು ಮತ್ತು ಹಿಂದೂಯೇತರರ ನಡುವೆ ವಿರಸ ತಲೆದೋರಿ ಪರಸ್ಪರರು ಹಿಂಸಾಚಾರದಲ್ಲಿ ತೊಡಗುವಂತಹ ವಾತಾವರವಣ ಸೃಷ್ಟಿಯಾಯಿತು. ರಜಾಕಾರರ ದೌರ್ಜನ್ಯ, ಅತ್ಯಾಚಾರಗಳನ್ನು ಸಹಿಸದ ವಿರುಪಣ್ಣನಂತಹ ಧೀರನು ಅವರ ವಿರುದ್ಧ ದಂಗೆಯ ಕಾರ್ಯಾಚರಣೆ ಕೈಗೊಂಡ. ಇವನ ಇಂತಹ ಸವಾಲನ್ನು ಕಂಡು ರೇಗಿದ ನಿಜಾಮನ ಮಂತ್ರಿ ಖಾಸಿಂ ರಜ್ವಿಯು ವಿರುಪಣ್ಣನನ್ನು ಕಂಡಲ್ಲಿಯೇ ಕಡಿಯಿರೆಂದು ತನ್ನವರಿಗೆ ಆಜ್ಞೆ ನೀಡಿದ. ಪರಿಣಾಮವಾಗಿ ಗೌಡನು ತಲೆ ತಪ್ಪಿಸಿಕೊಂಡ. ರಜಾಕಾರರು ಗೌಡನ ಸ್ನೇಹಿತ ರಾಮಾಚಾರಿಯನ್ನು ಉಪಾಯದಿಂದ ತಮ್ಮ ಕಡೆಗೆ ಒಲಿಸಿಕೊಂಡರು. ಅವನ ಮೂಲಕ ತಾವು ಸಂಚು ಮಾಡಿದ ಜಾಗಕ್ಕೆ ಗೌಡನು ಬರುವಂತೆ ಮಾಡಿದರು. ಆಗ ***ರಜಾಕಾರ ಫೌಜ ಸುತ್ತವರಿದ ರಾವು ಹಿಡಿದಂಗ ಚಂದ್ರಗ, ಗನ್ನ ಮಿಷನ್ನು ತುಬಾಕಿ ಹಚ್ಯಾರ ದಡ ದಡ ಸಪ್ಪಳಾಗ*** ಹೀಗೆ ಗುಂಡು ಹಾರಿಸಿ ಗೌಡನನ್ನು ಕೊಂದು ಹಾಕಿದರು. ಹೈದ್ರಾಬಾದ್ ಕರ್ನಾಟಕದ ಚರಿತ್ರೆಯನ್ನು ಬರೆಯುವಾಗ ಇಂತಹ ಘಟನೆಗಳನ್ನು ನಿಖರವಾಗಿ ದಾಖಲಿಸುವುದು ಅಗತ್ಯ. ಕರ್ನಾಟಕದ ಹಲವಾರು ಸ್ವಾತಂತ್ರ್ಯ ಹೋರಾಟಗಾರರ ಸಾಲಿಗೆ ಈತನನ್ನು ಸೇರಿಸಬೇಕಾಗುತ್ತದೆ.

ಬೀದರ ಜಿಲ್ಲೆಯಲ್ಲಿ ಬರುವ ರಾಮಚಂದ್ರ ವೀರಪ್ಪ ಎಂಬಾತನು ಈ ವಿರುಪಣ್ಣ ಗೌಡನಂತೆ ರಜಾಕಾರರ ವಿರುದ್ಧ ಹೋರಾಡಿದ ವೀರ. ಹರಿಜನನಾಗಿದ್ದ ರಾಮಚಂದ್ರನು ಒಬ್ಬ ಮಹಿಳೆಯ ಮಾನವನ್ನು ಉಳಿಸಲೋಸುಗ ಏಕಾಂಗಿಯಾಗಿ ೨೫ ಜನ ರಜಾಕಾರರೊಂದಿಗೆ ಹೋರಾಡಿದವನು. ಹೋರಾಟದಲ್ಲಿ ಕರುಳು ಹೊರಬಿದ್ದು ನೆಲಕ್ಕೆ ಬಿದ್ದ ಮೇಲೆ ಆತನು ಸತ್ತನೆಂದು ತಿಳಿದು ರಜಾಕಾರರು ಹೊರಟು ಹೋದರಂತೆ. ಆತನಿಗೆ ೨೫ ವರ್ಷ ಕಠಿಣ ಶಿಕ್ಷೆ ಆಗಿದ್ದು ಹೈದ್ರಾಬಾದ್‌ನ ಜೈಲಿನಲ್ಲಿದ್ದನೆಂದು ಬರೆಯುತ್ತಾರೆ ಪಾಟೀಲ್‌ಪುಟ್ಟಪ್ಪ. ರಜಾಕಾರರ ವಿರುದ್ಧ ಪ್ರತಿಭಟಿಸಿದವರಲ್ಲಿ ರಾಮಚಂದ್ರ, ವೀರಪ್ಪ ಇದ್ದುದ್ದನ್ನು ಚರಿತ್ರೆಯಲ್ಲೂ ದಾಖಲಿಸಿದೆ. ಇಂತಹ ಎಷ್ಟೋ ಮಂದಿ ವೀರರ ನೆನಪುಗಳನ್ನು ಲಾವಣಿಗಳು ಉಳಿಸಿಕೊಂಡು ಬಂದಿವೆ.

ಕ್ರಿ.ಶ. ೧೮೫೭ರ ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ಇಂಗ್ಲಿಷರು ಜಾರಿಗೆ ತಂದ ಶಸ್ತ್ರ ನಿಷೇಧ ಕಾಯಿದೆಯ ನಿಶಸ್ತ್ರೀಕರಣ ಶಾಸನ, ಶಸ್ತ್ರಾಸ್ತ್ರ ಶಾಸನ ಸ್ವಾತಂತ್ರ್ಯ ಪ್ರಿಯರ ಮೇಲೆ ಅಪಾರ ಪರಿಣಾಮವನ್ನುಂಟು ಮಾಡಿತು. ಈ ಶಾಸನದ ವಿರುದ್ಧ ತಮ್ಮ ಪ್ರತಿಭಟನೆಯ ಸ್ವರೂಪದ ಕ್ರೋಧವನ್ನು ವ್ಯಕ್ತ ಪಡಿಸಿದವರಲ್ಲಿ ಕರ್ನಾಟಕದ ರಜಪೂತರೆಂದು ಕರೆಯಿಸಿಕೊಳ್ಳುವ ಬೇಡ ಸಮುದಾಯದವರು ಮುಖ್ಯರು. ತಮ್ಮ ಜೀವನವೃತ್ತಿ ಸಂಸ್ಕೃತಿ ಪ್ರವೃತ್ತಿಗಳಿಗೆ ಸಲ್ಲುವ ಬೇಟೆ, ಹೋರಾಟ, ಸಾಹಸ, ಪರಾಕ್ರಮಗಳಿಗೆ ಇದರಿಂದ ಅಡ್ಡಿ ಹಾಗೂ ಅಪಮಾನಗಳು ಉಂಟಾಗುತ್ತವೆ ಎಂದು ಭಾವಿಸಿದ ಆ ಸಮುದಾಯದವರು ಇಂಗ್ಲಿಷರು ಹೇರಿದ ಇಂತಹ ನಿಬಂಧನೆಯನ್ನು ಕಿತ್ತೊಗೆಯಲು ಅದರ ಪರಿಣಾಮವನ್ನು ಎದುರಿಸಲು ಸಿದ್ಧರಾದರು. ಅವರ ಹೋರಾಟವನ್ನು ಹಲಗಲಿಯ ಬೇಡರ ದಂಗೆ ಎಂಬುದಾಗಿ ಚರಿತ್ರೆಯಲ್ಲಿ ಗುರುತಿಸಲಾಗಿದೆ. ಇದು ಹಲಗಲಿ ಕತ್ತಿಯ ಕದನ ನಡೆದುದು ಕ್ರಿ.ಶ. ೧೮೫೮ರಲ್ಲಿ. ಆದರೆ ಗದ್ಗೀಮಠ ಅವರು ಈ ಘಟನೆಯು ಕ್ರಿ.ಶ. ೧೮೬೦ರಲ್ಲಿ ನಡೆದಿರಬಹುದೆಂದು ಹೇಳಿದ್ದಾರೆ. ಈ ದಂಗೆಯನ್ನು ಆಧರಿಸಿ ಸೃಷ್ಟಿಯಾದ ಲಾವಣಿಗಳು ವಾಸ್ತವ ಸಂಗತಿಗಳನ್ನು ಪರಿಚಯಿಸಲು ಸಮರ್ಥವಾಗಿವೆಯೆಂಬುದನ್ನು ಒಪ್ಪಬೇಕು. ಗದ್ಗೀಮಠ, ಜವರೇಗೌಡ, ಕ್ಯಾತನಳ್ಳಿ ರಾಮಣ್ಣ ಮೊದಲಾದವರು ಈ ಲಾವಣಿಯ ಪೂರ್ತಿ ಪಾಠವನ್ನು ತಮ್ಮ ಸಂಗ್ರಹದಲ್ಲಿ ಕೊಟ್ಟಿದ್ದಾರೆ. ಕೆಲವರು ಈ ಲಾವಣಿಯ ಆಯ್ದ ಭಾಗಗಳನ್ನು ತಮ್ಮ ಕೃತಿಗಳಲ್ಲಿ ಪ್ರಕಟಿಸಿದ್ದಾರೆ. ಈ ಲಾವಣಿಯ ಕುರಿತು ವ್ಯಾಪಕ ಚರ್ಚೆ ನಡೆದಿದೆ. ದಾಖಲೆಗಳು ಇದಕ್ಕೆ ಪೂರಕವಾಗಿವೆ. ಈ ಲಾವಣಿಯನ್ನಾಧರಿಸಿ ಮಾಸ್ತಿ ವೆಂಕಟೇಶ ಐಯಂಗಾರ್, ಕಂಬಾರ್ ಮೊದಲಾದವರು ನೀಡಿರುವ ವಿವರಣೆಗಳು ಗಮನಸೆಳೆಯುವಂತಹವು.

ಈ ಹಲಗಲಿ ಬಂಟರ ಹತಾರ ಕದನದಲ್ಲಿ ಬರುವ ಪಾತ್ರಗಳಲ್ಲಿ ಪೂಜಾರಿ ಹನುಮ, ರಾಮ, ಬಾಲ, ಜಡಗ ಮೊದಲಾದವರು ಬೇಡರ ನಾಯಕರು. ಹೆಬಲಕ(ವಿಲಿಯಂ ಹೆನ್ರಿ ಹ್ಯಾವಲಾಕ್) ಮತ್ತು ಕಾರ್(ವಿಲಿಯಂ ಅಲೆಕ್ಸಾಂಡರ್ ಕೆರ್) ಸಾಹೇಬರು ಆಂಗ್ಲಿ ಅಧಿಕಾರಿಗಳು. ಮುಧೋಳ ತಾಲ್ಲೂಕಿನಲ್ಲಿರುವ ಹಲಗಲಿಯಲ್ಲಿ ಇಂದಿಗೂ ಕೆಲವು ಚಾರಿತ್ರಿಕ ಎಡೆಗಳು ಉಳಿದುಬಂದಿರುವುದನ್ನು ಗುರುತಿಸಲಾಗಿದೆ. ಉದಾಹರಣೆಗೆ ಅಲ್ಲಿಯ ಕಡುಗಲಿಗಳ ಕತ್ತಿಯ ಕಣವು ಹಲಗಲಿ ಕೆರೆಯ ಮರಡಿಯ ಕೆಳ ಓರೆಯ ಅಗಸೆಯ ಮುಂದಿನ ಪಟಾಗಣವೆಂದು ಜನರು ಈಗಲೂ ಕರೆಯುತ್ತಾರೆ. ತಮ್ಮ ಆಜನ್ಮಸಿದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಹಿನ್ನೆಲೆಯಲ್ಲಿ ತಿ.ತಾ. ಶರ್ಮ ಅವರು ಬರೆದಿರುವುದು ಹೀಗೆ. *ಕುರುಕ್ಷೇತ್ರದ ಪವಿತ್ರ ನಾಮೋಚ್ಚಾರದಿಂದ ಪ್ರಖ್ಯಾತವೆನಿಸಿರುವ ವೀರಭೂಮಿಯೆಂದು ವಿಶ್ವತೋಮುಖವಾಗಿ ಹೊಗಳಿಸಿಕೊಂಡ ಭರತಖಂಡವು ಷಂಡರ ಖಂಡವಾಯಿತು.* ಹೀಗೆ ವಸಾಹತುಶಾಹಿ ಕಾಲಘಟ್ಟದಲ್ಲಿ ಅದರ ಆಳ್ವಿಕೆಗೆ ಸ್ಥಳೀಯ ಹೋರಾಟಗಳು ಹೇಗೆ ಪ್ರತಿರೋಧವನ್ನು ಒಡ್ಡಿದವು ಮತ್ತು ಇವು ಹೇಗೆ ಮುಂದೆ ರಾಷ್ಟ್ರೀಯ

ಹೋರಾಟದ ಮಹಾನದಿಗೆ ಪೂರಕ ಧಾರೆಗಳಾದವು ಎಂಬುದನ್ನು ಮತ್ತದರ ಸ್ವರೂಪವನ್ನು ಈ ಅಧ್ಯಯನದಲ್ಲಿ ಅರಿಯಲು ಪ್ರಯತ್ನಿಸಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

### ಕಾಲವ್ಯಾಪ್ತಿ

ಲಾವಣಿ ಸಾಹಿತ್ಯವು ಗ್ರಾಮಾಂತರ ಪ್ರದೇಶದ ಜನತೆಯನ್ನು ರಾಷ್ಟ್ರೀಯ ಚಳವಳಿಯೆಡೆಗೆ ಆಕರ್ಷಿಸುವಲ್ಲಿ ಕೆಲಮಟ್ಟಿಗೆ ಪೂರಕವಾದವೆಂದೇ ಹೇಳಬಹುದು. ೧೮೫೭ರ ಹಲಗಲಿ ಬೇಡರ ದಂಗೆ ಮತ್ತು ೧೭೮೫ರ ಸಂಗ್ಯಾನ ಅಪರಾಧ ಮತ್ತು ಸಾವು ಈ ಎರಡೂ ಲಾವಣಿಗಳ ರಚನೆಯ ಕಾಲಕ್ಕನುಗುಣವಾಗಿ ಸರಿಸುಮಾರು ೧೭೮೦ ರಿಂದ ೧೯೪೭ರ ಮಧ್ಯದ ಒಂದು ಅವಧಿಯಲ್ಲಿ ತುಂಬಾ ಹೇರಳವಾದ ಲಾವಣಿ ಸಾಹಿತ್ಯ ರಚನೆಯಾಗಿರುವುದು. ಯಾಕೆಂದರೆ ಈ ಅವಧಿಯಲ್ಲಿ ಭಾರತೀಯರನ್ನು ಬ್ರಿಟಿಷರ ವಿರುದ್ಧ ಸಂಘಟಿಸಿ ಬೃಹತ್ ಪ್ರಮಾಣದ ಪ್ರತಿಭಟನಾಕಾರರನ್ನು ಚಳವಳಿಯಲ್ಲಿ ಸೇರಿಸಿಕೊಳ್ಳುವ ಸಲುವಾಗಿ ಲಾವಣಿ ಸಾಹಿತ್ಯವನ್ನು ಸ್ಥಳೀಯರು ಮಾಧ್ಯಮವನ್ನಾಗಿ ಬಳಸಿಕೊಂಡರು. ಹಾಗಾಗಿ ಈ ಒಂದು ಕಾಲಾವಧಿಯಲ್ಲಿ ಸರಿಸುಮಾರು ಲಾವಣಿಗಳು ರಚನೆಯಾಗಿರುವುದು ಕಂಡುಬರುತ್ತದೆ. ನನ್ನ ಅಧ್ಯಯನದ ಮಿತಿಯು ವಸಾಹತುಶಾಹಿಯ ಕಾಲದಲ್ಲಿ ರಚನೆಯಾಗಿರುವ ಬ್ರಿಟಿಷ ವಿರೋಧಿ ಚಳವಳಿಗಳ ಕುರಿತಾದ ಲಾವಣಿಗಳನ್ನು ಮಾತ್ರ ನಾನು ನನ್ನ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ನನ್ನ ಅಧ್ಯಯನದ ಶೀರ್ಷಿಕೆ ಜನಪದ ಲಾವಣಿಗಳ ಮುಖೇನ ವಸಾಹತುಶಾಹಿಗೆ ಪ್ರತಿರೋಧದ ನೆಲೆಗಳು ಆಗಿರುವುದರಿಂದ ನನ್ನ ಅಧ್ಯಯನದ ಕಾಲ ವ್ಯಾಪ್ತಿಯು ವಸಾಹತುಶಾಹಿಯ ಸಂದರ್ಭದಲ್ಲಿ ಆಗಿರುವುದರಿಂದ ನನ್ನ ಅಧ್ಯಯನದ ಮೂಲ ಆಕರಗಳು ವಸಾಹತುಶಾಹಿ ಸಂದರ್ಭದಲ್ಲಿ ರಚನೆಯಾಗಿರುವ ಸ್ಥಳೀಯ ಲಾವಣಿ ಸಾಹಿತ್ಯ ಮಾತ್ರ. ಅದರಲ್ಲಿಯೂ ಬ್ರಿಟಿಷ ವಿರೋಧಿ ಮತ್ತು ಸ್ವತಂತ್ರ ಸಂಗ್ರಾಮದ ವಿಷಯವಸ್ತುಗಳನ್ನು ಒಳಗೊಂಡಿರುವ ಲಾವಣಿಗಳನ್ನು ಮಾತ್ರ ನನ್ನ ಅಧ್ಯಯನದ ಕಾಲ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದೇನೆ.

### ಪ್ರದೇಶ ವ್ಯಾಪ್ತಿ

ಈ ಅಧ್ಯಯನಕ್ಕಾಗಿ ಕರ್ನಾಟಕದ ಕೆಲವು ಪ್ರಾತಿನಿಧಿಕ ಭಾಗಗಳನ್ನು ಬಳಸಿಕೊಳ್ಳಲಾಗಿದೆ. ಸ್ವಾತಂತ್ರ್ಯ ಹೋರಾಟ ಇಡೀ ದೇಶದ ನಾನಾ ಮೂಲೆಗಳಲ್ಲಿಯೂ ನಡೆದಿರುತ್ತದೆ. ಆದ್ದರಿಂದ ಸ್ವಾತಂತ್ರ್ಯ ಸಂಗ್ರಾಮದ ಮಾಧ್ಯಮವಾಗಿ ಶಿಷ್ಟ ಸಾಹಿತ್ಯವೆಂತೋ ಜಾನಪದ ಸಾಹಿತ್ಯ ಕೂಡಾ ದೇಶದ ನಾನಾ ಮೂಲೆಗಳಲ್ಲಿ ಸೃಷ್ಟಿಯಾಗಿರುತ್ತದೆ. ನನ್ನ ಅಧ್ಯಯನು ಕನ್ನಡ ಜನಪದ ಲಾವಣಿಗಳಿಗೆ ಸೀಮಿತವಾದುದಾಗಿದೆ.

### ಆಕರ ವ್ಯಾಪ್ತಿ

ಈ ಅಧ್ಯಯನದಲ್ಲಿ ಈ ಮುಂಚೆ ಸಂಗ್ರಹಿಸಿ ಸಂಪಾದಿಸಿದ ಲಾವಣಿಗಳನ್ನು ಮಾತ್ರ ಬಳಸಿಕೊಂಡಿದ್ದೇನೆ. ಈ ಎಲ್ಲಾ ಲಾವಣಿಗಳು ಪ್ರಕಟವಾಗಿರುವಂತಹವು. ಅಂತಹ ಕೃತಿಗಳಲ್ಲಿ

ಅಧ್ಯಯನದ ಮೂಲ ತಳಪಾಯದ ಸಂಗ್ರಹವೆ ಆಗಿರುವ ಫ್ಲೀಟ್ ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳೂ ಒಂದು. ಇದನ್ನು ಕ್ಯಾತನಳಿ ರಾಮಣ್ಣನವರು ಸಂಗ್ರಹಿಸಿದ್ದಾರೆ. ಸ್ವಾತಂತ್ರ್ಯ ಸಂಗ್ರಾಮದ ಗೇಯ ಗೀತೆಗಳು ಸಂಗ್ರಹವನ್ನು ಸಂಪಾದಿಸಿದವರು ಸೂರ್ಯನಾಥ್ ಕಾಮತ್ ಅವರು. ಧೀರ ಟಿಪ್ಪುವಿನ ಲಾವಣಿಗಳನ್ನು ಲಿಂಗದೇವರ ಹಳೆಮನೆಯವರು ಸಂಗ್ರಹಿಸಿರುತ್ತಾರೆ. ರಾಷ್ಟ್ರೀಯ ಲಾವಣಿಗಳು ಶಿವಾನಂದ ಗಬ್ಬಣ್ಣನವರ್ ಸಂಗ್ರಹಿಸಿರುತ್ತಾರೆ. ಕಿತ್ತೂರಿನ ಕುರಿತಾದ ಲಾವಣಿಗಳು ಸಂಗೊಳ್ಳಿ ರಾಯಣ್ಣನ ಲಾವಣಿಗಳನ್ನು ಲಿಂಗಣ್ಣ ಸಣ್ಣಕ್ಕಿ ಅವರು ಸಂಗ್ರಹಿಸಿರುತ್ತಾರೆ. ಹುಲಕುಂದ ಭೀಮ ಕವಿಯ ಲಾವಣಿ ಸಾಹಿತ್ಯ ಚನ್ನಕ್ಕ ಪಾವಟೆ ಅವರು ಸಂಗ್ರಹಿಸಿರುತ್ತಾರೆ. ಹಳೆಯ ಲಾವಣಿಗಳು ವೀರೇಶ ಬಡಿಗೇರ ಅವರು, ಸರ್ಜಪ್ಪನಾಯಕನ ಕಥನ ಕಾವ್ಯವನ್ನು ವಿರೂಪಾಕ್ಷ ಪೂಜಾರ ಹಳಿ ಅವರು ಸಂಗ್ರಹಿಸಿದ್ದಾರೆ. ಅದರ ಜೊತೆಗೆ ಅಧ್ಯಯನಕ್ಕೆ ಪೂರಕವಾಗಿ ಬಿಡಿ ಬಿಡಿಯಾಗಿ ಲಾವಣಿಗಳನ್ನು ಬೇರೆ ಬೇರೆ ಆಕರಗಳಿಂದ ಆಯ್ದುಕೊಂಡಿದ್ದೇನೆ.

## ೧.೩. ಅಧ್ಯಯನ ವಿಧಾನ

ಅಧ್ಯಯನದ ಸ್ವಭಾವವನ್ನು ಅನುಲಕ್ಷಿಸಿ ಅದಕ್ಕೆ ಚಾರಿತ್ರಿಕ ಪದ್ಧತಿಯನ್ನು ಅನ್ವಯಿಸಿಕೊಳ್ಳಲಾಗಿದೆ. ವಸಾಹತುಶಾಹಿಗಳ ವಿರುದ್ಧ ನಡೆದ ಪ್ರತಿಭಟನೆಗಳ ವಿವಿಧ ನೆಲೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಲಾವಣಿಗಳು ಸಂವಹನ ಮಾಧ್ಯಮವಾಗಿ ರಾಷ್ಟ್ರೀಯ ಚಳವಳಿಗೆ ಪೂರಕವಾದವು ಎಂಬ ಅಂಶವನ್ನು ವಿಶ್ಲೇಷಿಷಸುವ ಭಾಗವಾಗಿ ಅಧ್ಯಯನ ವಿಧಾನವನ್ನು ಅನ್ವಯಿಸಿಕೊಳ್ಳಲಾಗಿದೆ. ಸ್ಥಳೀಯ ನೆಲೆಯ ಇಂತಹ ಪ್ರತಿಭಟನೆಯ, ಪ್ರತಿರೋಧದ ನೆಲೆಗಳು, ಮತ್ತದರ ಸ್ವರೂಪವನ್ನು ವಸಾಹತುಶಾಹಿ ಕಾಲಘಟ್ಟದ ಆಳ್ವಿಕೆ, ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ ಮತ್ತು ಅದೇ ತಾನೆ ಕಾಲಿಡುತ್ತಿದ್ದ ಆಧುನಿಕ ಮನೋಭಾವದ ನೆಲೆಯಲ್ಲಿ ಚಾರಿತ್ರಿಕ ಹಿನ್ನೆಲೆಯ ಆಶಯದ ಮೂಲಕ ವ್ಯಾಖ್ಯಾನಿಸುವ ಪ್ರಯತ್ನದ ಭಾಗವಾಗಿ ಅಧ್ಯಯನದ ಕ್ರಮವನ್ನು ಅಳವಡಿಸಿಕೊಳುವ ಭಾಗವಾಗಿ ಅಧ್ಯಯನ ವಿಧಾನ ರೂಪಿಸಿಕೊಳ್ಳಲಾಗಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ಲಾವಣಿಗಳು ಚಾರಿತ್ರಿಕ ಸಂದರ್ಭದ ಸಂಗತಿಗಳನ್ನು ನಿರೂಪಿಸುತ್ತಿರುವುದರಿಂದ ಚರಿತ್ರೆಯ ಸಂಗತಿಗಳನ್ನೂ ಮತ್ತು ಲಾವಣಿಯ ಕಥನಾತ್ಮಕ ಸಂಗತಿಗಳನ್ನು ತಾಳೆ ಹಾಕುವ ಮತ್ತು ಸತ್ಯವನ್ನು ನಿರೂಪಿಸುವ ಬಗೆಯನ್ನು ತೌಲನಿಕವಾಗಿ ಮಾಡುವ ಪ್ರಯತ್ನ ಕೂಡಾ ಇಲ್ಲಿದೆ. ಲಾವಣಿಗಳ ರಚನಾ ಕ್ರಮದ ಸ್ವರೂಪವನ್ನು ಇಲ್ಲಿ ಚರ್ಚಿಸುವ ಯತ್ನ ಮಾಡಲಾಗಿದೆ. ದಲಿತ ಹಾಗೂ ಎಡ ಪಂಥೀಯ ನೆಲೆಯ ಅಂದರೆ ದುಡಿಯುವ ವರ್ಗದ ದೃಷ್ಟಿಕೋನದಿಂದಲೂ ಲಾವಣಿ ಸಾಹಿತ್ಯವನ್ನು ಅರ್ಥೈಸುವ ಪ್ರಯತ್ನ ಮಾಡಲಾಗಿದೆ.

## ೧.೪. ಅಧ್ಯಯನದ ಸಂಯೋಜನೆ

ಸಂಗ್ರಹಿಸಿಕೊಂಡಿರುವ ಲಾವಣಿಗಳು ಹಾಗೂ ವಿಷಯ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಎಂಟು ಅಧ್ಯಾಯಗಳಾಗಿ ವರ್ಗೀಕರಿಸಲಾಗಿದೆ. ಮೊದಲ ಅಧ್ಯಾಯ

ಅಧ್ಯಯನದ ಉದ್ದೇಶ ವ್ಯಾಪ್ತಿ, ಮಹತ್ವ, ಅಧ್ಯಯನದ ವೈಧಾನಿಕತೆ ಮುಂತಾದವುಗಳನ್ನು ಒಳಗೊಂಡಿದೆ. ಎರಡನೆಯ ಅಧ್ಯಾಯವು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ. ಈ ಅಧ್ಯಾಯದಲ್ಲಿ ನನ್ನ ಅಧ್ಯಯನದ ವಿಷಯ ವ್ಯಾಪ್ತಿಗೆ ಸಂಬಂಧಿಸಿದ ಹಾಗೆ ಪ್ರಕಟಗೊಂಡಿರುವ ಪೂರಕ ಸಾಮಾಗ್ರಿಗಳಾದ ವಿಮರ್ಶಾಕೃತಿಗಳು ಮತ್ತು ವಿಮರ್ಶಾಲೇಖನಗಳನ್ನು ಸಮೀಕ್ಷೆ ಮಾಡಿ ಅವುಗಳು ಒಳಗೊಂಡಿರುವ ವಿಷಯಗಳನ್ನು ವಿವರಿಸಲಾಗಿದೆ. ಮೂರನೆಯ ಅಧ್ಯಾಯ ಪ್ರತಿರೋಧ ಒಂದು ತಾತ್ವಿಕ ಚರ್ಚೆ ಎಂಬುದಾಗಿದೆ. ಈ ಅಧ್ಯಾಯದಲ್ಲಿ ನನ್ನ ಅಧ್ಯಯನದ ಪರಿಕಲ್ಪನೆಯಾದ ಪ್ರತಿರೋಧ ಎಂಬ ಪರಿಕಲ್ಪನೆಯನ್ನು ಚರ್ಚಿಸಲಾಗಿದೆ. ಪ್ರತಿರೋಧ ಎಂದರೇನು, ಅದರ ಸ್ವರೂಪ, ಲಕ್ಷಣ, ಅವಶ್ಯಕತೆ ಮುಂತಾದವುಗಳನ್ನು ಒಳಗೊಂಡಿದೆ. ಇದರ ಜೊತೆ ಇಡೀ ಪ್ರಪಂಚದಲ್ಲಿ ಹೇರಿಕೆಯ ಆಳ್ವಿಕೆ, ಪ್ರಭುತ್ವದ ಪ್ರತಿರೋಧದ ಪರಿಣಾಮವಾಗಿ ಬೆಳೆದು ಬಂದ ಚಳವಳಿಗಳು ಹೋರಾಟಗಳು ದಂಗೆಗಳು ಮುಂತಾದವುಗಳ ಪರಂಪರೆಯನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಲಾವಣಿ ಸಾಹಿತ್ಯದ ಪರಿಚಯವಿದೆ. ಲಾವಣಿ ಸಾಹಿತ್ಯದ ಉಗಮ, ಲಾವಣಿ ಪದದ ನಿಷ್ಪತ್ತಿ, ಲಾವಣಿ ಬೆಳೆದು ಬಂದ ಬಗೆ ಅದರ ಲಕ್ಷಣ ಸ್ವರೂಪ ಪ್ರಕಾರಗಳ ಕುರಿತು ವಿಶ್ಲೇಷಿಲಾಗಿದೆ. ಅಧ್ಯಾಯ ಐದು ಲಾವಣಿ ಸಾಹಿತ್ಯ ಪ್ರತಿರೋಧದ ನೆಲೆಗಳು ಎಂಬುದಾಗಿದೆ. ಈ ಅಧ್ಯಾಯದಲ್ಲಿ ನನ್ನ ಅಧ್ಯಯನದ ಮುಖ್ಯ ಭಾಗವಾಗಿರುವ ಲಾವಣಿ ಸಾಹಿತ್ಯದಲ್ಲಿ ಮೂಡಿಬಂದ ಪ್ರತಿರೋಧದ ನೆಲೆಗಳನ್ನು ವಿವರಿಸಲಾಗಿದೆ. ಅವು ಸ್ವಾತಂತ್ರ್ಯ, ರಾಜಕೀಯ, ರಾಷ್ಟ್ರೀಯ, ಸಾಮಾಜಿಕ, ಆರ್ಥಿಕ ಮುಂತಾದವು. ಈ ಅಧ್ಯಾಯದಲ್ಲಿ ಉಪ ಅಧ್ಯಾಯಗಳಾಗಿ ಸ್ವಾತಂತ್ರ್ಯದ ನೆಲೆ, ರಾಜಕೀಯ ನೆಲೆ, ರಾಷ್ಟ್ರೀಯತೆಯ ನೆಲೆ, ಸಾಮಾಜಿಕ ನೆಲೆ, ಆರ್ಥಿಕ ನೆಲೆ ಎಂದು ವಿಂಗಡಿಸಿಕೊಳ್ಳಲಾಗಿದೆ. ಈ ಎಲ್ಲಾ ಅಧ್ಯಾಯಗಳಲ್ಲಿ ರಾಜಕೀಯವಾಗಿ ಬ್ರಿಟಿಷರು ರೂಪಿಸಿದ ಕಾಯಿದೆ, ಕಾನೂನು ಮತ್ತು ರಾಜಕೀಯ ಪದ್ಧತಿಗಳನ್ನು ಕುರಿತು ಚರ್ಚಿಸಲಾಗಿದೆ. ಬ್ರಿಟಿಷರ ಈ ರಾಜಕೀಯ ಪದ್ಧತಿಗಳನ್ನು ವಿರೋಧಿಸಿ ಸ್ಥಳೀಯ ಪ್ರತಿಭಟನೆಕಾರರು ಹೇಗೆ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದರು ಎಂದು ನೋಡಲಾಗಿದೆ. ರಾಷ್ಟ್ರೀಯತೆಯ ನೆಲೆ ರಾಷ್ಟ್ರೀಯತೆ ಎಂದರೇನು, ಅದರ ಉಗಮ, ವಿಕಾಸ ಮುಂತಾದುದರ ಕುರಿತು ಚರ್ಚಿಸಲಾಗಿದೆ. ಆರಂಭದ ಕಾಲಘಟ್ಟದಲ್ಲಿ ಅಂದರೆ ವಸಾಹತುಶಾಹಿ ಪ್ರತಿರೋಧ ರೂಪುಗೊಳ್ಳುತ್ತಿದ್ದ ಹಂತದಲ್ಲಿ ಭಾರತೀಯರಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ಯಾವ ತೆರನಾಗಿದೆಯೆಂದು ಚರ್ಚಿಸಲಾಗಿದೆ. ಸಾಮಾಜಿಕ ನೆಲೆಯಲ್ಲಿ ಸಾಮಾಜಿಕವಾದ ಅಂಶಗಳನ್ನು ಇಟ್ಟುಕೊಂಡು ಸ್ಥಳೀಯ ಪ್ರತಿಭಟನಾಕಾರರು ಹೇಗೆ ಬ್ರಿಟಿಷರ ಜೊತೆ ಹೋರಾಟ ನಡೆಸಿದರೆಂಬ ಅಂಶವನ್ನು ಚರ್ಚಿಸಲಾಗಿದೆ. ಆರ್ಥಿಕ ನೆಲೆಯಲ್ಲಿ ಆರ್ಥಿಕವಾದ ಅಂಶಗಳನ್ನು ಚರ್ಚಿಸಲಾಗಿದೆ. ಬ್ರಿಟಿಷರು ಆರ್ಥಿಕವಾಗಿ ಭಾರತದಲ್ಲಿ ಹೇಗೆ ತಮ್ಮ ಆಡಳಿತವನ್ನು ರೂಪಿಸಿಕೊಂಡರು, ಅವರ ಆರ್ಥಿಕ

ಪದ್ಧತಿಗಳು ಹೇಗೆ ಇದ್ದವು, ಆ ಪದ್ಧತಿಗಳು ಭಾರತೀಯರ ಮೇಲೆ ಹೇಗೆ ಪರಿಣಾಮ ಬೀರಿದವು ಎಂಬ ಅಂಶವನ್ನು ವಿಶ್ಲೇಷಿಸಲಾಗಿದೆ. ಅಧ್ಯಾಯ ಆರರಲ್ಲಿ ಲಾವಣಿಗಳ ಸಾಹಿತ್ಯಿಕ ಸ್ವರೂಪವನ್ನು ವಿವರಿಸುವ ಅಧ್ಯಯನವಾಗಿದೆ. ಲಾವಣಿಯ ಶೈಲಿ, ಭಾಷೆ, ಅದರ ಛಂದಸ್ಸು, ರಚನಾ ಕ್ರಮಗಳನ್ನು ಕುರಿತು ವಿವರಿಸಲಾಗಿದೆ. ಅಧ್ಯಾಯ ಏಳು ಸಮಾರೋಪವಾಗಿದ್ದು ಅದರಲ್ಲಿ ಅಧ್ಯಯನಕ್ಕೆ ಕಂಡುಕೊಂಡ ಫಲಿತಗಳನ್ನು ಗುರುತಿಸಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದ ಪರಾಮರ್ಶನ ಗ್ರಂಥಗಳನ್ನು ನೀಡಲಾಗಿದೆ.



## ಅಧ್ಯಾಯ : ಎರಡು

# ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ನನ್ನ ಪಿಎಚ್.ಡಿ. ಅಧ್ಯಯನದ ವಿಷಯವಾಗಿರುವ ಜನಪದ ಲಾವಣಿಗಳ ಮುಖೇನ ವಸಾಹತುಶಾಹಿಗೆ ಪ್ರತಿರೋಧದ ನೆಲೆಗಳು ಈ ವಿಷಯವನ್ನು ಕುರಿತು ಹೀಗಾಗಲೇ ಪಾಕ್ಷಿಕವಾಗಿ ನಡೆದಿರುವ ಅಧ್ಯಯನದ ಮಾಹಿತಿ ಮತ್ತು ಸಮೀಕ್ಷೆಯನ್ನು ಈ ಅಧ್ಯಾಯದಲ್ಲಿ ಕೊಡಲಾಗುವುದು.

ಸ್ವಾತಂತ್ರ್ಯ ಆಂದೋಲನ, ಸ್ವಾತಂತ್ರ್ಯ ಹೋರಾಟ ಎಂದು ಮಾತನಾಡಿದಾಗ ತಟ್ಟನೆ ಎಲ್ಲರ ಮನದಲ್ಲಿ ಹೊಳೆಯುವುದು ಪ್ರತಿಭಟನೆ, ಚಳವಳಿ, ಸಂಘ, ಗುಂಪು, ಮೆರವಣಿಗೆ,ರಾಷ್ಟ್ರ, ರಾಷ್ಟ್ರಗೀತೆ, ರಾಷ್ಟ್ರ ಧ್ವಜ ಮತ್ತು ರಾಷ್ಟ್ರನಾಯಕರು ಮುಂತಾದವು. ಒಟ್ಟಾರೆ ಅದೊಂದು ಪ್ರತಿಭಟನಾತ್ಮಕ ಸಂದರ್ಭವಾಗಿ ನಮ್ಮ ಗಮನಕ್ಕೆ ಬರುತ್ತದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಅದೊಂದು ಅಭಿಮಾನ ಮತ್ತು ಸ್ವಾಭಿಮಾನ, ಮೌಲ್ಯ ಮತ್ತು ಅಪಮೌಲ್ಯವಾಗಿ ಕಂಡುಬರುತ್ತದೆ. ಈ ಎಲ್ಲಾ ವಿಷಯಗಳು ಕೇವಲ ಅಕ್ಷರಸ್ಥ ಸಮುದಾಯಕ್ಕೆ ಸೀಮಿತವಾದವುಗಳಾಗಿರದೆ ಜನಪದದ ಉಸಿರಾಗಿರುವ ಅನಕ್ಷರಸ್ಥ ಸಮುದಾಯಕ್ಕೂ ಪರಿಚಯವಾಗಿದ್ದಂತಹ ಸಂಗತಿಗಳಾಗಿದ್ದವು. ಜನಸಾಮಾನ್ಯರ ನಾಲಿಗೆಯ ಮೇಲೆ ಸುಳಿದಾಡುತ್ತಿದ್ದವು. ಇದರರ್ಥ ಜನಪದರ ಮಾಧ್ಯಮವಾಗಿರುವ ಜನಪದ ಸಾಹಿತ್ಯದಲ್ಲಿಯೂ ಕೂಡ ಇವು ವಿಷಯವಸ್ತುಗಳಾಗಿದ್ದವು. ಅದರಲ್ಲಿಯೂ ಮುಖ್ಯವಾಗಿ ಜನಪದ ಲಾವಣಿ ಆಗ ತಾನೆ ಹುಟ್ಟಿಕೊಂಡು ಅದೊಂದು ಹೊಸ ಮಾಧ್ಯಮವಾಗಿರುವುದರಿಂದ ಇದು ಸ್ವತಂತ್ರ ಹೋರಾಟದ ಪ್ರಮುಖ ಅಭಿವ್ಯಕ್ತಿಯಾಗಿ ಕಂಡುಬಂತು. ಹೀಗೆ ಜನಪದ ಲಾವಣಿ ಸ್ವತಂತ್ರ ಹೋರಾಟ ಮತ್ತು ಅಲ್ಲಿಯ ಪ್ರತಿರೋಧದ ನೆಲೆಗಳನ್ನು ಅದು ತನ್ನ ಒಡಲಲ್ಲಿ ಹಿಡಿದುಟ್ಟುಕೊಂಡಿರುವುದರಿಂದ ಜನಪದ ಲಾವಣಿಗಳ ಮುಖೇನ ವಸಾಹತುಶಾಹಿಗೆ ಪ್ರತಿರೋಧದ ನೆಲೆಗಳು ಎನ್ನುವ ವಿಷಯವಸ್ತುವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ನನ್ನ ಅಧ್ಯಯನಕ್ಕೆ ಸಂಬಂಧಿಸಿದ ಹಾಗೆ ಅದರಲ್ಲಿಯೂ ವಸಾಹತುಶಾಹಿಗೆ ಪ್ರತಿರೋಧವಾಗಿ ಹುಟ್ಟಿಕೊಂಡ ಲಾವಣಿಗಳ ಕುರಿತು ಹೀಗಾಗಲೇ ಅಧ್ಯಯನ ಮಾಡಿರುವ ಕೆಲವು ಮುಖ್ಯವಾದ ಕೃತಿಗಳನ್ನು ನಾನು ಈ ಸಮೀಕ್ಷೆಗೆ ಒಳಪಡಿಸಿದ್ದೇನೆ. ಈ ಎಲ್ಲಾ ಕೃತಿಗಳ ಒಳತಿರುಳಾದ ಅವುಗಳ ದೃಷ್ಟಿಕೋನ, ಅಧ್ಯಯನದ ವಿಧಾನ, ಆ ಅಧ್ಯಯನಗಳು ಕೊಡುವ ಒಳನೋಟಗಳನ್ನು ಪೂರಕವಾಗಿ ಚರ್ಚಿಸಿ ನನ್ನ ಅಧ್ಯಯನದ ನೆಲೆಯನ್ನು ಕಂಡುಕೊಳ್ಳಲಾಗಿದೆ.

ಪ್ರಸ್ತುತ ಕೇವಲ ಲಾವಣಿಗಳ ಕುರಿತು ಚರ್ಚೆ ಮಾಡಿರುವ ಕೃತಿಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ. ಚರಿತ್ರೆಗೆ ಪ್ರಾಮುಖ್ಯತೆಯನ್ನು ಕೊಟ್ಟಿರುವ ಕೃತಿಗಳನ್ನು ಸಮೀಕ್ಷೆಯಿಂದ ಹೊರಗುಳಿಸಿಕೊಳ್ಳಲಾಗಿದೆ.

**೧. ಸ್ವಾತಂತ್ರ್ಯ ಹೋರಾಟ ಮತ್ತು ಲಾವಣಿ ಸಾಹಿತ್ಯ, ಲೇಖಕರು ಬಸವರಾಜ ಮಲಶೆಟ್ಟಿ**

ನಾನು ನನ್ನದು ಎನ್ನುವ ಸ್ವಾಭಿಮಾನವಿದ್ದಾಗ ತನ್ನ ಬಗ್ಗೆ ಮತ್ತು ತನ್ನ ದೇಶಭಾಷೆಯ ಬಗ್ಗೆ ವೈಭವೀಕರಣ ಮಾಡಿಕೊಳ್ಳುವುದು ಮನುಷ್ಯನ ಹುಟ್ಟುಗುಣ. ಇಂತಹ ಮನೋಭಾವದಿಂದ ಹುಟ್ಟಿಕೊಂಡ ಲಾವಣಿಗಳನ್ನು ಈ ಕೃತಿಯ ಒಳಗಡೆ ಚರ್ಚಿಸಲಾಗಿದೆ. ದೇಶ, ರಾಷ್ಟ್ರ, ರಾಷ್ಟ್ರಮಾತೆ, ರಾಷ್ಟ್ರಧ್ವಜ, ರಾಷ್ಟ್ರನಾಯಕರ ಕುರಿತು ವೈಭವೀಕರಣದ ಸ್ವರೂಪದಲ್ಲಿ ಚರ್ಚಿಸಲಾಗಿದೆ. ಪ್ರಾರಂಭದಲ್ಲಿ ಲೇಖಕರು ಲಾವಣಿಯ ಹುಟ್ಟು ಬೆಳವಣಿಗೆ, ಅದರ ಸ್ವರೂಪ ಲಕ್ಷಣ, ಲಾವಣಿಯ ಮೂಲ ಮುಂತಾದವುಗಳ ವಿವರಣೆಯಿದೆ. ಆನಂತರ ಕನ್ನಡ ಲಾವಣಿ ಕನ್ನಡ ಜನಪದಕ್ಕೆ ಹೇಗೆ ಪ್ರವೇಶ ಪಡೆಯಿತು, ಕನ್ನಡದಲ್ಲಿ ಅದರ ಸ್ಥಾನಮಾನವೇನು ಎನ್ನುವ ಕುರಿತು ಚರ್ಚಿಸಲಾಗಿದೆ. ತದನಂತರ ಕನ್ನಡ ಲಾವಣಿ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ ವಿಷಯಗಳಿಗೆ ಹೇಗೆ ಪ್ರವೇಶ ಮಾಡಿತು ಕೊನೆಗೆ ಹೋರಾಟದ ಒಂದು ಪ್ರಮುಖ ಮಾಧ್ಯಮವಾಗಿ ಜನಸಾಮಾನ್ಯರ ಜನಮನಗಳಲ್ಲಿ ಅದು ಹೇಗೆ ಉಳಿದಿದೆ ಎನ್ನುವುದರ ವಿಶ್ಲೇಷಣೆ ಇಲ್ಲಿದೆ. ಲಾವಣಿ ಸಾಹಿತ್ಯದಲ್ಲಿ ಒಳಗೊಂಡ ರಾಷ್ಟ್ರೀಯ ವಿಚಾರಗಳನ್ನು ಒಂದೊಂದಾಗಿ ವಿಂಗಡಿಸಿಕೊಂಡು ವಿಶ್ಲೇಷಿಸುತ್ತಾ ಹೋಗುತ್ತಾರೆ. "ಲಾವಣಿ ಪ್ರಕಾರ ಇಡಿಯಾಗಿ ರಾಷ್ಟ್ರೀಯ ವಿಚಾರಗಳಿಗೆ ಸಂಬಂಧಿಸಿದ ಸ್ವತಂತ್ರ ಹಾಡುಗಳು"[೧] ವಿಫುಲವಾಗಿ ಹುಟ್ಟಿಕೊಂಡಿರುವ ಬಗೆಯನ್ನು ಗುರುತಿಸಲಾಗಿದೆ. ಸ್ವತಂತ್ರ ಹೋರಾಟದ ಸಂದರ್ಭದಲ್ಲಿ ಜನತೆಯಲ್ಲಿ ದೇಶಾಭಿಮಾನ ಉಂಟಾಗಬೇಕಾದರೆ ಅವರಿಗೆ ಆ ಹೊತ್ತಿನ ರಾಜಕೀಯ ಸ್ಥಿತಿಯನ್ನು ಬ್ರಿಟಿಷರ ದಬ್ಬಾಳಿಕೆ ಶೋಷಣೆಗಳನ್ನು ಪರಿಣಾಮಕಾರಿಯಾಗಿ ತಿಳಿಸಿರುವ ಬಗೆಯನ್ನು ಇಲ್ಲಿ ನೋಡಲಾಗಿದೆ. ಸದ್ಯದ ದುಸ್ಥಿತಿಯ ಅರಿವು ಉಂಟಾಗಬೇಕಾದರೆ ಹಿಂದಿನ ವೈಭವದ ನೆನಪು ಇರಬೇಕಲ್ಲವೆ ಇಡೀ ಜಗತ್ತಿನಲ್ಲಿ ಹೆಮ್ಮೆಯಿಂದ ಮೆರೆಯುತ್ತಿರುವ ನಮ್ಮ ದೇಶಕ್ಕೆ ಇಂತಹ ಹೀನ ಸ್ಥಿತಿ ಬರಲು ಕಾರಣವೇನು ಇದನ್ನೆಲ್ಲಾ ಮನಸ್ಸಿಗೆ ಮುಟ್ಟುವಂತೆ ನಿರೂಪಿಸುವ ಕಿತ್ತೂರಿನ ಬಸವಾರ್ಯ ಕಂಬಿ ಅವರ ಲಾವಣಿಯ ಅಧ್ಯಯನ ಇಲ್ಲಿದೆ.

"ಬ್ರಿಟಿಷರ ದಬ್ಬಾಳಿಕೆಯನ್ನು ಅನಿವಾರ್ಯವಾಗಿ ಸಹಿಸಿಕೊಂಡು ಮೌನವಾಗಿರಬೇಕಾಗಿದ್ದ ಸ್ಥಿತಿ ಅಂದಿತ್ತು. ಅಧಿಕಾರಶಾಹಿಯ ಕ್ರೌರ್ಯಗಳನ್ನು ಪ್ರತಿಭಟಿಸುವ ಚೈತನ್ಯ ಭಾರತೀಯರಿಗಿದ್ದಿಲ್ಲ."[೨] ಆದರೆ ಅವರ ತಳಮಳ ಆವಿಯಾಗಿ ಹೋಗದೆ ವಿಡಂಬನೆಯ ಕಿಡಿಗಳಾಗಿ ಸಿಡಿದವು. ನೇರವಾಗಿ ತಮ್ಮ ಆಕ್ರೋಶವನ್ನು ತೋರಿಸಿಕೊಳ್ಳಲು ಅಸಹಾಯಕರಾಗಿದ್ದ ಜನತೆ ಸೂಚ್ಯವಾಗಿ ಅಸಮಾಧಾನವನ್ನು ತೋರ್ಪಡಿಸಿದರು. ಬ್ರಿಟಿಷರನ್ನು ಕೆಂಪು ಮುಖದ ಕೋತಿಯನ್ನಾಗಿ ಸಂಕೇತಿಸಿ ವಿಡಂಬಿಸಿದ ಒಂದು ಪರಿಯನ್ನು 'ಮಂಗನ ನೋಡಿದೆನು' ಎನ್ನುವ ಲಾವಣಿಯ ವಿವರಣೆ ಇಲ್ಲಿ ಸಿಗುತ್ತದೆ.

ಈ ದೇಶದಲ್ಲಿ ದೇವರ ಬಗೆಗಿರುವ ಗೌರವ ಪೂಜ್ಯಭಾವನೆ ಯಾರ ಬಗ್ಗೆಯೂ ಇಲ್ಲ. ಭಾರತ ಮಾತೆಯನ್ನು ಅಂತಹ ಪೂಜ್ಯಸ್ಥಾನಕ್ಕೇರಿಸಿ ಭಾವುಕರಿಗೆ ದೇಶಭಕ್ತಿಯನ್ನು ಬಿಂಬಿಸಲು ಲಾವಣಿ ಸಾಹಿತ್ಯ ಹೇಗೆ ಪ್ರಯತ್ನಿಸಿತು ಎನ್ನುವ ಬಗೆಯನ್ನು ಇಲ್ಲಿ ನೋಡಬಹುದು. ರಾಷ್ಟ್ರೀಯ ಚಳವಳಿಗೆ ನಾನಾ ಮುಖಗಳಿದ್ದವು. ಅಸ್ಪೃಶ್ಯತಾ ನಿವಾರಣೆ, ಮದ್ಯಪಾನ ನಿಷೇಧ, ಖಾದಿ ಧರಿಸುವುದು ಇತ್ಯಾದಿ. ಹಳ್ಳಿಗರಿಗೆ ಮನವರಿಕೆಯಾಗುವಂತೆ ಈ ವಿಷಯಗಳನ್ನು ತಿಳಿಸುವುದು ಪ್ರಾಯಾಸದ ಕೆಲಸವಾಗಿತ್ತು. ಇಂತಹ ಸೂಕ್ಷ್ಮ ವಿಷಯಗಳನ್ನು ಲಾವಣಿಕಾರರು ನೇರವಾಗಿ ಸೋದಾರಣವಾಗಿ, ತರ್ಕಬದ್ಧವಾಗಿ ಲಾವಣಿ ರೂಪದಲ್ಲಿ ಹಾಡಿ ಜನಸಾಮಾನ್ಯರಿಗೆ ತಲುಪಿಸಿದ ಬಗೆಯನ್ನು ವಿವರಿಸಲಾಗಿದೆ. “ಅಂದು ಚರಕ ದೇಶಭಕ್ತಿಗೆ ಸಂಕೇತವಾಗಿತ್ತು. ಸ್ಥಳೀಯ ಗೃಹ ಕೈಗಾರಿಕೆಗಳನ್ನು ದಿವಾಳಿಯೆಬ್ಬಿಸಿ ಅಟ್ಟಹಾಸದಿಂದ ಮೆರೆಯುತ್ತಿದ್ದ ಬ್ರಿಟಿಷ್ ಆಡಳಿತ ಶಾಹಿಗೆ ಪ್ರತಿರೋಧವೆಂಬಂತೆ ಗಾಂಧೀಜಿ ಚರಕಾ ರೂಢಿಗೆ ತಂದರು. ಅದು ಏಕಕಾಲಕ್ಕೆ ಸ್ವಾವಲಂಬನೆ ಮತ್ತು ಶೋಷಣೆಯಿಂದ ಬಿಡುಗಡೆ ಎರಡನ್ನೂ ಸಾಧಿಸುವ ಸಾಮರ್ಥ್ಯ ಪಡೆದಿತ್ತು.”[1] ಅಂತಹ ಚರಕದ ಮಹತ್ವವನ್ನು ಲಾವಣಿಕಾರರು ಕಟ್ಟಿಕೊಟ್ಟಿರುವ ರೀತಿಯನ್ನು ಲೇಖಕರು ವಿವರಿಸಿದ್ದಾರೆ. “ಹಾಗೇನೆ ಚರಕದಿಂದ ಉತ್ಪನ್ನವಾಗುವ ಖಾದಿ ಶ್ರೇಷ್ಠವಾದುದು. ಅದು ಪರಿಶ್ರಮ ಮತ್ತು ಸ್ವಾವಲಂಬನೆಗೆ ಸಂಕೇತವಾಗಿರುವಂತದ್ದು. ನಿಜ ಆದರೆ, ಗಿರಿಣಿ ಬಟ್ಟೆಯ ಮುಂದೆ ಖಾದಿ ಒರಟಾಗಿ ಕಂಡಿತು. ಖಾದಿಯ ತಾತ್ವಿಕತೆ ಅರಿಯಲಾರದವರು ಗಿರಿಣಿ ಬಟ್ಟೆಗೆ ಮೋಹಗೊಳ್ಳುವುದು ಸಹಜ”.[೨] ಇಂತಹ ಗಿರಿಣಿ ಬಟ್ಟೆಗಳನ್ನು ಉಪಯೋಗಿಸಿದಂತವರಿಗೆ ಎಚ್ಚರಿಕೆ ಮತ್ತು ತಿಳಿವಳಿಕೆಗಳನ್ನು ಹೇಳಿದಂತಹ ಲಾವಣಿಗಳ ವಿವರಣೆ ಸಿಗುತ್ತದೆ.

ಅಂದಿನ ಜನಸಾಮನ್ಯರಿಗೆ ರಾಷ್ಟ್ರನಾಯಕರ ರಾಷ್ಟ್ರದ ಕುರಿತು ಸ್ವಾತಂತ್ರ್ಯ ಹೋರಾಟದ ಕುರಿತು ಹೋರಾಟ ಮಾಡುವ ರಾಷ್ಟ್ರನಾಯಕರ ರಾಷ್ಟ್ರದ ಕುರಿತು ಸ್ವಾತಂತ್ರ್ಯದ ಹೋರಾಟದ ಕುರಿತು ಹೋರಾಟ ಮಾಡುವ ರಾಷ್ಟ್ರನಾಯಕರ ಪರಿಚಯ ಮತ್ತು ಅವರ ಕಾರ್ಯಗಳನ್ನು ತಿಳಿಸುವ ಅವಶ್ಯಕತೆ ಇತ್ತು. ಅಂತಹ ಸಂದರ್ಭದಲ್ಲಿ ಲಾವಣಿಕಾರರು ಮನರಂಜನಾತ್ಮಕವಾಗಿ ಅಥವಾ ಜನರ ವಿಶ್ರಾಂತಿಯ ವೇಳೆಯಲ್ಲಿ ಅವರ ವೇಳೆಯನ್ನು ಕಳೆಯುವ ಸಲುವಾಗಿ ಲಾವಣಿಗಳ ರೂಪದಲ್ಲಿ ಜನಸಾಮಾನ್ಯರಿಗೆ ಇಂತಹ ವಿಷಯಗಳನ್ನು ತಲುಪಿಸುತ್ತಿದ್ದರು. ಹೀಗೆ ರಾಷ್ಟ್ರೀಯ ಲಾವಣಿಗಳು ಸಾಹಿತ್ಯಿಕ ಗುಣಮಟ್ಟದ ಜೊತೆಗೆ ನಿಶ್ಚಿತ ಉದ್ದೇಶಕ್ಕಾಗಿ ಉಪಲಬ್ಧ ಮಾಹಿತಿಯನ್ನು ಜನರಿಗೆ ತಲುಪಿಸಿದವು ಎನ್ನುವುದು ಈ ಕೃತಿಯ ಧೋರಣೆಯಾಗಿದೆ.

**೨. ಅಮರ ಸುಳ್ಯದ ಸ್ವಾತಂತ್ರ್ಯ ಸಮರ, ಎನ್. ಎಸ್. ದೇವೀಪ್ರಸಾದ್ ಸಂಪಾಜೆ**

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಬ್ರಿಟಿಷರ ಉಪಟಳ ಸಹಿಸದೆ ಅವರ ಆಡಳಿತ ಮತ್ತು ಅವರನ್ನೆ ಹೊಡೆದೋಡಿಸಲು ಪ್ರಯತ್ನ ಮಾಡಿ ತಮ್ಮ ಪ್ರಾಣವನ್ನೇ ಬಲಿಕೊಟ್ಟ ವೀರರು ನಮ್ಮ ಚರಿತ್ರೆಯಲ್ಲಿ ಕಂಡುಬರುತ್ತಾರೆ. ಇಂತಹ ವೀರರನ್ನು ಕುರಿತು ರಚನೆಗೊಂಡು

ಲಾವಣಿಗಳು ಜನಪದ ಸಾಹಿತ್ಯದಲ್ಲಿ ಹಲವು. ಈ ವೀರರು ವಸಾಹತುಶಾಹಿಯ ವಿರೋಧವಾಗಿ ಪ್ರತಿಭಟಿಸಿದವರಾಗಿದ್ದರಿಂದ ಇವರ ಪ್ರತಿಭಟನೆ ಕುರಿತು ಹಲವು ಲಾವಣಿಗಳು ಅದರ ಒಳನೋಟಗಳನ್ನು ಪ್ರತಿಬಿಂಬಿಸುತ್ತಿವೆ. ಇಂತಹ ಪ್ರತಿಭಟನೆಗಳನ್ನು ದಂಗೆಗಳೆಂದು ಕರೆದಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಇಂತಹ ಹಲವಾರು ದಂಗೆಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಅಂತಹ ಪುಸ್ತಕದಲ್ಲಿ ಅಮರಸುಳ್ಯದ ಸ್ವಾತಂತ್ರ್ಯ ಸಮರ ಒಂದು. ಈ ಪುಸ್ತಕದಲ್ಲಿ ಅಮರಸುಳ್ಯದ ಸ್ವಾತಂತ್ರ್ಯ ಸಮರ, ಕೆನರಾ ಬಂಡಾಯ, ಕೊಡಗು ಬಂಡಾಯ ಮುಂತಾದವುಗಳ ವಿವರಣೆಯಿದೆ. ಈ ದಂಗೆಗಳಿಗೆ ಸಂಬಂಧಿಸಿದ ಕೆಲವು ಮೂಲಪತ್ರಗಳನ್ನು ಆಧಾರ ರೂಪದಲ್ಲಿ ಪ್ರಕಟಿಸಿಲಾಗಿದೆ. ಅಲ್ಲಲ್ಲಿ ಅವುಗಳ ಕುರಿತು ಟಿಪ್ಪಣಿ ರೂಪದಲ್ಲಿ ವಿವರಿಸಲಾಗಿದೆ. ಎನ್.ಎಸ್. ದೇವಿಪ್ರಸಾದ್ ಅವರು ಕೊಡಗು ಬಂಡಾಯದ ಅದಕ್ಕೆ ಸಂಬಂಧಿಸಿದ ಆಧಾರಗಳನ್ನು ಸಂಗ್ರಹ ಮಾಡಿ ನಿರೂಪಿಸಿರುವುದ ಕಂಡುಬರುತ್ತದೆ. ಅಲ್ಲದೆ ಈ ನಿರೂಪಣೆ ಮುಂದಿನ ಅಧ್ಯಯನದ ಆಕಾಂಕ್ಷಿಗಳಿಗೆ ಕೆಲವು ಸುಳಿವುಗಳನ್ನು ನೀಡುತ್ತದೆ. ಅಲ್ಲದೆ ಅಧ್ಯಯನಕಾರರು ಯಾವ ದೃಷ್ಟಿಕೋನದಿಂದ ಅಧ್ಯಯನ ಮಾಡಬೇಕು ಎನ್ನುವ ಸೂಚನೆಗಳೂ ಕೂಡ ಇಲ್ಲಿವೆ. ಇಂತಹ ದಂಗೆಗಳ ಅಧ್ಯಯನ "ಯಾವುದೇ ಪೂರ್ವಾಗ್ರಹಗಳಿಲ್ಲದೆ ಅವು ನಮ್ಮದೇ ಚರಿತ್ರೆಯ ಒಂದು ತುಣುಕನ್ನು ಪುನರ್‌ನಿರ್ಮಿಸುವ ಮತ್ತು ಅದರ ಕುರಿತಾದ ಅರಿವನ್ನು ಜನರಲ್ಲಿ ಮೂಡಿಸುವ ಒಂದು ಪ್ರಯತ್ನದ ಆಂಶಿಕ ಅಗತ್ಯವನ್ನು ಪೂರೈಸುವಂತಿರಬೇಕು"[೫] ಎಂದು ಎತ್ತಿ ಹೇಳಲಾಗಿದೆ. ಈ ಒಂದು ಕೃತಿಯನ್ನು ಸಮೀಕ್ಷೆ ಮಾಡಿದಾಗ ಕೆಲವು ಮುಖ್ಯ ಅಂಶಗಳು ತಿಳಿದುಬರುತ್ತವೆ. ಅಂತಹ ಅಂಶಗಳು ಕೃತಿಯ ಒಳಗೆಡೆಯೇ ಇರುವ ಹಾಗೆ ಕೆಲವು ಶೀರ್ಷಿಕೆಗಳನ್ನು ಬಳಸಿಕೊಂಡು ಇಲ್ಲಿ ಚರ್ಚಿಸಿದ್ದೇನೆ.

**ಕ್ರಾಂತಿಯ ಕಿಡಿ**

ಪ್ರಸ್ತುತ ಈ ಟಿಪ್ಪಣಿಯಲ್ಲಿ ವಿವರಿಸಲ್ಪಟ್ಟ ವಿಷಯ ಇಂದಿಗೆ ಸುಮಾರು ಒಂದೂವರೆ ಶತಮಾನದ ಹಿಂದೆ ಕೊಡಗು ಮತ್ತು ಸುಳ್ಯ, ಪುತ್ತೂರು ಪ್ರದೇಶಗಳು ಸೇರಿದ್ದ ಆಗಿನ ಬಂಟ್ವಾಳ ತಾಲ್ಲೂಕಿನಲ್ಲಿ ಬ್ರಿಟಿಷರ ವಿರುದ್ಧ ನಡೆದ ಬಂಡಾಯ ಇದನ್ನು ಬ್ರಿಟಿಷರ ದಾಖಲೆಗಳು ಕೊಡಗು, ಕೆನರಾ ಬಂಡಾಯ ಎಂದು ಗುರುತಿಸುತ್ತವೆ. 'ವಾಸ್ತವವಾಗಿ ಅದು ಸ್ವಾತಂತ್ರ್ಯ ಸಂಗ್ರಾಮದ ಆರಂಭಿಕ ಕಿಡಿಯೇ'[೬] ಆಗಿದೆ ಎಂದು ಅಭಿಪ್ರಾಯ ಪಡಲಾಗಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನಮ್ಮ ಜೊತೆಯಲ್ಲಿಯೇ ಇದ್ದುಕೊಂಡು ನಮ್ಮವರೇ ಆಗಿ ನಮ್ಮ ದೇಶಕ್ಕೆ ದ್ರೋಹಬಗೆದ ಕೆಲವು ಪಿತೂರಿಗಳು ಕೆನರಾ ಬಂಡಾಯದಲ್ಲಿ ಇರುವುದು ತಿಳಿಯುತ್ತದೆ. ಇಂತಹ ದೇಶ ದ್ರೋಹಿಗಳು ಈ ಬಂಡಾಯವನ್ನು ಹತ್ತಿಕ್ಕಲು ಬ್ರಿಟಿಷರಿಗೆ ಸಹಾಯ ಮಾಡಿರುವುದು ಕೆಲವು ಆಧಾರಗಳಿಂದ ಈ ಕೃತಿಯಲ್ಲಿ ಗುರುತಿಸಲಾಗಿದೆ. ಇಂತಹ ದೇಶ ದ್ರೋಹಿಗಳ ಸಹಾಯ ಬ್ರಿಟಿಷರಿಗೆ ಇದ್ದರೂ ಸಹಿತ ಈ ದಂಗೆಯನ್ನು ಹತ್ತಿಕ್ಕಲು ಅವರಿಗೆ ಅಸಾಧ್ಯವಾಯಿತು. ಈ ದಂಗೆಯ ಮುಖಂಡರನ್ನು ಬ್ರಿಟಿಷರಿಂದ ಹಿಡಿಯಲು ಸಾಧ್ಯವಾಗಲಿಲ್ಲ ಎನ್ನುವುದು ಕೆಲವು

ಆಧಾರಗಳಿಂದ ಸೈದ್ಧಾಂತಿಕವಾಗಿ ಚರ್ಚಿಸಲು ಪ್ರಯತ್ನಿಸಿದ್ದಾರೆ. ಬ್ರಿಟಿಷರು ಭಾರತೀಯ ಕೆಲವು ಸ್ವಾತಂತ್ರ್ಯ ಹೋರಾಟಗಾರರನ್ನು ಹಿಡಿದಿರುವುದು ಇಲ್ಲಿಯ ದೇಶದ್ರೋಹಿಗಳ ಸಹಾಯದಿಂದ. ಇಲ್ಲದೇ ಹೋಗಿದ್ದರೆ ಬ್ರಿಟೀಷರಿಗೆ ಸ್ಥಳೀಯ ನಾಯಕರನ್ನು ಹಿಡಿದು ಗಲ್ಲಿಗೇರಿಸುವುದು ಅಸಾಧ್ಯವಾಗುತ್ತಿತ್ತು. ಬ್ರಿಟಿಷರ ಪರವಾಗಿದ್ದ ದೇಶದ್ರೋಹಿಗಳು ಇಲ್ಲಿಯ ನಾಯಕರ ಬಗ್ಗೆ ಜನಸಾಮಾನ್ಯರಲ್ಲಿ ಅವರನ್ನು ದೇಶದ್ರೋಹಿಗಳು, ಬಂಡಾಯಗಾರರು, ದರೋಡೆಕೋರರು ಎಂಬ ಅಭಿಪ್ರಾಯಗಳನ್ನು ಅವರಲ್ಲಿ ತುಂಬಿದರು. ಇದಕ್ಕೆ ಕೆಲವು ಆಧಾರಗಳ ಮೂಲಕ ಲೇಖಕರು ಚರ್ಚಿಸುತ್ತಾರೆ.

**ಅ. ಇತಿಹಾಸದ ನಿರ್ಲಕ್ಷ್ಯ**

"ಕೊಡಗು ಮತ್ತು ಕೆನರಾ ಬಂಡಾಯಗಳು ಕೇವಲ ಕಗ್ಗಾಡಿನ ಗ್ರಾಮ ಪರಿಸರದ ಚಟುವಟಿಕೆ ಆಗಿರದೆ ಸಿಪಾಯಿದಂಗೆಯ ಬೀಜ ಸ್ವರೂಪದ್ದಾಗಿತ್ತು"[2] ಎಂದು ಲೇಖಕರು ಕೆಲವು ಸಾಕ್ಷಿಗಳ ಮೂಲಕ ಗುರುತಿಸುತ್ತಾ ಹೋಗುತ್ತಾರೆ. ಅಲ್ಲದೆ 'ಈ ದಂಗೆ ರಾಷ್ಟ್ರವ್ಯಾಪ್ತಿಯಾಗಿತ್ತು' ಎಂದು ಅಭಿಪ್ರಾಯ ಪಡಲಾಗಿದೆ. ಕಾರಣ ದಂಗೆಯ ಮುಖಂಡರಲ್ಲಿ ಒಬ್ಬನಾದ ಹುಲಿಕಡಿದ ನಂಜಯ್ಯ ಭಾರತದ ಪ್ರಮುಖ ನಗರಗಳ ಜೊತೆ ಸಂಪರ್ಕವಿರಿಸಿಕೊಂಡಿದ್ದ ಎಂದು ಇಲ್ಲಿ ಸೂಚಿಸಲಾಗಿದೆ. ಆದರೆ ಇದು ಯಾವ ಗ್ಯಾಜೆಟಿಯರ್‌ನಲ್ಲಿಯೂ ಗುರುತಿಸಲಾಗಿಲ್ಲ ಎಂದು ಲೇಖಕರು ಅಸಮಾಧಾನ ವ್ಯಕ್ತಪಡಿಸಿರುವುದು ಕಂಡು ಬರುತ್ತದೆ. ಇದರಿಂದ ಕೊಡಗು ಮತ್ತು ಕೆನರಾ ಬಂಡಾಯಗಳು ಅವುಗಳ ವ್ಯಾಪಕತೆ ಎಷ್ಟಿತ್ತು ಎಂಬುದರ ಜೊತೆಗೆ ಈ ಬಂಡಾಯಗಳ ಗಂಭೀರ ಸ್ವರೂಪವೂ ಮಹತ್ವದ್ದಾಗಿತ್ತು ಎಂದು ತಿಳಿಸಲಾಗಿದೆ.

ಬ್ರಿಟಿಷರ ಆಳ್ವಿಕೆಯ ಒಳಿತು ಕೆಡುಕುಗಳ ಕುರಿತು ಚರ್ಚೆಯಾಗಲಿ ಬ್ರಿಟಿಷರೆಂಬ ಆಕ್ರಮಣಕಾರರ ಕುರಿತು ಪ್ರತೀಕಾರ ಮನೋಭಾವವನ್ನು ಮತ್ತೆ ಜಾಗೃತಗೊಳಿಸುವುದಾಗಲಿ ಈ ಬರಹದ ಮುಖ್ಯ ಉದ್ದೇಶವಾಗಿ ಕಂಡುಬರುವುದಿಲ್ಲ. ರಾಷ್ಟ್ರಪ್ರೇಮದ ನೆಲೆಯಿಂದ ಈ ನೆಲದ ಜನ ತಮ್ಮ ಹಕ್ಕುಗಳಿಗಾಗಿ ಬದುಕಿನ ಅವಕಾಶಗಳಿಗಾಗಿ ಎಲ್ಲಕ್ಕೂ ಮಿಗಿಲಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಪ್ರಾಣ ಬಿಟ್ಟು ಚರಿತ್ರೆಯಲ್ಲಿ ಮುಳುಗಿ ಹೋಗಿರುವ ವಿವರಗಳನ್ನು ಇಲ್ಲಿ ನೆನಪಿಸಲಾಗಿದೆ. ಈ ವಿವರಗಳ ಸಂಪೂರ್ಣವಾದ ಅಧ್ಯಯನವನ್ನು ಮುಂದಿನ ಪೀಳಿಗೆ ಅಧ್ಯಯನ ಕೈಗೊಳ್ಳಲಿ ಎನ್ನುವ ಅಪೇಕ್ಷೆ ಲೇಖಕರದಾಗಿದೆ. ಈ ಅಪೇಕ್ಷೆಯಿಂದಲೆ ಲೇಖಕರು ಈ ಬಂಡಾಯಗಳಿಗೆ ಸಂಬಂಧಿಸಿದ ಪ್ರಮುಖ ಆಧಾರಗಳನ್ನು ಮಾತ್ರ ಸಂಗ್ರಹಿಸಿಕೊಡಲು ಪ್ರಯತ್ನಿಸಿದ್ದಾರೆ. ಅದಕ್ಕಾಗಿಯೇ ಅವರು ಆಧಾರಗಳಿಗೆ ಮಾತ್ರ ಈ ಕೃತಿಯ ಒಳಗಡೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ.

**ಆ. ಸಾಮುದಾಯಿಕ ಬಂಡಾಯ**

"ಈ ಬಂಡಾಯಗಳು ಯಾವುದೇ ಸಮುದಾಯದ ಚಟುವಟಿಕೆ ಆಗಿರದೆ ಇವು ಜಾತಿ ವ್ಯವಸ್ಥೆಯ ಬೆನ್ನುಹತ್ತಿರುವ ಇಂದಿನ ಸಾಮಾಜಿಕ ಸಂದರ್ಭದಲ್ಲಿ ಅತ್ಯಂತ ಮಹತ್ವದ್ದಾದ

ವಿಷಯಗಳಾಗಿ ಕಂಡುಬರುತ್ತವೆ”[೮] ಎಂದು ಗುರುತಿಸಲಾಗಿದೆ. ಕೊಡಗು, ಕೆನರಾ ಬಂಡಾಯದ ಸೈನ್ಯದಲ್ಲಿ ಸೇರಿಕೊಂಡ ಕೆಲವು ಪ್ರಮುಖರಲ್ಲಿ ಲಿಂಗಾಯಿತರು, ಒಕ್ಕಲಿಗರು, ಜೈನರು, ಬ್ರಾಹ್ಮಣರು, ಮುಸಲ್ಮಾನರು ಸೇರಿದಂತೆ ವಿವಿಧ ಜಾತಿಗಳ ಜನರಿದ್ದರೆಂಬುದು ಇಲ್ಲಿ ಗುರುತಿಸಲಾಗಿದೆ.

**ಇ. ಇಂದಿನ ಅಗತ್ಯ**

“ಬ್ರಿಟಿಷರನ್ನು ಓಡಿಸಿ ಬಂಧಮುಕ್ತರಾದ ಹೋರಾಟಗಾರರ ಸಾಹಸ ಅಲ್ಪಕಾಲಿಕವಾದರೂ ಇದರ ಪರಿಣಾಮ ಚಿರಕಾಲವಾಗಿದೆ. ಆದ್ದರಿಂದ ಈ ಹೋರಾಟಗಾರರಿಗೆ ಸಿಗಬೇಕಾದ ಮಾನ ಸನ್ಮಾನಗಳು ಮತ್ತು ಗೌರವಗಳು ಸಿಗಬೇಕಾದ ಅಗತ್ಯವಿದೆ”[೯] ಎಂದು ಹೇಳುತ್ತಾರೆ. ಈ ಬಂಡಾಯಗಳ ಅಧ್ಯಯನಗಳು ಮತ್ತು ಸಂಶೋಧನೆಗಳು ಆಗುವ ಅಗತ್ಯವಿದೆಯೆಂಬುದು ಲೇಖಕರ ಅಭಿಪ್ರಾಯ. ಈ ಅಧ್ಯಯನದ ವಿವರಗಳು ಸ್ವಾತಂತ್ರ್ಯ ಹೋರಾಟದ ಚರಿತ್ರೆಯ ಕ್ರಮಕ್ಕೆ ಸೇರಲಿ ಎಂಬುದು ಲೇಖಕರ ಆಕಾಂಕ್ಷೆಯಾಗಿದೆ.

“ಬ್ರಿಟಿಷರ ವಿರುದ್ಧ ವಿವಿಧ ಕಾರಣಗಳಿಂದಾಗಿ ಹೋರಾಟ ಮಾಡಿದ ಕೆಲವರನ್ನು ವಿದ್ರೋಹಿಗಳೆಂದು ಚರಿತ್ರೆಯಲ್ಲಿ ದಾಖಲಿಸಲಾಗಿದೆ. ಈ ಘಟನೆಯ ನಂತರ ೧೧೦ ವರ್ಷಗಳ ಬ್ರಿಟಿಷರ ಆಳ್ವಿಕೆಯಲ್ಲಿ ಅವರ ಆಡಳಿತದ ಪರವಿದ್ದವರೆಲ್ಲ ಅಧಿಕಾರ ಸ್ಥಾನ ಮಾನ ಪಡೆದುಕೊಂಡು ಸಮಾಜದ ಬಹುಸಂಖ್ಯಾತರಿಂದ ಭಿನ್ನವಾಗಿ ಕಂಡುಬಂದರು. ಶ್ರೀಮಂತರಾಗಿ ವಿದ್ಯಾವಂತರೆನಿಸಿಕೊಂಡರು. ಬ್ರಿಟಿಷ್ ವಿರೋಧಿಗಳಿಗೆ ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಕೂಡ ಸಿಗಬೇಕಾದ ಸ್ಥಾನಮಾನಗಳು ಸಿಗದೇ ಹೋಗುವುದಕ್ಕೆ ಇಂತವರೇ ಕಾರಣ ಎಂದು ಸೂಚಿಸಲಾಗಿದೆ”[೧೦]

ಅದು ಏನೇ ಇದ್ದರೂ ಸಿಕ್ಕ ಸ್ಥಳೀಯ ಆಧಾರಗಳನ್ನು ಇಟ್ಟುಕೊಂಡು ಪ್ರಾಮಾಣಿಕವಾಗಿ ಅಧ್ಯಯನ ಮಾಡುವ ಅವಶ್ಯಕತೆ ಇದೆ ಎಂದು ಹೇಳುತ್ತಾರೆ. ಬ್ರಿಟಿಷ್ ಮೂಲದ ಲಿಖಿತ ದಾಖಲೆಗಳನ್ನು ಮಾತ್ರವಲ್ಲದೆ ಒಟ್ಟಾರೆ ಈ ಕೃತಿಯಲ್ಲಿ ಎಲ್ಲವೂ ಪ್ರಗತಿಪರ ಮತ್ತು ಚಿಂತನ ಪರ ಹಾಗೂ ಸ್ಥಳೀಯರ ಹಾಗೂ ಬಂಡಾಯ ಮಾಡಿದ ಜನಸಾಮಾನ್ಯರ ಅಧ್ಯಯನವಾಗಬೇಕು. ಆಗಲಾದರೂ ಚರಿತ್ರೆಗೆ ಒಂದು ನ್ಯಾಯ ಸಿಕ್ಕಂತಾಗುತ್ತದೆ ಎಂದು ಹೇಳಲಾಗಿದೆ.

**೩. ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಾವ್ಯ, (ಸಂ) ಡಾ. ವಿರೂಪಾಕ್ಷಿ ಪೂಜಾರಹಳ್ಳಿ**

ದಕ್ಷಿಣ ಕರ್ನಾಟಕದಲ್ಲಿ ಐಗೂರಿನ ವೆಂಕಟಾದ್ರಿ ದೋಂಡಿಯಾವಾಘನ ಹೆಸರು ಕನ್ನಡಿಗರ ಬ್ರಿಟಿಷ್ ವಿರೋಧಿ ಪ್ರತಿಭಟನಾ ಪಟ್ಟಿಯಲ್ಲಿ ಸೇರಿಕೊಂಡ ಹಾಗೆ ತರೀಕೆರೆ ಪಾಳೆಯಗಾರನಾದ ಸರ್ಜಪ್ಪನಾಯಕನ ಹೆಸರು ಕೂಡ ಸೇರಿದೆ. ಸರ್ಜಪ್ಪನಾಯಕನು ಬ್ರಿಟಿಷರನ್ನು ವಿರೋಧಿಸಿದವರಲ್ಲಿ ಪ್ರಮುಖನಾದವನು. ಇಂತವನ ಕುರಿತು ಅವರ ಪ್ರತಿಭಟನೆ ಮತ್ತು ಸಾಹಸದ ಕುರಿತು ಜನಪದ ಲಾವಣಿಯ ರೂಪದಲ್ಲಿ ಸರ್ಜಪ್ಪನಾಯಕನನ್ನು ಅಜರಾಮರಗೊಳಿಸಿರುವುದು ಕಂಡುಬರುತ್ತದೆ. ಇಂತಹ ಲಾವಣಿಯನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇದೊಂದು ಸರ್ಜಪ್ಪನಾಯಕನ

ಕಥನ ಕವನವನ್ನು ಮಾತ್ರ ಒಳಗೊಂಡಿದೆ. ಪ್ರಸ್ತಾವನೆಯಲ್ಲಿ ಮಾತ್ರ ಸರ್ಜಪ್ಪ ನಾಯಕನ ಚರಿತ್ರೆ ಮತ್ತು ಅವನ ಲಾವಣಿಯ ಕುರಿತು ವಿವರಗಳು ದೊರೆಯುತ್ತವೆ. ತರೀಕೆರೆ ಪಾಳೆಯಗಾರರಲ್ಲಿ ಬ್ರಿಟಿಷ್ ವಿರೋಧಿಯಾಗಿ ಅವರ ವಿರುದ್ಧ ಪ್ರತಿಭಟಿಸಿದವನು ಮೊದಲಿಗೆ ಸರ್ಜಪ್ಪನಾಯಕನ ತಂದೆಯಾದ ರಂಗಪ್ಪನಾಯಕ. ಆನಂತರ ಅವರನ್ನು ಪ್ರತಿಭಟಿಸಿದವನು ಸರ್ಜಪ್ಪನಾಯಕ. ಸರ್ಜಪ್ಪನಾಯಕನು ಶ್ರೀರಂಗಪಟ್ಟಣದಿಂದ ಬಂದ ಮೇಲೆ ಯಾವ ಆತಂಕವೂ ಇಲ್ಲದೆ ಸರ್ಕಾರದ ವಿರುದ್ಧ ನಿಂತು ಇರುವ ಸಾಲವನ್ನು ದೋಚಿ ಬಡವರಿಗೆ ಹಂಚತೊಡಗಿದನು. ಇದನ್ನು ಸಹಿಸದ ಮೈಸೂರು ಸರ್ಕಾರ ಬ್ರಿಟಿಷ್ ಸೈನ್ಯದ ಸಹಾಯ ಕೋರಿ ಹೋರಾಟ ಮಾಡಿ ರಂಗಪ್ಪನಾಯಕನನ್ನು ಕೊಲೆಮಾಡಿರುವುದನ್ನು ಇಲ್ಲಿ ಚರ್ಚಿಸಲಾಗಿದೆ. ಮುಂದೆ ಮೈಸೂರು ಅರಸರಿಗೆ ಮತ್ತು ಬ್ರಿಟಿಷರಿಗೆ ಹೆದರದೆ ತರೀಕರೆಯ ಪಾಳೆಯಗಾರನಾಗಿ ಆಡಳಿತವನ್ನು ನಡೆಸಿಕೊಂಡು ಹೋದ ಸರ್ಜಪ್ಪನಾಯಕನನ್ನು ಸಾಯಿಸುವ ಹುನ್ನಾರ ಮಾಡಿ ಅವನ ದ್ವಿಪತ್ನಿಯಾದ ಲಿಂಗವ್ವನ ಸಹಾಯವನ್ನು ಪಡೆದು ಅವನನ್ನು ಕೊಲೆ ಮಾಡುವ ಪ್ರಯತ್ನ ಮಾಡುತ್ತಾರೆ. ಹೀಗೆ ಸರ್ಜಪ್ಪನಾಯಕನ ಮರಣದ ಕುರಿತು ಸ್ಪಷ್ಟವಾದ ಮಾಹಿತಿ ಸಿಕ್ಕಿಲ್ಲವೆಂದು ಇಲ್ಲಿ ಗುರುತಿಸಲಾಗಿದೆ.

**೪. ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ, ಸಂ. ಪ್ರೊ. ಮಂಜುನಾಥ ಬೇವಿನಕಟ್ಟಿ**

ಸ್ಥಳೀಯ ಸಮುದಾಯಗಳಿಂದ ಮತ್ತು ಬ್ರಿಟಿಷರ ಆಡಳಿತ ಆಕ್ರಮ, ಅನ್ಯಾಯ, ದೌರ್ಜನ್ಯಗಳಿಂದ ವಂಶಪಾರಂಪರ್ಯವಾಗಿ ಅನ್ಯಾಯಕ್ಕೆ ಒಳಗಾಗಿರುವ ನಮ್ಮ ತಳ ಸಮುದಾಯದ ಚರಿತ್ರೆಯನ್ನು ನೋಡಿದಾಗ ಅಲ್ಲಿ ದುರಂತಕ್ಕೆ ಒಳಗಾದವರು ಸಂಗೊಳ್ಳಿರಾಯಣ್ಣ, ಸಿಂಧೂರ ಲಕ್ಷ್ಮಣ ಮುಂತಾದ ದುರಂತ ನಾಯಕರು. ಇವರು ಅಂದು ಬ್ರಿಟಿಷರನ್ನು ತುಂಬಾ ಗಂಭೀರವಾಗಿ ವಿರೋಧಿಸಿ ತಮ್ಮ ಜೀವನಪರ್ಯಂತ ನಿರಂತರವಾಗಿ ಅವರನ್ನು ಮತ್ತು ಅವರ ಆಡಳಿತವನ್ನು ವಿರೋಧಿಸುತ್ತಾ ಬಂದರು. ಅದರಲ್ಲಿಯೂ ಬೇಡ ಸಮುದಾಯದ ಜನ ಅವರ ಜೊತೆ ಹೋರಾಟ ಮಾಡಿ ವೀರಮರಣವನ್ನು ಹೊಂದಿರುವುದನ್ನು ಗಮನಿಸುತ್ತೇವೆ. ಜನಪದ ಲಾವಣಿಗಳಿಂದ ಇಂತಹ ಬೇಡಸಮುದಾಯಗಳಿಂದ ಬಂದ ವೀರರ ಚರಿತ್ರೆಯನ್ನು ನೋಡಬಹುದು. ಈ ವೀರರ ವಿಶ್ಲೇಷಣೆ ಇಲ್ಲಿದೆ. ಈ ಕೃತಿಯ ಶೀರ್ಷಿಕೆಯೇ ಹೇಳುವ ಹಾಗೆ ಸಾಂಸ್ಕೃತಿಕ ಅನನ್ಯತೆ ಹಾಗೂ ಹಲಗಲಿ ಬಂಡಾಯ ಮುಖ್ಯವಾಗಿ ಹಲಗಲಿ ಬಂಡಾಯದ ಒಂದು ಚಿತ್ರಣವನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಅದರ ಜೊತೆ ಸಿಂಧೂರಲಕ್ಷ್ಮಣ, ಸಂಗೊಳ್ಳಿರಾಯಣ್ಣ ಅಲ್ಲದೆ ಅನೇಕ ನಾಯಕ ಸಮುದಾಯದ ಬಂಡಾಯಗಾರರ ಬದುಕು ಸಾಧನೆ ಅವರ ದುರಂತ ಕಥೆಯನ್ನು ತಳಸಮುದಾಯದ ಅಂದರೆ ಸಬಾಲ್ಟ್ರನ್ ಅಧ್ಯಯನದ ನೆಲೆಯಲ್ಲಿ ಚರ್ಚಿಸಲಾಗಿದೆ.

ಹಲಗಲಿ ಬಂಡಾಯದ ಮತ್ತು ತಳಸಮುದಾಯದ ಅಧ್ಯಯನದ ಜೊತೆಗೆ ಸಾಂಸ್ಕೃತಿಕ ವೈವಿಧ್ಯಗಳಾದ ಜಾತ್ರೆ ಉತ್ಸವಗಳು, ಕಲೆಗಳು, ಅಲ್ಲಿಯ ಮಹಿಳಾ ಚಿತ್ರಣ, ಆರ್ಥಿಕ ಮತ್ತು

ರಾಜಕೀಯ ಜೀವನ, ಒಟ್ಟಾರೆ ಅವರ ಬದುಕಿನ ವೈಶಿಷ್ಟ್ಯವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಇದೊಂದು ವಿವರಣಾತ್ಮಕ ಅಧ್ಯಯನವಾಗಿ ಕಂಡುಬರುತ್ತದೆ. ಅದರ ಜೊತೆಗೆ ಗಂಭೀರ ಚಿಂತನೆಯೂ ಕೂಡ ಇಲ್ಲಿದೆ.

ಚರಿತ್ರೆಯನ್ನು ಒಂದು ಏಕಾಕೃತಿಯೊಳಗಿಂದ ಗ್ರಹಿಸುವ ವಿಧಾನಗಳಿಂದ ತಪ್ಪಿಸಿಕೊಂಡು ಚಾಲ್ತಿಯಲ್ಲಿರುವ ಸಂಗತಿಗಳನ್ನೇ ಮತ್ತೆ ಮತ್ತೆ ಹೇಳುವ ಅಭ್ಯಾಸದಿಂದ ಹೊರತಾಗಿ ಹೊಸ ರೀತಿಯಲ್ಲಿ ಇದನ್ನು ಅಧ್ಯಯನ ಮಾಡಲು ಈ ಕೃತಿ ಮಾದರಿಯಾಗಿ ಕಂಡುಬರುತ್ತದೆ. ಇತಿಹಾಸಕ್ಕೆ ಸಂಬಂಧಿಸಿದ ಆಕರಗಳನ್ನು ಬಿಟ್ಟು ಕೇವಲ ಜನಪದರ ಸ್ಥಳೀಯ ಮುಗ್ಧ ಜನರು ಕಟ್ಟಿಕೊಟ್ಟಿರುವ ಲಾವಣಿಗಳ ಆಧಾರದ ಮೇಲೆ ಹಲಗಲಿ ಬಂಡಾಯ ಮತ್ತು ಸಿಂಧೂರು ಲಕ್ಷ್ಮಣನ ಸಾಂಸ್ಕೃತಿಕ ಅಧ್ಯಯನವನ್ನು ಮಾಡಲಾಗಿದೆ. "ಕೇಂದ್ರ ಹಾಗೂ ಪಂಥೀಯ ಎನ್ನುವ ವರ್ಗೀಕೃತ ವಿನ್ಯಾಸದಲ್ಲಿಯೇ ಇಂದು ಸ್ಥಳೀಯ ಕ್ರಿಯಾಶೀಲ ನೆಲೆಗಳನ್ನು ಪುನರ್‌ನಿರ್ಮಿಸಿಕೊಳ್ಳುವ ಅವಶ್ಯಕತೆ ಇರುವುದರಿಂದ ಇಂತಹ ಅಧ್ಯಯನದ ಅವಶ್ಯಕತೆಯನ್ನು ಈ ಕೃತಿ ಪೂರೈಸಿದೆ".[೧೧] 'ರಾಜನ ಬದಲು ಜನರ ದೃಷ್ಟಿಯಲ್ಲಿಯೇ ಪ್ರಭುತ್ವದ ಚರಿತ್ರೆಯನ್ನು ಹೇಳಲಾಗುತ್ತದೆಯೇ ಹೊರೆತು ಜನಸಾಮಾನ್ಯರ ಚರಿತ್ರೆಯನ್ನು ಎಲ್ಲೂ ಹೇಳಲಾಗಿಲ್ಲ'.[೧೨] ಲಾವಣಿಗಳು ಜನಸಾಮಾನ್ಯರ ಮಧ್ಯದಲ್ಲಿ ರಚನೆಗೊಂಡಿರುವುದನ್ನು ಇವು ಜನಸಾಮಾನ್ಯರ ಸ್ಪಷ್ಟವಾದ ಚಿತ್ರಣವನ್ನು ಕೊಡುತ್ತವೆ ಎಂಬ ಅಭಿಪ್ರಾಯದಿಂದ ಲಾವಣಿಗಳ ಮೂಲಕ ತಳಸಮುದಾಯದ ವೀರರಚರಿತ್ರೆಯನ್ನು ಅಧ್ಯಯನ ಮಾಡುವುದರ ಅವಶ್ಯಕತೆ ಇದೆಯೆಂದು ಇಲ್ಲಿ ಗುರುತಿಸಲಾಗಿದೆ. ನಮ್ಮ ಚರಿತ್ರೆಯನ್ನು ನಮ್ಮದೇ ಆದ ದೃಷ್ಟಿಕೋನದೊಳಗಡೆ ನಮ್ಮದೇ ಬದುಕಿನ ಒಳಗಡೆಯಿಂದ ಒಮ್ಮೆ ನೋಡಿಕೊಳ್ಳ ಬೇಕಾಗಿದೆ. ಆ ಮೂಲಕ ಊನಗೊಂಡ ಹಾಗೂ ಗೈರುಹಾಜರಾಗಿರುವ ಅನುಭವ ಜಗತ್ತನ್ನು ಚರಿತ್ರೆಯ ಮುಖ್ಯವಾಹಿನಿಗೆ ತರಬೇಕಾಗಿದೆ"[೧೩] ಇದರಿಂದ ಹೊಸ ರೀತಿಯ ವ್ಯಾಖ್ಯಾನಗಳಿಗೆ ಗುರಿಪಡಿಸಬೇಕಾಗಿದೆ ಎನ್ನುವ ಅವಶ್ಯಕತೆಯಿಂದ ಈ ಕೃತಿಯಲ್ಲಿ ಗೈರುಹಾಜರಾದ ಅನುಭವವನ್ನು ಲಾವಣಿ ಸಾಹಿತ್ಯದಲ್ಲಿ ಅಗಾಧವಾದ ಚರಿತ್ರೆ ಅಡಗಿರುವುದರಿಂದ ಅದೊಂದು ಜನಸಾಮಾನ್ಯರ ಬದುಕಿನ ಒಳಗಡೆ ರಚನೆಯಾಗಿರುವುದರಿಂದ ಅವುಗಳ ಮೂಲಕ ಅಧ್ಯಯನ ನಡೆಯಬೇಕಾದ ಅವಶ್ಯಕತೆಯನ್ನು ಈ ಕೃತಿ ಪೂರೈಸಿದೆ.

ಬೇಡರು ದುಡಿಯುವ ವರ್ಗದವರಾಗಿದ್ದರಿಂದ ಅವರಿಗೆ ಬೇಟೆಯಾಡಲು ಶಸ್ತ್ರಾಸ್ತ್ರಗಳು ಮತ್ತು ಭೂಮಿ ತುಂಬಾ ಅವಶ್ಯವಾಗಿ ಜೀವನಕ್ಕೆ ಬೇಕಾಗಿದ್ದವು. ಇಂತಹ ಸಂದರ್ಭದಲ್ಲಿ ವಸಾಹತುಶಾಹಿ ಆಡಳಿತವು ಶಸ್ತ್ರನಿಷೇಧ ಕಾಯ್ದೆ ಮತ್ತು ಭೂಕಂದಾಯ ವಸೂಲಿ ಕಾಯ್ದೆಯನ್ನು ಜಾರಿಗೆ ತಂದರು. ಈ ಕಾಯ್ದೆಗಳು ದುಡಿಯುವ ವರ್ಗದ ಮೇಲೆ ತುಂಬಾ ಪರಿಣಾಮ ಬೀರಿದವು. ಈ ಕಾಯ್ದೆಗಳು ಅವರು ತಿನ್ನುವ ಅನ್ನವನ್ನೇ ಕಸಿದುಕೊಂಡಂತಾಯಿತು. ಇದರಿಂದ ರೊಚ್ಚಿಗೆದ್ದ ತಳಸಮುದಾಯದ ಬೇಡಜನಾಂಗ ಈ ಕಾಯ್ದೆಗಳನ್ನು ವಿರೋಧಿಸಲು ಬ್ರಿಟಿಷರ

ಜೊತೆ ಹೋರಾಟವನ್ನು ಮಾಡುವಂತಾಯಿತು. "ಬ್ರಿಟಿಷ್ ಆಳ್ವಿಕೆಯ ರೀತಿ ರಿವಾಜುಗಳಿಗೆ ಸರಿಯಾಗಿ ಇನ್ನು ಹೊಂದಿಕೊಳ್ಳದಿದ್ದ ಈ ದುಡಿಯುವ ಜನ ಆಜ್ಞೆಗಳಿಂದ ದೊಡ್ಡ ಆಘಾತಗಳಿಗೆ ಒಳಗಾಗಿ ದಿಕ್ಕುತೋಚದೆ ತಮ್ಮ ಹೋರಾಟವನ್ನು ಮುಂದುವರೆಸಿ ಕೊನೆಗೆ ತಮ್ಮ ಪ್ರಾಣವನ್ನೆ ಕೊಟ್ಟರು. ಹೀಗೆ ಬ್ರಿಟಿಷ್ ಸರ್ಕಾರ ಈ ಬೇಡ ಸಮುದಾಯಗಳನ್ನು ನಾಗರಿಕ ಬದುಕಿನಿಂದ ಶ್ರಮ ಬದುಕಿನ ಮೂಲಗಳಿಂದ ಸ್ವಾವಲಂಬಿ ನೆಲೆಗಳಿಂದ ವಂಚಿತರನ್ನಾಗಿ ಮಾಡಿತ್ತು ಎನ್ನುವುದು ಅವರ ಕುರಿತಾಗಿರುವ ಲಾವಣಿಗಳೇ ಸ್ಪಷ್ಟಪಡಿಸುತ್ತವೆ. ನಿಶಸ್ತ್ರೀಕರಣ ಕಾಯ್ದೆಯ ಬಿಸಿ ತಟ್ಟಿದ್ದು ಹೆಚ್ಚಾಗಿ ದುಡಿಯುವ ವರ್ಗಕ್ಕೆ."[೧೪]

ಲಾವಣಿಗಳು ಕೆಳವರ್ಗಗಳ ಅಂತಸ್ಥೈರ್ಯ ಹಾಗೂ ತಲ್ಲಣಗಳಿಗೆ ಸಾಕ್ಷಿಗಳಾಗಿವೆ. ಅಸ್ತಿತ್ವವನ್ನೇ ಅಡಗಿಸಲು ಪ್ರಯತ್ನಿಸಿದ ಪ್ರಭುತ್ವದ ಹುನ್ನಾರದ ವಿರುದ್ಧ ನಡೆದ ದಂಗೆಗಳನ್ನು ಬರಿ ಬ್ರಿಟಿಷ್ ವಿರೋಧಿ ಅಥವಾ ಭಾರತ ರಾಜಕೀಯ ಸ್ವಾತಂತ್ರ್ಯ ರಂಗತಾಲೀಮು"[೧೫] ಹಾಗೆ ಕಾಣುವುದು ಸರಿಯಲ್ಲ. ಸ್ವಾತಂತ್ರ್ಯದ ಪರಿಕಲ್ಪನೆಯೇ ಇಲ್ಲದೆ ಬದುಕು ಅರಸುತ್ತಿರುವ ಸಮುದಾಯಗಳು ಈಗಲೂ ಇರುವ ಹಲಗಿ ಬಂಡಾಯದ ವೀರರು ಮತ್ತು ಸಿಂಧೂರ ಲಕ್ಷ್ಮಣರ ಪ್ರತಿರೋಧಗಳನ್ನು ತಾಲೀಮು ತರ ನೋಡಲು ಹೊಸರೀತಿಯಲ್ಲಿ ನೋಡುವ ಅವಕಾಶ ಇದ್ದೇ ಇದೆ ಎಂದು ಹೇಳಲಾಗುತ್ತಿದೆ. ಅವುಗಳನ್ನು ರಾಷ್ಟ್ರೀಯವಾದಿ ನೆಲೆಯಲ್ಲಿ ನೋಡದೆ ಸಾಂಸ್ಕೃತಿಕವಾಗಿ ತಳಸಮುದಾಯದ ಹಾಗೆ ಅಂದರೆ ಸಬಾಲ್ಟರ್ನ್ ನೆಲೆಯಲ್ಲಿ ಅಧ್ಯಯನ ಮಾಡಿದಾಗ ಇಂತಹ ಸಮುದಾಯದ ಸ್ಪಷ್ಟಚರಿತ್ರೆ ಸಾಧ್ಯವಾಗುತ್ತದೆ. ಅಲ್ಲದೆ ಅವರ ಸ್ಥಳೀಯ ಸಾಮಾಜಿಕ ತುರ್ತಿನಲ್ಲಿಟ್ಟು ವ್ಯಾಖ್ಯಾನಿಸುವ ಅವಶ್ಯಕತೆ ಇದೆ ಎನ್ನಲಾಗಿದೆ. ಈ ರೀತಿ ಮಾಡಿದಾಗ ಹೊಸರೀತಿಯ ಸೂಕ್ಷ್ಮ ಚಾರಿತ್ರಿಕ ಸಂಕಥನಗಳನ್ನು ನಮ್ಮದಾಗಿಸಿಕೊಳ್ಳಬಹುದಾಗಿದೆ. ಅದಕ್ಕಾಗಿ ಇಂತಹ ತಳಸಮುದಾಯದ ಪ್ರತಿರೋಧಗಳನ್ನು ಅರ್ಥ ಮಾಡಿಕೊಳ್ಳುವ ನೆಲೆಯೇ ಬದಲಾಗಬೇಕಾಗಿದೆ ಎನ್ನುವುದು ಈ ಕೃತಿಯ ಪ್ರಮುಖ ಧೋರಣೆಯಾಗಿದೆ.

**೫. ಧೀರ ಟಿಪ್ಪುವಿನ ಲಾವಣಿಗಳು, (ಸಂ) ಲಿಂಗದೇವರ ಹಳೆಮನೆ**

ಬ್ರಿಟಿಷ್ ವಿರೋಧಿ ಪ್ರತಿಭಟನಾಕಾರರಲ್ಲಿ ಅತಿ ಹೆಚ್ಚು ವೀರರು ತಳಸಮುದಾಯದಿಂದ ಬಂದವರಾಗಿದ್ದರು. ಆದರೆ ಒಬ್ಬ ಮುಸ್ಲಿಂ ಧರ್ಮದ ಸುಲ್ತಾನನಾಗಿ ಬ್ರಿಟಿಷರನ್ನು ಅತ್ಯಂತ ಗಂಭೀರವಾಗಿ ವಿರೋಧಿಸಿ ಅವರ ಜೊತೆ ಅತ್ಯಂತ ಪ್ರಾಮಾಣಿಕತೆಯಿಂದ ಹೋರಾಟ ಮಾಡಿದವನು ಟಿಪ್ಪುಸುಲ್ತಾನ್. ಟಿಪ್ಪು ಸುಲ್ತಾನ್ ಒಬ್ಬ ನಾಯಕ. ಅವನ ಬಗ್ಗೆ ಚಿತ್ರಿಸಿರುವ ಇತಿಹಾಸ ಪೂರ್ವಾಗ್ರಹಗಳಿಂದ ಕೂಡಿದ್ದಾಗಿದ್ದು, ಅದಕ್ಕೆ ಭಿನ್ನವಾಗಿ ಸಾಂಪ್ರದಾಯಿಕವಲ್ಲದ ಮೂಲಗಳಿಂದ ದೊರೆಯುವ ಮಾಹಿತಿಯು ಟಿಪ್ಪುಸುಲ್ತಾನನ್ನು ಉದಾತ್ತವಾಗಿ ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಇದಕ್ಕೆ ಜನಪದರ ಲಾವಣಿಗಳನ್ನು ಹೇಳಬಹುದಾಗಿದೆ. ಇಂತಹ ನಿದರ್ಶನಗಳಿರುವ ಲಾವಣಿಗಳ ಸಂಗ್ರಹ ಮತ್ತು ವಿಶ್ಲೇಷಣಾತ್ಮಕ ಕೃತಿಯಾಗಿದೆ.

### ೬. ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ, ಶಿವಾನಂದ ಗುಬ್ಬಣ್ಣನವರ್

ಈ ಕೃತಿ ಒಂದು ಪಿಎಚ್.ಡಿ. ಮಹಾಪ್ರಬಂಧವಾಗಿದೆ. ಜನಪದ ಸಾಹಿತ್ಯ ಪ್ರಕಾರಗಳಲ್ಲೊಂದಾದ ಲಾವಣಿ ಸಾಹಿತ್ಯ ರಾಷ್ಟ್ರೀಯ ಚಳವಳಿಯ ವಿದ್ಯಮಾನಗಳನ್ನು ಗ್ರಾಮಾಂತರ ಪ್ರದೇಶಗಳ ಜನರಿಗೆ ವಿವರಿಸಿ ಅವರಲ್ಲಿ ರಾಷ್ಟ್ರ, ರಾಷ್ಟ್ರೀಯತೆ ಪರಿಕಲ್ಪನೆ ಮೂಡಿಸುವಲ್ಲಿ ಯಶಸ್ವಿಯಾಗುವ ಮೂಲಕ ರಾಷ್ಟ್ರೀಯ ಚಳವಳಿಯನ್ನು ಗ್ರಾಮಾಂತರ ಪ್ರದೇಶಗಳಿಗೆ ಪಸರಿಸುವ ಕಾರಣವಾಯಿತೆಂಬುದನ್ನು ವಿಶ್ಲೇಷಿಸುವುದೇ ಈ ಕೃತಿಯ ಪ್ರಮುಖ ಉದ್ದೇಶವಾಗಿದೆ. ಉತ್ತರ ಕರ್ನಾಟಕದ ಲಾವಣಿ ರಚನಾಕಾರರು ರಾಷ್ಟ್ರೀಯ ಚಳವಳಿಯನ್ನು ಜನಸಾಮಾನ್ಯರಿಗೆ ತಲುಪಿಸುವ ಸಲುವಾಗಿ ಲಾವಣಿಯನ್ನು ಒಂದು ಮಾಧ್ಯಮವನ್ನಾಗಿ ಮಾಡಿಕೊಂಡು ಆ ಎಲ್ಲಾ ಚಳವಳಿಗಳಾದ ೧೯೦೫ರಲ್ಲಿ ಬಂಗಾಳ ಪ್ರಾಂತ್ಯ ವಿಭಜನೆಯಿಂದ ಪ್ರಾರಂಭಗೊಂಡ ಸ್ವದೇಶ ಚಳವಳಿಯೆಂದು ಕರೆಯುವ ಸ್ವರಾಜ್ಯ ಚಳವಳಿ ಮುಂತಾದ ಚಳವಳಿಗಳನ್ನು ಲಾವಣಿ ಎಂಬ ಮಾಧ್ಯಮದಲ್ಲಿ ಚಿತ್ರಿಸತೊಡಗಿದರು. ಇಂತಹ ಚಿತ್ರಣಗಳನ್ನು ಜನಸಾಮಾನ್ಯರ ಮೇಲೆ ಪ್ರಭಾವ ಬೀರಿದಂತೆ ಮಾಡಲು ಲಾವಣಿ ಸಾಹಿತ್ಯ ತುಂಬಾ ಸಹಾಯಕವಾಯಿತು ಎನ್ನುವುದು ಲೇಖಕರ ಅಭಿಪ್ರಾಯವಾಗಿದೆ.

"ಗ್ರಾಮೀಣ ಜನರಿಗೆ ರಾಷ್ಟ್ರೀಯ ಚಳವಳಿಯ ವಿದ್ಯಮಾನಗಳನ್ನು ವಿವರಿಸಿ ಅವರಲ್ಲಿ ರಾಷ್ಟ್ರರಾಷ್ಟ್ರೀಯತೆ ಪರಿಕಲ್ಪನೆ ಮೂಡಿಸಿ ಅವರನ್ನು ರಾಷ್ಟ್ರೀಯ ಚಳವಳಿಯೆಡೆಗೆ ಆಕರ್ಷಿಸಲು ಲಾವಣಿ ಸಾಹಿತ್ಯ ಪ್ರೇರಕವಾಗಿದೆ"[೧೬] ಎಂಬುದಾಗಿ ಅಭಿಪ್ರಾಯ ಪಡಲಾಗಿದೆ. ರಾಷ್ಟ್ರೀಯ ಚಳವಳಿಯ ಅಂಗವಾಗಿ ಹುಟ್ಟಿಕೊಂಡ ಖಾದಿ ಪ್ರಚಾರ, ಪಾನನಿರೋಧ, ಅಸ್ಪೃಶ್ಯತಾ ನಿವಾರಣೆ ಮುಂತಾದ ವಿಧಾಯಕ ಕಾರ್ಯಕ್ರಮಗಳು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರಗೊಳ್ಳಲು ಲಾವಣಿ ಸಾಹಿತ್ಯ ಸಹಾಯಕವಾಗಿದೆ. ಕರ್ನಾಟಕ ಏಕೀಕರಣ ಚಳವಳಿ, ಉಪ್ಪಿನ ಸತ್ಯಾಗ್ರಹ, ಸ್ವದೇಶ ಚಳವಳಿ ಮುಂತಾದ ಚಳವಳಿಗಳು ಗ್ರಾಮಾಂತರ ಪ್ರದೇಶಗಳಲ್ಲಿ ಹರಡಲಿಕ್ಕೆ ಲಾವಣಿ ಸಾಹಿತ್ಯ ಪೂರಕವಾಗಿರುವುದನ್ನು ಲೇಖಕರು ವಿಶ್ಲೇಷಿದ್ದಾರೆ. ಈ ಕೃತಿಯ ಅಧ್ಯಯನದ ಸ್ವರೂಪವನ್ನು ಗಮನಿಸಿ ಇದೊಂದು ಚಾರಿತ್ರಿಕ ಅಧ್ಯಯನ ಪದ್ಧತಿ ಎಂದು ಗುರುತಿಸಬಹುದು. ರಾಷ್ಟ್ರೀಯ ಚಳವಳಿಯ ವಿವಿಧ ಹಂತಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಲಾವಣಿಗಳು ಸಂವಹನ ಮಾಧ್ಯಮವಾಗಿ ಗ್ರಾಮೀಣ ಜನರಿಗೆ ರಾಷ್ಟ್ರೀಯ ಚಳವಳಿ ಮಾಹಿತಿ, ಮಹತ್ವಗಳನ್ನು ವಿವರಿಸಿ ಅವರನ್ನು ರಾಷ್ಟ್ರೀಯ ಚಳವಳಿಯೆಡೆಗೆ ಆಕರ್ಷಿಸಿರುವುದನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ. ರಾಷ್ಟ್ರೀಯ ಲಾವಣಿಗಳ ಪರಿಶೀಲನೆಯ ಜೊತೆ ರಾಷ್ಟ್ರೀಯ ಚಳವಳಿ ಚರಿತ್ರೆಗಳೊಂದಿಗೆ ಹೋಲಿಸಿ ತೌಲನಿಕ ಅಧ್ಯಯನವನ್ನು ಕೂಡ ಮಾಡಲಾಗಿದೆ.

ಈ ಕೃತಿಯ ಒಳಗಡೆ ೧೦ ಅಧ್ಯಾಯಗಳಲ್ಲಿ ಇದನ್ನು ವಿಂಗಡಿಸಿಕೊಳ್ಳಲಾಗಿದೆ. ಮೊದಲನೇ ಅಧ್ಯಾಯದಲ್ಲಿ ಲಾವಣಿ ಪದದ ಉತ್ಪತ್ತಿ, ಅರ್ಥವಿವರಣೆ, ಇತಿಹಾಸ, ಲಕ್ಷಣ ಪ್ರಕಾರ ಹಾಗೂ ಗೀತ ಗೋಷ್ಠಿ ನಡೆಸುವ ಸಂದರ್ಭಗಳ ಸುದೀರ್ಘ ಚರ್ಚೆಯನ್ನು ಮಾಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ರಾಷ್ಟ್ರೀಯತೆ ಪದದ ಅರ್ಥ, ಅಭಾವ ಹಾಗೂ ಉದಯದ ಕಾರಣಗಳನ್ನು

ಚರ್ಚಿಸುತ್ತಾ ರಾಷ್ಟ್ರೀಯ ಚಳವಳಿಯ ವಿಕಾಸದೆಡೆಗೆ ಗಮನ ಹರಿಸಿದೆ. ಮೂರನೆಯ ಅಧ್ಯಾಯ ಕರ್ನಾಟಕ ಪದ ಉತ್ಪತ್ತಿ, ಸ್ವರೂಪ, ಪರಾಮರ್ಶೆಯ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ರಾಷ್ಟ್ರೀಯ ಚಳವಳಿಗಿದ್ದ ಅಡೆತಡೆಗಳು ಹಾಗೂ ಅವುಗಳ ನಿವಾರಣೆಯಾಗಿ ರಾಷ್ಟ್ರೀಯ ಚಳವಳಿ ಆರಂಭಗೊಂಡ ಬಗೆ ವಿವರಿಸಿದರೆ ನಾಲ್ಕನೆಯ ಅಧ್ಯಾಯ ರಾಷ್ಟ್ರೀಯ ಲಾವಣಿ ಸಾಹಿತ್ಯ ಸೃಷ್ಟಿಯ ಪ್ರೇರಣೆಗಳು ಲಾವಣಿಗಳ ರಚನಾಕಾರರು, ಭಾರತದ ಗತವೈಭವ, ರಾಷ್ಟ್ರೀಯ ಧುರೀಣರು ಹಾಗೂ ರಾಷ್ಟ್ರೀಯ ಚಳವಳಿಯ ವಿವಿಧ ಹಂತದ ಲಾವಣಿಗಳ ಸುದೀರ್ಘ ಚರ್ಚೆ ಒಳಗೊಂಡಿದೆ. ಐದನೆಯ ಅಧ್ಯಾಯ ಭಾರತೀಯ ಮಹಿಳೆಯ ಸಾಮಾಜಿಕ ಸ್ಥಾನಮಾನ, ರಾಷ್ಟ್ರೀಯ ಚಳವಳಿಯಲ್ಲಿ ಭಾರತ, ಕರ್ನಾಟಕದ ಮಹಿಳೆಯರು ಪಾಲ್ಗೊಳ್ಳುವಿಕೆಯ ಹಿನ್ನೆಲೆಯಲ್ಲಿ ರಾಷ್ಟ್ರೀಯ ಚಳವಳಿಯಲ್ಲಿ ಮಹಿಳಾ ಲಾವಣಿಗಳ ಮಹತ್ವ ವಿವರಿಸಿದರೆ, ಆರನೆಯ ಅಧ್ಯಾಯ ಸಂಸ್ಥಾನಗಳ ಚಾರಿತ್ರಿಕ ಹಿನ್ನೆಲೆ ಭಾರತ ಕರ್ನಾಟಕದ ಸಂಸ್ಥಾನಗಳ ಮೇಲೆ ರಾಷ್ಟ್ರೀಯ ಚಳವಳಿಯ ಪ್ರಭಾವದ ಪಡಿನೆರಳೊಳಗೆ ಸಂಸ್ಥಾನಗಳಲ್ಲಿ ರಾಷ್ಟ್ರೀಯ ಲಾವಣಿಗಳ ಚರ್ಚೆ ಒಳಗೊಂಡಿದೆ. ಏಳನೆಯ ಅಧ್ಯಾಯ ಖಾದಿ ಪದದ ಅರ್ಥ, ತತ್ವ, ರಾಷ್ಟ್ರೀಯ ಚಳವಳಿಯಲ್ಲಿ ಖಾದಿಯ ಮಹತ್ವ ಕರ್ನಾಟಕದಲ್ಲಿ ಖಾದಿ ಪ್ರಚಾರಕ್ಕಿದ್ದ ಅಡೆತಡೆಗಳು ಹಾಗೂ ಅವು ನಿವಾರಣೆಯಾದ ಹಿನ್ನೆಲೆಯಲ್ಲಿ ಖಾದಿ ಪ್ರಚಾರದ ಲಾವಣಿಗಳ ಪರಿಶೀಲನೆ ನಡೆಸಿದರೆ ಎಂಟನೆಯ ಅಧ್ಯಾಯ ಪಾನನಿರೋಧ ಪ್ರೇರಣೆಗಳು, ರಾಷ್ಟ್ರೀಯ ಚಳವಳಿಯಲ್ಲಿ ಪಾನನಿರೋಧದ ಮಹತ್ವ, ಕರ್ನಾಟಕದಲ್ಲಿ ಪಾನನಿರೋಧದ ಪ್ರಯತ್ನಗಳ ಹಿನ್ನೆಲೆಯಲ್ಲಿ ಪಾನನಿರೋಧಗಳ ಲಾವಣಿಗಳ ಪಾತ್ರ ಪರಿಚಯಿಸುತ್ತದೆ. ಒಂಭತ್ತನೆಯ ಅಧ್ಯಾಯ ಅಸ್ಪೃಶ್ಯತೆಯ ಉಗಮ, ರಾಷ್ಟ್ರೀಯ ಚಳವಳಿಯಲ್ಲಿ ಅಸ್ಪೃಶ್ಯತಾ ನಿವಾರಣೆಯ ಮಹತ್ವ, ಕರ್ನಾಟಕದಲ್ಲಿ ಅಸ್ಪೃಶ್ಯತಾ ನಿವಾರಣೆಯ ಲಾವಣಿಗಳ ಮಾಹಿತಿ ಒಳಗೊಂಡರೆ ಹತ್ತನೆಯ ಅಧ್ಯಾಯ ಕರ್ನಾಟ ಏಕೀಕರಣ ಪ್ರೇರಣೆಗಳು, ರಾಷ್ಟ್ರೀಯ ಚಳವಳಿ ಹಾಗೂ ಭಾಷಾವಾರು ಪ್ರಾಂತ್ಯ ರಚನೆ, ಏಕೀಕರಣ ಹಿನ್ನೆಲೆಯಲ್ಲಿ ಏಕೀಕರಣ ಲಾವಣಿಗಳ ಪರಾಮರ್ಶೆ ಒಳಗೊಂಡಿದೆ. ಒಟ್ಟಾರೆಯಾಗಿ ಈ ಕೃತಿ ರಾಷ್ಟ್ರೀಯ ಲಾವಣಿಗಳ ಪ್ರಸ್ತುತೆ ಹಾಗೂ ಅವುಗಳ ಉಳಿಮೆ, ಬೆಳಮೆಯ ಬಗೆಗಿನ ಚರ್ಚೆ ಒಳಗೊಂಡಿದೆ.

**ಲೇಖನಗಳು**

**೧. ಜಾನಪದದಲ್ಲಿ ನರಗುಂದ ದರ್ಶನ, ಜಾನಪದ ಸೃಷ್ಠಿ ದೃಷ್ಟಿ, ಲೇಖಕರು ಬೀಳಗಿ ಹಸನ್‌ಬಿ**

ಜಾನಪದದಲ್ಲಿ ನರಗುಂದದ ಚಿತ್ರಣವನ್ನು ನೀಡಲು ಲೇಖಕರು ಪ್ರಯತ್ನಿಸಿದ್ದಾರೆ. ನರಗುಂದದ ಇತಿಹಾಸ, ಸಂಸ್ಕೃತಿ, ವಿಶೇಷತೆ, ಧಾರ್ಮಿಕತೆ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ. ಬಾಬಾಸಾಹೇಬ ಅವರ ಬ್ರಿಟಿಷರ ವಿರುದ್ಧದ ಬಂಡಾಯವನ್ನು ನಾವಿಲ್ಲಿ ಸ್ಮರಿಸಬಹುದಾಗಿದೆ. ವಸಹಾತುಶಾಹಿಕಾಲದ ನರಗುಂದವು ಒಂದು ಸಮೃದ್ಧವಾದ ಸಂಸ್ಥಾನವಾಗಿತ್ತು. ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ಈ ಸ್ಥಳ ಅತ್ಯಂತ ಮುಖ್ಯವಾದ ಮತ್ತು ಅರ್ಥಪೂರ್ಣವಾದ ಸಂಕೇತವಾಗಿದೆ. ಯಾಕೆಂದರೆ ಸ್ಥಳೀಯ ಪಾಳೆಯಗಾರರು ಮತ್ತು ಸಂಸ್ಥಾನಿಕರು ಬ್ರಿಟಿಷರ ವಿರುದ್ಧ ಮಾಡಿದ ಹೋರಾಟಗಳ ಮಾದರಿಯನ್ನು ವಿವರಿಸುತ್ತದೆ.

**೨. ಕಳೆದುಕೊಂಡ ಬಾದಾಮಿಯ ಐತಿಹಾಸಿಕ ಲಾವಣಿ**

ಚದುರ ಜಾನಪದದಲ್ಲಿ ಪ್ರಕಟಗೊಂಡಿರುವ ಈ ಲೇಖನವು ಬಾದಾಮಿಯ ಕುರಿತಂತೆ ಜಾನಪದದ ಮತ್ತು ಚರಿತ್ರೆಯ ವಿವರಗಳನ್ನು ನೀಡುತ್ತದೆ. ಲೇಖಕರು ವಿವರಿಸುವಂತೆ ಈ ಲಾವಣಿಯ ಪೂರ್ಣ ಪಾಠ ದೊರೆತಿರುವುದಿಲ್ಲ. ಜನಪದರ ಅಸ್ಪಷ್ಟ ಸ್ಮೃತಿಯೊಳಗೆ ದಾಖಲಾಗಿದ್ದ ಕೆಲ ವಿವರಗಳನ್ನು ಮತ್ತು ಅರೆಕೊರೆ ಲಾವಣಿಯ ಕೆಲ ಭಾಗಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿದ ಲೇಖನವಿದಾಗಿದೆ. ಆದಾಗ್ಯೂ ಬಾದಾಮಿಯ ಕುರಿತಂತೆ ವಸಾಹತುಶಾಹಿ ಕಾಲದ ಕೆಲ ಸಾಂಸ್ಕೃತಿಕ ಚಿತ್ರಣಗಳನ್ನು ನೀಡಲು ಪ್ರಯತ್ನಿಸಲಾಗಿದೆ.

**೩. ಹಳ್ಳಿಯ ಹಾಡುಗಳಲ್ಲಿ ದೇಶಾಭಿಮಾನ**

ಭಾರತದ ಸ್ವಾತಂತ್ರ್ಯ ಹೋರಾಟಕಾಲಘಟ್ಟದಲ್ಲಿ ಪ್ರಚಲಿತಕ್ಕೆ ಬಂದ ರಾಷ್ಟ್ರೀಯತೆ ಕಲ್ಪನೆಯು ಎಷ್ಟರ ಮಟ್ಟಿಗೆ ಜನಪದರಲ್ಲಿ ಬೇರೂರಿತ್ತು ಎನ್ನುವುದು ಚರ್ಚನೀಯ ಅಂಶವಾಗಿದೆ. ವಾಸ್ತವವಾಗಿ ದೇಶದ ಕಲ್ಪನೆ ಬಂದದ್ದೇ ಬ್ರಿಟಿಷರು ಇಂಡಿಯಾವನ್ನು ಒಂದೇ ಆಡಳಿತಕ್ಕೆ ತಂದಾದ ಮೇಲೆ. ಹಾಗಾಗಿ ರಾಷ್ಟ್ರೀಯತವಾದಿ ಹೋರಾಟಗಳನ್ನು ದೇಶಭಕ್ತಿ ಪ್ರೇರಿತ ಹೋರಾಟಗಳೆಂದು ಕರೆಯಲಾಗದು. ಉದಾಹರಣೆಗೆ ಟಿಪ್ಪು ತನ್ನ ರಾಜ್ಯದ ಉಳಿವಿಗಾಗಿ ಹೋರಾಡಿದನೇ ಹೊರತು ನಮ್ಮ ರಾಷ್ಟ್ರೀಯವಾದಿಗಳು ವ್ಯಾಖ್ಯಾನಿಸುವ ಹಾಗೆ ದೇಶಭಕ್ತಿ ಪ್ರೇರೇಪಣೆಯಿಂದ ಹೋರಾಡಲಿಲ್ಲ. ಹಾಗೆ ನೋಡಿದರೆ ಅಂದು ಇಡಿಯಾಗಿ ದೇಶವೊಂದು ಅಸ್ತಿತ್ವದಲ್ಲಿಯೇ ಇರಲಿಲ್ಲ. ಇಂತಹ ದೇಶಭಕ್ತಿ ಉತ್ತೇರಕವಾದದ್ದು. ಇಡಿಯಾಗಿ ರಾಷ್ಟ್ರೀಯತೆಯ ಭಾವವನ್ನು ಹರಡಲು ಸ್ವಾತಂತ್ರ್ಯ ಹೋರಾಟಗಾರರು ಬಳಸಿಕೊಂಡ ತಂತ್ರದ ಒಂದು ಭಾಗವಾಗಿತ್ತು. ಹಳ್ಳಿಯಹಾಡುಗಳಲ್ಲಿ ದೇಶಾಭಿಮಾನವನ್ನು ಹುಡುಕುವ ಪ್ರಯತ್ನದ ಹಿಂದೆ ಇಂತಹುದೇ ಮನಸ್ಥಿತಿ ಇದೆಯೆಂದು ಹೇಳಬಹುದು.

**೪. ಲೋಕಸಾಹಿತ್ಯದಲ್ಲಿ ಗಾಂಧೀಜಿ, ಸಮಗ್ರ ಜನಪದ ಸಂಪುಟ**

ವಾಸ್ತವವಾಗಿ ಗಾಂಧೀಜಿ ಜನಪದರ ದೃಷ್ಟಿಯಲ್ಲಿ ಐತಿಹಾಸಿಕ ವ್ಯಕ್ತಿಯಾಗಿರಲಿಲ್ಲ. ನಿಜಕ್ಕೂ ಅವರು ದೇವರ ಅವತಾರವಾಗಿದ್ದರು. ಗಾಂಧೀಜಿಯವರೂ ಸಹ ಭಾರತೀಯರ ಧಾರ್ಮಿಕ ಮನಸ್ಥಿತಿಯನ್ನು ಚೆನ್ನಾಗಿಯೇ ಅರ್ಥಮಾಡಿಕೊಂಡಿದ್ದರು. ಧರ್ಮ ಮತ್ತು ದೇವರ ಬಗ್ಗೆ ಗಾಂಧೀಜಿಯವರಿಗೆ ಇದ್ದ ಜೀವಂತ ಶ್ರದ್ಧೆಯನ್ನು ನಾವಿಲ್ಲಿ ಗಮನಿಸಬಹುದು. ಇಂತಹ ಭಾರತೀಯರ ಧಾರ್ಮಿಕ ನಾಡಿಯನ್ನು ಹಿಡಿದೇ ಗಾಂಧೀಜಿ ಚಳವಳಿಯಲ್ಲಿ ಅದ್ಭುತವಾದ ಯಶಸ್ಸನ್ನು ಸಾಧಿಸಿದರು. ಭಜನೆ, ಕೀರ್ತನೆ, ರಾಮನಾಮ, ಈಶ್ವರ ಅಲ್ಲಾ ತೇರಾನಾಮಾ ಮುಂತಾಗಿ ದೇಶದ ಎಲ್ಲಾ ಬಗೆಯ ಧರ್ಮಗಳ ಜನರಿಗೂ ಹತ್ತಿರವಾದರು. ಹೀಗಾಗಿ ಜನಮನದ ಮಾನಸದಲ್ಲಿ ಗಾಂಧೀಜಿ ಅಪ್ಪಟ ಜನಪದೀಯ ವ್ಯಕ್ತಿಯಾಗಿ ರೂಪುಗೊಂಡರು. ಇದನ್ನು ಲೇಖಕರು ವಿವರಿಸಲು ಪ್ರಯತ್ನಪಟ್ಟಿದ್ದಾರೆ.

## ೫. ಸ್ವಾತಂತ್ರ್ಯ ಸಮರದ ಜನಪದ ಸಾಹಿತ್ಯ, ಜಾನಪದ ಜೀವಾಳ

ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರಲ್ಲಿ ಬ್ರಿಟಿಷರಿಂದ ಆಧುನಿಕ ಶಿಕ್ಷಣ ಪಡೆದ ವಿದ್ಯಾವಂತರು ಮಾತ್ರವಾಗಿರದೆ ಇಂತಹ ಶಿಕ್ಷಿತರ ಮಾರ್ಗದರ್ಶನದಲ್ಲಿ ಹೋರಾಟ ಮಾಡಿದ ಅಸಂಖ್ಯಾತ ಅನಕ್ಷರಸ್ಥ ಸಮುದಾಯವೂ ಪ್ರಮುಖವಾಗಿತ್ತು. ಈ ಎರಡೂ ವರ್ಗಗಳು ಒಂದಕ್ಕೊಂದು ಪೂರಕವಾಗಿದ್ದವು. ಮಹಾಸಂಸ್ಥಾನಗಳನ್ನು ಹೊರತು ಪಡಿಸಿದರೆ ಸಣ್ಣಪುಟ್ಟ ಪಾಳೆಯಪಟ್ಟುಗಳ ಪ್ರತಿರೋಧವನ್ನು ಅತ್ಯಂತ ಹತ್ತಿರದಿಂದ ಕಂಡು ಅದನ್ನು ಲಾವಣಿ, ಕಥೆಯ ಮೂಲಕ ನಿರೂಪಿಸಲು ಪ್ರಯತ್ನಪಟ್ಟವರು ಜನಪದರು. ಹೀಗಾಗಿ ಸ್ಥಳೀಯ ಚರಿತ್ರೆಯ ಪುನರ್‌ರಚನೆಯಲ್ಲಿ ಇಂತಹ ಮೌಖಿಕ ಆಕರಗಳು ಮುಖ್ಯವಾಗುತ್ತವೆ. ದೇಶದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯನ್ನು ಪುನರ್‌ರಚಿಸುವಲ್ಲಿ ಇಂತಹ ಸ್ವಾತಂತ್ರ್ಯ ಹೋರಾಟದ ಕುರಿತಾದ ಜನಪದ ಸಾಹಿತ್ಯವು ಹಲವು ವಿಶಿಷ್ಟ ಸಂಗತಿಗಳನ್ನು ನಿರೂಪಿಸಬಲ್ಲುದಾಗಿದೆ. ಈ ನಿಟ್ಟಿನಲ್ಲಿ ಕೆಲವೊಂದು ಅಧ್ಯಯನದ ವೈಧಾನಿಕತೆಯನ್ನು ಸ್ಪಷ್ಟಪಡಿಸಿಕೊಳ್ಳಲು ಇಂತಹ ಲೇಖನಗಳು ಸಹಕರಿಸುತ್ತವೆ ಎನ್ನುವುದರಲ್ಲಿ ಸಂಶಯವಿಲ್ಲ.

### ಕಿತ್ತೂರು ವೀರರನ್ನು ಕುರಿತು ಜನಪದ ಸಾಹಿತ್ಯ, ಜಾನಪದ ಕುರಿತು

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕಿತ್ತೂರಿನ ಸ್ಥಳೀಯ ಹೋರಾಟವು ಅತ್ಯಂತ ಜನಪ್ರಿಯವಾದ ಹೋರಾಟವಾಗಿದೆ. ಈ ಜನಪ್ರಿಯತೆಯೂ ಸಹ ಕಿತ್ತೂರಿನ ಸಂಸ್ಥಾನದ ಅಂತ್ಯದ ನಂತರ ಇದರ ಚರಿತ್ರೆಯನ್ನು ವೈಭವೀಕರಿಸುವುದರ ಮೂಲಕ ಈ ಜನಪ್ರಿಯತೆ ಉಂಟಾಯಿತು. ರಾಣಿ ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣನವರನ್ನು ಹುತಾತ್ಮರಂತೆ ಚಿತ್ರಿಸಲಾಯಿತು. ವಾಸ್ತವವಾಗಿ ಇದು ಒಂದು ಸ್ಥಳೀಯ ಬಂಡಾಯವಾಗಿತ್ತು. ದತ್ತುಮಕ್ಕಳಿಗೆ ಹಕ್ಕಿಲ್ಲವೆಂಬ ಬ್ರಿಟಿಷರ ಒಂದು ನಿಯಮದ ವಿರುದ್ಧ ಸ್ಥಳೀಯ ಪಾಳೆಯಪಟ್ಟೊಂದು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ನಡೆಸಿದ ಹೋರಾಟವಾಗಿದೆ. ನಂತರದ ಇತಿಹಾಸಕಾರರು ಚೆನ್ನಮ್ಮನ ಬಾಯಿಯಲ್ಲಿ ಬ್ರಿಟಿಷರನ್ನು ಕೆಂಪುಮೂತಿಯ ಕೋತಿಗಳು, ಭಾರತವನ್ನು ಅಖಂಡವಾದ ಪವಿತ್ರ ದೇಶವೆಂದೂ, ಇಂತಹ ಪವಿತ್ರ ದೇಶವನ್ನು ಬ್ರಿಟಿಷರು ಅಪವಿತ್ರಗೊಳಿಸದರೆಂದು ಬಂಡಾಯದ ಮಾತುಗಳನ್ನು ಹೇಳಿಸುತ್ತಾರೆ. ಇಂತಹ ಚರಿತ್ರೆಯು ನಿಜವಾದ ಚರಿತ್ರೆಯಲ್ಲ.

### ಕೃತಿಗಳು

**ಕ್ರಾಂತಿವೀರ ಸಂಗೊಳ್ಳಿರಾಯಣ್ಣ, ಡಾ. ನಿಂಗಣ್ಣ ಸಣ್ಣಕ್ಕಿ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ**

ಸಂಗೊಳ್ಳಿರಾಯಣ್ಣನವರನ್ನು ಅಪ್ರತಿಮ ಸ್ವಾಮಿಭಕ್ತ ಮತ್ತು ಸಂಸ್ಥಾನದ ರಕ್ಷಕನೆಂದು ಚಿತ್ರಿಸಲಾಗುತ್ತದೆ. ಈ ಮಾತಲ್ಲಿ ವಾಸ್ತವವಿದೆ. ರಾಜ್ಯದ ಪ್ರಮುಖ ಸಂಸ್ಥಾನಗಳೆಲ್ಲವೂ ತಮ್ಮ ರಕ್ಷಣೆಗಾಗಿ ಬೇಡ ಸಮುದಾಯದ ವೀರರನ್ನು ನಿಯಮಿಸಿಕೊಂಡಿರುವುದು ಸರ್ವೇಸಾಮಾನ್ಯವಾಗಿದೆ. ಇಂತಹ ಬೇಡ ಸಮುದಾಯದ ಸೈನಿಕರೇ ಆಗಲಿ, ಅಧಿಕಾರಿಗಳೇ ಆಗಿರಲಿ ಅಪ್ರತಿಮ ಸ್ವಾಮಿಭಕ್ತಿಯನ್ನು ಪ್ರದರ್ಶಿಸುತ್ತಾರೆ. ಇಂತಹ ಸ್ವಾಮಿಭಕ್ತಿಯನ್ನು ಸಂಗೊಳ್ಳಿರಾಯಣ್ಣನಲ್ಲಿ ಕಾಣಬಹುದಾಗಿದೆ. ಬಹುತೇಕ ಕಿತ್ತೂರ ರಾಣಿ ಚೆನ್ನಮ್ಮಳಷ್ಟೇ ಜನಪ್ರಿಯ ವ್ಯಕ್ತಿ ಇವನಾಗಿದ್ದನು.

ಹಾಗಾಗಿ ಜನಪದರು ಚೆನ್ನಮ್ಮ ರಾಣಿಯೊಂದಿಗೇ ಸಮಸಮನಾಗಿ ರಾಯಣ್ಣನ ಕುರಿತು ಹಾಡಿರುವುದು ವಿಶೇಷವಾಗಿದೆ.

**ವೀರರಾಣಿ ಕಿತ್ತೂರು ಚೆನ್ನಮ್ಮ, ಶ್ರೀಮತಿ ರತ್ನಶೀಲ ಶ್ರೀ ಗುರೆಡ್ಡಿ**

ಈ ಕೃತಿಯಲ್ಲಿ ಕಿತ್ತೂರು ಚೆನ್ನಮ್ಮನ ಕುರಿತಾದ ಲಾವಣಿಗಳನ್ನು ವಿಶ್ಲೇಷಿದ್ದಾರೆ. ಭಾರತದ ಸ್ವಾತಂತ್ರ್ಯದ ಹೋರಾಟದ ಬೆಳ್ಳಿಚುಕ್ಕಿಯಾದ ಚೆನ್ನಮ್ಮನು ಸಿಪಾಯಿ ದಂಗೆಗಿಂತಲೂ ಮೊದಲೇ ಬ್ರಿಟಿಷರ ವಿರುದ್ಧ ರಣಕಹಳೆ ಊದಿದವಳು. ಹೀಗಾಗಿ ಕಿತ್ತೂರು ಚೆನ್ನಮ್ಮನ ಕುರಿತಾಗಿ ಅಧ್ಯಯನ ಮಾಡುವ ಮಹತ್ವವಿದೆಯೆಂಬುದಾಗಿ ಲೇಖಕರು ವಿವರಿಸುತ್ತಾರೆ.

ಸ್ವಾತಂತ್ರ್ಯ ಸಂಗ್ರಾಮಕ್ಕೆ ಹಲಗಲಿ ಬೇಡರ ಕೊಡುಗೆ, ವೀರೇಂದ್ರ ಶೀಲವಂತ, ಪ್ರಸಾರಾಂಗ, ಕ.ವಿ.ವಿ.ಹಂ.

ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಹಲಗಲಿಯ ಬೇಡರು ಸಶಸ್ತ್ರ ನಿಷೇಧ ಕಾಯ್ದೆಯ ವಿರುದ್ಧ ಮಾಡಿದ ಹೋರಾಟವನ್ನು ಹಲಗಲಿಯ ಬೇಡರು ಲಾವಣಿಯು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಇದನ್ನು ಫ್ಲೀಟರ್ ಸಹ ವಿವರಿಸಿದ್ದಾನೆ. ಫ್ಲೀಟರ್ ಸಂಗ್ರಹಿಸಿದ ಲಾವಣಿಗಳಲ್ಲಿ ಗಮನಾರ್ಹವಾದ ಲಾವಣಿ ಇದಾಗಿದೆ. ಈ ಲಾವಣಿಯೊಂದಿಗೆ ಫ್ಲೀಟರನು ಉಪಯುಕ್ತ ಟಿಪ್ಪಣಿಗಳನ್ನು ಸಹ ನೀಡಿರುವುದು ಗಮನಿಸತಕ್ಕ ಅಂಶವಾಗಿದೆ.

**ಕನ್ನಡ ಲಾವಣಿಗಳು, ಡಾ. ಶ್ರೀಕಂಠಕೂಡಿಗೆ**

ಪ್ರಸ್ತುತ ಈ ಕೃತಿಯು ಲಾವಣಿಗಳ ತಾತ್ವಿಕ ಅಧ್ಯಯನವಾಗಿದೆ. ಲಾವಣಿ ಲೋಕದ ಅನಂತ ಜೀವನಾನುಭವನ್ನು ವೈವಿಧ್ಯವನ್ನು ಅದರ ಸಾಮಾಜಿಕ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವರ್ಗೀಕರಿಸಲಾಗಿದೆ. ಅವುಗಳ ಜೀವನ ಪರ ಹಾಗೂ ಜೀವ ವಿರೋಧಿ ನೆಲೆಗಳನ್ನು ಆಧುನಿಕ ದೃಷ್ಟಿಗೆ ಗ್ರಾಸವಾಗುವಲ್ಲಿ ಇರುವ ಪರಿಮಿತಿಗಳನ್ನು ಪರಿಶೀಲಿಸಿದೆ. ಕಾಲಕ್ರಮದಲ್ಲಿ ಅವುಗಳು ತಳೆದಿರುವ ಹೊಸ ಹೊಸ ಪ್ರಾದೇಶಿಕ ರೂಪ ಆಕಾರಗಳ ವಿಕಾಸ ಶೀಲ ಗತಿಯನ್ನು ಸೃಷ್ಟಿಶೀಲ ಗುಣಗಳನ್ನು ಗುರುತಿಸಲಾಗಿದೆ. ಇಂತಹ ಲಾವಣಿಗಳ ಹುಟ್ಟು, ಸ್ವರೂಪವನ್ನು ವಿವರಿಸುತ್ತಲೇ ಲಾವಣಿ ಸಾಹಿತ್ಯದ ಕುರಿತು ಸಮಗ್ರ ವಿಶ್ಲೇಷಣೆಯನ್ನು ಪ್ರಸ್ತುತ ಅಧ್ಯಯನವು ಒಳಗೊಂಡಿದೆ. ಲಾವಣಿ ಸಾಹಿತ್ಯದ ಚಾರಿತ್ರಿಕ ಅಗತ್ಯತೆಯನ್ನು ಲೇಖಕರು ಅರ್ಥಪೂರ್ಣವಾಗಿ ವಿವೇಚಿಸಿದ್ದಾರೆ. ಪ್ರಮುಖವಾಗಿ ಲಾವಣಿಯು ವೀರಸಾಹಿತ್ಯದ ಒಂದು ಪ್ರಕಾರವೆಂದು ಹೇಳಬಹುದಾಗಿದೆ. ಮುಖ್ಯವಾಗಿ ಬಲಿದಾನದ ವೀರನ ಅಥವಾ ಅವನ ಸಾಹಸಗಾಥೆಗಳನ್ನು ಜನಪದರು ಗ್ರಹಿಸಿದ ಕ್ರಮವನ್ನು ವಿಶ್ಲೇಷಿಸಲಾಗಿದೆ. ಹಾಗೆಯೇ ಇಲ್ಲಿನ ನಾಯಕನ ವೈಭವೀಕರಣವನ್ನು ಲಾವಣಿಕಾರನು ಚಿತ್ರಿಸುವುದು ವಿಶೇಷ. ಇಂತಲ್ಲಿ ವಸ್ತುಸ್ಥಿತಿಗಿಂತಲೂ ಜನಪದರು ತಮಗೆ ಹತ್ತಿರವಾದ ಮತ್ತು ನ್ಯಾಯವೆಂದು ಅನಿಸಿದ ಸಂಗತಿಗಳ ಕುರಿತು ಸಹಾನುಭೂತಿಯಿಂದ ಕಥನದ ಮೂಲಕ ವೈಭವೀಕರಿಸುತ್ತಾರೆ.

**ಜನಪದ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ, ಡಾ. ನಿಂಗಣ್ಣ ಸಣ್ಣಕ್ಕಿ**

ಈ ಕೃತಿ ಸ್ವಾತಂತ್ರ್ಯ ಹೋರಾಟದ ಸಂದರ್ಭದ ಕುರಿತು ಅಧ್ಯಯನವನ್ನು ಒಳಗೊಂಡಿದೆ. ರಾಷ್ಟ್ರ, ರಾಷ್ಟ್ರಗೀತೆ, ದೇಶ, ದೇಶೀಯತೆ, ರಾಷ್ಟ್ರ ಮಾತೆ, ಪ್ರಜಾಪ್ರಭುತ್ವ, ಗಾಂಧಿ ಮತ್ತು ನೆಹರು ಮುಂತಾದವರ ಕುರಿತು ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಜನಪದರು ಸ್ವಾತಂತ್ರ್ಯ ಸಂಗ್ರಾಮದ ಕುರಿತು ಬಹಳ ಪರಿಮಿತವಾದ ಜ್ಞಾನವನ್ನು ಹೊಂದಿದ್ದರೆಂದೇ ಹೇಳಬೇಕು. ಅವರಿಗೆ ಅಧಿಕೃತವೆಂದು ಹೇಳಲಾಗುವ ಚರಿತ್ರೆಯ ಜ್ಞಾನವಿರಲಿಲ್ಲ. ಬ್ರಿಟಿಷರ ವಿರುದ್ಧ ಅವರು ಸರಳವಾಗಿ ತಿಳಿದಿದ್ದು ಇಷ್ಟು. ಅವರು ದೇಶವನ್ನು ಲೂಟಿ ಮಾಡಲೆಂದೇ ಭಾರತಕ್ಕೆ ಆಗಮಿಸಿದ್ದಾರೆ. ನಾವು ಮುಖ್ಯವಾಗಿ ಸ್ವದೇಶಿ ವಸ್ತ್ರಗಳನ್ನು ಮಾತ್ರ ಧರಿಸಿಬಿಟ್ಟರೆ ನಮಗೆ ಸ್ವಾತಂತ್ರ್ಯ ದಕ್ಕುತ್ತದೆ ಎಂಬಿತ್ಯಾದಿ ವಿಷಯಗಳನ್ನು ಅವರು ಅದರ ಸಂಕೀರ್ಣ ಸ್ವರೂಪದಲ್ಲಲ್ಲದೆ ಸರಳ ರೀತಿಯಲ್ಲಿ ಗ್ರಹಿಸಿದ್ದರು. ಗಾಂಧೀಜಿಯನ್ನು ದೇವರ ಸ್ವರೂಪದಲ್ಲಿ ಅರ್ಥೈಸಿಕೊಂಡು ಬ್ರಿಟಿಷರನ್ನು ರಕ್ಕಸರಂತೆ ಕಲ್ಪಿಸಿಕೊಂಡು ದೈವತ್ವದ ಎದುರಿಗೆ ರಾಕ್ಷಸತ್ವದ ಸೋಲನ್ನು ಕಂಡುಕೊಳ್ಳಲು ಪ್ರಯತ್ನಿಸಿದರು. ಇದಕ್ಕೆ ತಕ್ಕಂತೆ ಇವರು ಧಾರ್ಮಿಕರಾಗಿದ್ದರು. ಸಾಮ್ರಾಜ್ಯಶಾಹಿಯ ಬೃಹತ್ ಸಾಮರ್ಥ್ಯವನ್ನು ಒಂದು ರೀತಿಯಲ್ಲಿ ಜನಪದರು ತಪ್ಪಾಗಿ ಅರ್ಥೈಸಿಕೊಂಡಿದ್ದರು.

ಹಾಗೆಯೇ ಇದೇ ಲೇಖಕರು ಕ್ರಾಂತಿವೀರ ಸಂಗೊಳ್ಳಿರಾಯಣ್ಣ ಎನ್ನುವ ಕಿರುಹೊತ್ತಿಗೆಯನ್ನು ರಚಿಸಿದ್ದಾರೆ. ಫ್ಲೀಟ್ ಸಂಗ್ರಹಿಸಿರುವ ರಾಯಣ್ಣನ ದಂಗೆ ಲಾವಣಿಯನ್ನು ಒಳಗೊಂಡಂತೆ ಇತರೆ ಜನಪದ ಆಕರಗಳನ್ನು ಬಳಸಿಕೊಂಡು ಸಂಗೊಳ್ಳಿ ರಾಯಣ್ಣನ ಮೂಲಕ ಕಿತ್ತೂರಿನ ಹೋರಾಟವನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಈ ಕಿರುಪುಸ್ತಕದ ಶೀರ್ಷಿಕೆಯೇ ಸೂಚಿಸುವಂತೆ ಇಲ್ಲಿ ಕ್ರಾಂತಿಯೇನೂ ನಡೆಯುವುದಿಲ್ಲ. ಬದಲಿಗೆ ಇದೊಂದು ಸ್ಥಳೀಯ ದಂಗೆಯಾಗಿದ್ದು ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ರೋಸಿಹೋದ ಸ್ಥಳೀಯ ಆಡಳಿತಾತ್ಮಕ ಘಟಕಗಳ ಪ್ರತಿಭಟನೆಯ ಸ್ವರೂಪವನ್ನು ಒಳಗೊಂಡುದಾಗಿದೆ. ಉಳಿದಂತೆ ಇದೂ ಸಹ ಸಂಗೊಳ್ಳಿರಾಯಣ್ಣನನ್ನು ವೈಭವೀಕರಿಸುವ ಪ್ರಯತ್ನವಾಗಿದೆ.

**ಸಂಗೊಳ್ಳಿರಾಯಣ್ಣ, ಶಿವರಾಮ್**

ಸಂಗೊಳ್ಳಿರಾಯಣ್ಣನ ಕುರಿತಾದ ವಿಶ್ಲೇಣೆ ಇದಾಗಿದೆ. ನಿರ್ದಿಷ್ಟ ಲಾವಣಿಗಳನ್ನಾಗಲೀ ಅಥವಾ ಜನಪದ ಸಾಹಿತ್ಯವನ್ನಾಗಲೀ ವಿಶ್ಲೇಷಣೆಗೆ ಬಳಸಿಕೊಳ್ಳದೆ ಕೇವಲ ಚರಿತ್ರೆಯ ಅಂಶಗಳನ್ನಷ್ಟೇ ಹೊಂದಿಸಿ ಇಲ್ಲಿ ಸಂಗೊಳ್ಳಿ ರಾಯಣ್ಣನ ವ್ಯಕ್ತಿಚಿತ್ರಣವನ್ನು ನೀಡಲು ಪ್ರಯತ್ನಿಸಲಾಗಿದೆ. ಹಾಗೆಯೇ ಸಂಗೊಳ್ಳಿರಾಯಣ್ಣನನ್ನು ಜನಾಂಗವೊಂದರ ನಾಯಕನಾಗಿ, ದುರಂತ ವೀರನನ್ನಾಗಿ ವೈಭವೀಕರಿಸಲು ಪ್ರಯತ್ನಿಸಲಾಗಿದೆ.

**ಜನಪದ ಹಾಡುಗಳಲ್ಲಿ ನರಗುಂದದ ಬಾಬಾಸಾಹೇಬ, ಸೋಮಶೇಖರ ಇಮ್ರಾಪುರ**

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಪ್ರಕಟಿಸಿದ ಚರಿತ್ರೆಗೆ ಸಂಬಂಧಿಸಿದ ಹಾಗೂ ಜನಪದ ವೀರರ ಕುರಿತಾದ ಮಾಲಿಕೆಯಲ್ಲಿ ಬಂದ ಪುಸ್ತಕ ಇದಾಗಿದೆ. ಸ್ಥಳೀಯ ಚರಿತ್ರೆಯೊಂದಿಗೆ

ಜನಪದ ಆಕರಗಳನ್ನು ಬಳಸಿಕೊಂಡು ಬ್ರಿಟೀಷರ ವಿರುದ್ಧದ ಸ್ಥಳೀಯ ಹೋರಾಟವನ್ನು ಚಿತ್ರಿಸಲು ಪ್ರಯತ್ನಿಸಿದ ಅರ್ಥಪೂರ್ಣ ಕೃತಿ ಇದಾಗಿದೆ. ಇತಿಹಾಸಕ್ಕೆ ನಿಲುಕದ ಎಷ್ಟೋ ಅಂಶಗಳನ್ನು ಲೇಖಕರು ಮೌಖಿಕ ಆಕರಗಳ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಇದೊಂದು ಸ್ಥಳೀಯ ಚರಿತ್ರೆಯ ಪುನರ್‌ರಚನೆಯ ಒಂದು ಅತ್ಯುತ್ತಮ ವಿಧಾನಕ್ಕೆ ನಿದರ್ಶನವೆಂದರೆ ತಪ್ಪಾಗಲಿಕ್ಕಿಲ್ಲ. ಹಾಗೆಯೇ ಸೋಮಶೇಖರ ಇಮ್ರಾಪುರ ಅವರ ಮತ್ತೊಂದು ಕಿರು ಪುಸ್ತಕ ಕಿತ್ತೂರನ್ನು ಕುರಿತ ಲಾವಣಿಗಳು ಹಾಗೂ ಇತರ ಸಾಹಿತ್ಯ ಕೂಡ ಅರ್ಥಪೂರ್ಣ ಅಧ್ಯಯನವಾಗಿದೆ. ಕಿತ್ತೂರಿನ ಕುರಿತಾದ ವೈಭವೀಕರಣ ಸಂಕಥನಗಳಿಗಿಂತ ಭಿನ್ನವಾದ ಈ ಅಧ್ಯಯನವು ಚರಿತ್ರೆಯನ್ನು ಪುನರ್‌ರೂಪಿಸುವ ಪ್ರಯತ್ನವೆಂದರೆ ತಪ್ಪಾಗಲಿಕ್ಕಿಲ್ಲ.

**ಬಂಡಾಯ ಜಾನಪದ, ಬಸವರಾಜ ಸಬರದ**

ಪ್ರತಿಭಟನೆಯನ್ನು ವಸ್ತುವಾಗುಳ್ಳ ಜನಪದ ಸಾಹಿತ್ಯದ ಆಕರಗಳನ್ನು ವಿಶ್ಲೇಷಿಸುವ ಪ್ರಯತ್ನ ಇದಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಈ ಕೃತಿಯು ಒಂದು ವೈಧಾನಿಕತೆಯನ್ನು ಮತ್ತು ತಾತ್ವಿಕ ಚೌಕಟ್ಟನ್ನು ಒದಗಿಸಿಕೊಟ್ಟಿದೆ ಎಂದೇ ಹೇಳಬಹುದು. ಬ್ರಿಟಿಷ್ ವಸಾಹತುಶಾಹಿ ವಿರುದ್ಧದ ಸ್ಥಳೀಯ ಬಂಡಾಯಗಳನ್ನು ತಿರುಚಿ ಸ್ವಾತಂತ್ರ್ಯ ಹೋರಾಟಕ್ಕೆ ಪೂರಕವಾಗಿ ನಡೆದ ವ್ಯವಸ್ಥಿತ ಘಟನೆಗಳು ಎಂಬಂತೆ ಬಿಂಬಿಸಲಾಗುತ್ತಿತ್ತು. ಆದರೆ ಇಂತಹ ಚಿಂತನೆಗೆ ಭಿನ್ನವಾಗಿ ಆ ಎಲ್ಲಾ ಸ್ಥಳೀಯ ಹೋರಾಟಗಳು ಪಾಳೆಯಪಟ್ಟುಗಳ ಅಸ್ತಿತ್ವದ ಹೋರಾಟಗಳಾಗಿದ್ದವು ಎಂಬ ಕುತೂಹಲಕಾರಿ ಅಂಶವನ್ನು ಲೇಖಕರು ವಿವರಿಸಿರುವುದು ಗಮನಾರ್ಹ ಅಂಶವಾಗಿದೆ. ಝಾನ್ಸಿ ರಾಣಿ ಲಕ್ಷ್ಮೀ ಬಾಯಿಯಿಂದ ಹಿಡಿದು ಕಿತ್ತೂರು ಚೆನ್ನಮ್ಮನವರೆಗೆ ಎಲ್ಲಾ ಸ್ಥಳೀಯ ಪ್ರತಿಭಟನೆಗಳ ಹಿಂದೆ ವ್ಯವಸ್ಥಿತ ಸಂಘಟನೆಯೊಂದು ಕೆಲಸ ಮಾಡುತ್ತಿತ್ತು ಎಂದು ರಾಷ್ಟ್ರೀಯವಾದಿ ಇತಿಹಾಸಕಾರರು ಆರೋಪಿಸುತ್ತಿದ್ದರು. ಹಾಗೆಯೆ ರಾಷ್ಟ್ರೀಯತವಾದಿ ಚಿಂತನೆಯ ಮೂಲಕವೇ ಈ ಪ್ರತಿಭಟನೆಗಳು ಹುಟ್ಟಿಕೊಂಡವು ಎಂದು ವಾದಿಸಲಾಗುತ್ತಿತ್ತು. ವಾಸ್ತವವಾಗಿ ರಾಷ್ಟ್ರದ ಪರಿಕಲ್ಪನೆಯೇ ಇಂತಹ ಹೋರಾಟಗಳ ನಂತರದ ಕಾಲಘಟ್ಟದಲ್ಲಿ ಆಧುನಿಕ ಶಿಕ್ಷಣದ ಮೂಲಕ ಪ್ರವೇಶಿಸಿರುವುದಾಗಿದೆ. ಝಾನ್ಸಿರಾಣಿ ಲಕ್ಷ್ಮಿಬಾಯಿಗಾಗಲಿ, ಕಿತ್ತೂರು ಚೆನ್ನಮ್ಮನಿಗಾಗಲೀ ರಾಷ್ಟ್ರೀಯವಾದದ ಓನಾಮ ಸಹ ತಿಳಿದಿರಲಿಲ್ಲ.

**ಉತ್ತರ ಕರ್ನಾಟಕದ ಜನಪದ ವೀರಗೀತೆಗಳು, ಸೈದಾಪೂರ**

ಮಧ್ಯಕಾಲೀನ ಕಾಲಘಟ್ಟದಿಂದಲೂ ಬ್ರಿಟಿಷ್ ಆಳ್ವಿಕೆಯ ಕಾಲದವರೆಗೂ ಉತ್ತರ ಕರ್ನಾಟಕ ಭಾಗದಲ್ಲಿ ಹುಟ್ಟಿಕೊಂಡ ಪಾಳೆಯಪಟ್ಟುಗಳ, ರಾಜ್ಯಗಳ ಯುದ್ಧಗಳಿಗೆ ಸಂಬಂಧಿಸಿದ ಹಾಗೂ ಬ್ರಿಟಿಷರೊಂದಿಗಿನ ಸ್ಥಳೀಯ ಆಡಳಿತಗಾರರು ನಡೆಸಿದ ಪ್ರತಿಭಟನೆಗಳ ವಸ್ತುವಾಗುಳ್ಳ ಜನಪದ ವೀರಸಾಹಿತ್ಯದ ನಿರ್ವಚನೆ, ಲಕ್ಷಣ, ವಿನ್ಯಾಸಗಳನ್ನು ವಿವರಿಸುವ ಗ್ರಂಥ ಇದಾಗಿದೆ. ಜನಪದ ವೀರಸಾಹಿತ್ಯದ ನಿರ್ವಚನವನ್ನು ಹೀಗೆ ಮಾಡಬಹುದಾಗಿದೆ. "ವೀರ ಸಾಹಿತ್ಯವೆಂದರೆ ವೀರರ ಕುರಿತಾದ ಸಾಹಿತ್ಯ. ಸಮುದಾಯವೊಂದರ ಒಳತಿಗಾಗಿ ಮತ್ತು ಅದರ ರಕ್ಷಣೆಗಾಗಿ ನಾಡನ್ನು ಆಳುವ ದೊರೆ ಅಥವಾ ಸಾಮಂತನು ಆಕ್ರಮಣಕಾರರ ವಿರುದ್ಧ ಹೋರಾಡಿ ಜಯಸಾಧಿಸಿಯೋ

ಅಥವಾ ವೀರಮಣವನ್ನು ಅಪ್ಪಿಯೋ ಜನಪದರ ಮನಸ್ಸಿನಲ್ಲಿ ಅಜರಾಮರನಾದ ವೀರನ ಸ್ತುತಿಕಾವ್ಯವನ್ನು ವೀರಸಾಹಿತ್ಯವೆಂದು ಕರೆಯಬಹುದಾಗಿದೆ. ಈ ಲಕ್ಷಣಗಳ ಶಿಷ್ಟಕಾವ್ಯಗಳನ್ನು ವೀರಸಾಹಿತ್ಯದ ವ್ಯಾಪ್ತಿಗೆ ಸೇರಿಸಬಹುದಾಗಿದೆ. ಉದಾಹರಣೆಗೆ ಕುಮಾರರಾಮನ ಕುರಿತಾದ ಶಿಷ್ಟ ಮತ್ತು ಜನಪದ ಕಾವ್ಯಗಳೆರಡೂ ಈ ವ್ಯಾಪ್ತಿಯ ಕಾವ್ಯಗಳಾಗಿವೆ. ಮಧ್ಯಕಾಲೀನ ಚರಿತ್ರೆಯೊಂದಿಗೆ ಮುಂದುವರೆದ ಈ ಪರಂಪರೆ ವಸಹಾತುಶಾಹಿ ಕಾಲಘಟ್ಟದಲ್ಲಿ ತನ್ನ ಉಚ್ಛ್ರಾಯ ಸ್ಥಿತಿಯನ್ನು ತಲುಪಿತೆನ್ನಬಹುದು. ಯಾಕೆಂದರೆ ಬ್ರಿಟಿಷರ ವಿರುದ್ಧದ ಅಸ್ತಿತ್ವದ ನೆಲೆಗಾಗಿ ಹೋರಾಟ ಮಾಡಿದ್ದು ಹೆಚ್ಚಾಗಿ ಸ್ಥಳೀಯ ಸಂಸ್ಥಾನಗಳೇ ಆಗಿವೆ. ದೊಡ್ಡ ದೊಡ್ಡ ರಾಜ್ಯಗಳ ಬೆನ್ನೆಲುಬು ಮುರಿದ ಬ್ರಿಟಿಷರು ಅಸಂಖ್ಯಾಕ ಸ್ಥಳೀಯ ಸಂಸ್ಥಾನಗಳನ್ನು ತಮ್ಮ ಹದ್ದುಬಸ್ತಿಗೆ ತಂದುಕೊಳ್ಳಲು ಹೈರಾಣವಾದರು. ಇದು ಹೆಚ್ಚು ಕಡಿಮೆ ಸಿಂಹವನ್ನು ಸೋಲಿಸಿದ ನೊಣದ ಕಥೆಯ ಮಾದರಿಯಲ್ಲೇ ಇವೆ. ಇವು ವಾಸ್ತವವಾಗಿ ಬ್ರಿಟಿಷರಿಗೆ ಗೆಲುವುಗಳಾಗಿರದೆ ಗೆದ್ದು ಸೋತ ಸಂಘಟನೆಗಳಾಗಿವೆ. ಇಂತಹ ಅಸಂಖ್ಯಾತ ಸಂಸ್ಥಾನಗಳು ಬ್ರಿಟಿಷರೊಂದಿಗೆ ರಾಜಿಗೆ ಒಪ್ಪದೆ ಹೋರಾಟಕ್ಕಿಳಿದು ನಾಶವಾದ ಕತೆಗಳು ನಮ್ಮ ಜನಪದ ಕವಿಗಳ ಮನಸ್ಸನ್ನು ಕಲಕಿವೆ. ಇಂತಹ ವೀರರ ಜನಪದ ಕಥನಕಾವ್ಯಗಳಾದ ಲಾವಣಿಗಳು ಇಂತಹ ವೀರರ ಕಥನಗಳ ನಿರೂಪಣೆಯಾಗಿವೆ. ವಿಶೇಷವಾಗಿ ಇಂತಹ ಸಾಹಿತ್ಯವನ್ನು ವೀರಸಾಹಿತ್ಯವೆಂದು ಕರೆಯಬಹುದಾಗಿದೆ". ಸೈದಾಪೂರ ಅವರ ಪ್ರಸ್ತುತ ಕೃತಿಯು ಸಮರ್ಥವಾದ ಅಧ್ಯಯನ ಗ್ರಂಥವಾಗಿರದಿದ್ದರೂ ಸಹ ವಿಪುಲವಾದ ಮಾಹಿತಿಯನ್ನು ಒದಗಿಸಿಕೊಡುವ ಒಂದು ಆಕರಗ್ರಂಥವಾಗಿದೆ.

**ದಕ್ಷಿಣಕರ್ನಾಟಕದ ಜನಪದ ,ಕಾವ್ಯ ಪ್ರಕಾರಗಳು, ಜೀ.ಶಂ. ಪರಮಶಿವಯ್ಯ**

ದಕ್ಷಿಣ ಕರ್ನಾಟಕದ ಜನಪದ ಸಾಹಿತ್ಯದ ಪ್ರಕಾರಗಳಿಗೆ ಸಂಬಂಧಿಸಿದ ಅಧಿಕೃತ ಮಾಹಿತಿ ಮತ್ತು ವಿಶ್ಲೇಷಣೆಯನ್ನು ಒಳಗೊಂಡ ಕೃತಿಯಾಗಿದೆ. ಉತ್ತರ ಕರ್ನಾಟಕದ ಜನಪದ ಸಾಹಿತ್ಯ ಪ್ರಕಾರಗಳಿಗೂ ಮತ್ತು ದಕ್ಷಿಣದ ಜನಪದ ಸಾಹಿತ್ಯ ಪ್ರಕಾರಗಳಿಗೂ ಮೂಲಭೂತ ವ್ಯತ್ಯಾಸವೇನೂ ಇಲ್ಲ.

**"ಲಾವಣಿ ಎನ್ನುವ** ಶಬ್ದವನ್ನು ಪ್ರಮುಖ ವರ್ಗವನ್ನು ನಿರ್ದೇಶಿಸಲು ಬಳಸಲಾಗುತ್ತಿದೆ. ಪಿರಿಯಾಪಟ್ಟಣದ ಲಾವಣಿ, ಸರ್ಜಪ್ಪ ನಾಯಕನ ಲಾವಣಿ, ಟಿಪ್ಪುಸುಲ್ತಾನ ಲಾವಣಿ ಮುಂತಾದ ಕೆಲವು ಐತಿಹಾಸಿಕ ರಚನೆಗಳನ್ನು ಕರ್ತೃಗಳೇ ಲಾವಣಿ ಎಂದು ಕರೆದಿದ್ದಾರೆ. ಉದಾಹರಣೆಗೆ 'ಪಿರಿಯಾಪಟ್ಟಣದ ಲಾವಣಿ, ಹೇಳತೀನಿ ಕೇಳಿರಿ ಮಾಸಭೆಯೆಲ್ಲ' ಎಂದು ಹೇಳಿರುವುದನ್ನು ಗಮನಿಸಬಹುದು.

ಕನ್ನಡದಲ್ಲಿ ಲಾವಣಿಗಳು ಗರಡಿಯ ಮನೆಯವರಲ್ಲಿ ಬಳಕೆಯಲ್ಲಿದ್ದವು ಎಂದು ಸಹ ಗುರುತಿಸಲಾಗಿದೆ. ಲಾವಣ್ಯ, ಸಂವಾದ, ಪವಾಡ ಮುಂತಾದ ಹೆಸರುಗಳು ಇಂತಹ ರಚನೆಗಳಿಗೆ ಆರೋಪಿಸಲ್ಪಡುತ್ತಿದ್ದು ಇವೆಲ್ಲ ಒಂದು ಬಗೆಯ ಸಂವಾದ ಗೀತೆಗಳು ಎಂದು ಅಭಿಪ್ರಾಯ ಪಡಲಾಗಿದೆ. ಲಾವಣಿ ಎಂಬ ಪದ ಷಟ್ಪದಿ ಕಾವ್ಯಗಳಲ್ಲಿ ಯುದ್ಧದ ಕುಣಿತ, ಸೌಂದರ್ಯ,

ಕೌಶಲ್ಯ, ಪ್ರಯೋಗ, ಚಾತುರ್ಯ ಎಂಬ ಅರ್ಥದಲ್ಲಿ ಬಳಕೆಯಾಗಿವೆ. ಉತ್ಸಾಹಭರಿತ ಚರಣಗೀತೆಗಳನ್ನು ಸೈನಿಕರನನು ಹುರಿದುಂಬಿಸುವ ಸಲುವಾಗಿ ಹಾಡಲಾಗುತ್ತಿತ್ತು. ಇವನ್ನು ಖಳನ ಹಾಡು, ಲಯಪ್ರಧಾನವಾದ ರಣಗೀತೆಗಳು ಎಂದು ಹೆಸರಿಸಲಾಗಿದೆ. ಕರ್ನಾಟಕದ ಪ್ರಸಿದ್ಧ ಕಲ್ಗಿತುರಾಯಿ ಸಂಪ್ರದಾಯವನ್ನು ಲಾವಣಿ ಸಂಪ್ರದಾವೆಂದೇ ಕರೆಯಲಾಗುತ್ತದೆ. ಹರದೇಶಿ ನಾಗೇಶಿ ಎಂಬ ಹೆಸರು ಈ ಸಂಪ್ರದಾಯಕ್ಕೆ ಅನ್ವಯವಾಗುತ್ತದೆ. ಈ ಹಾಡುಗಾರಿಕೆಯ ಕೂಟದಲ್ಲಿ ಭಾಗವಹಿಸುವವರು ಲಾವಣಿಕಾರರು. ನಮ್ಮ ಈ ಸಂಗ್ರಹದಲ್ಲಿ ನಾವು ಪ್ರಸಿದ್ಧರಾದ ಏಳು ಮಂದಿ ಲಾವಣಿ ಕಾರರ ಮಿಗಿಲಾದ ಹನ್ನೆರಡು ಲಾವಣಿಗಳನ್ನು ನಾಡಿಗರ ಎದುರಿಗೆ ಇಟ್ಟಿದ್ದೇವೆ ಎಂಬ ಮಾತುಗಳು ಈ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತವೆ ಎಂಬುದಾಗಿ ಸಿಂಪಿಲಿಂಗಣ್ಣ ಮತ್ತು ಪಿ ಧೂಲಾಸಾಹೇಬ್ ಅವರು ಜೀವನ ಸಂಗೀತ ಎಂಬ ಕೃತಿಯಲ್ಲಿ ವ್ಯಕ್ತಪಡಿಸುತ್ತಾರೆ.[೧] ಹೀಗೆ ಜೀ ಶಂ. ಪರಮಶಿವಯ್ಯ ಅವರು ಕರ್ನಾಟಕದ ಜನಪದ ಸಾಹಿತ್ಯದ ಪ್ರಕಾರಗಳ ಕುರಿತು ಉಪಯುಕ್ತ ಗ್ರಂಥ ರಚಿಸಿದ್ದಾರೆ.

**ಹಲಗಲಿ ಗ್ರಾಮ ಜಾನಪದ, ಶ್ರೀ ರಾಮ ಇಟ್ಟಣ್ಣನವರ್**

ಇಡಿಯಾಗಿ ಗ್ರಾಮವೊಂದರ ಸಾಂಸ್ಕೃತಿಕ ಅಧ್ಯಯನವು ಜನಪದೀಯ ಅಧ್ಯಯನದ ಮಾದರಿಯಾಗಿದ್ದು ಇದು ಇಡಿಯಾಗಿ ಗ್ರಾಮ ಸಮಾಜವೊಂದರ ಆಂತರಿಕ ಸಂಬಂಧಗಳು, ವೈರುಧ್ಯಗಳನ್ನು ಮತ್ತು ಅದರ ಎಲ್ಲಾ ವೈಶಿಷ್ಟ್ಯಗಳನ್ನು ಕಟ್ಟಿಕೊಡುವ ಅಧ್ಯಯವಾಗಿದೆ. ಇದು ವರ್ತಮಾನದ ಪಾತಳಿಯಲ್ಲಿಯೇ ಇದ್ದುಕೊಂಡು ಮೌಖಿಕ ಆಕರಗಳ ಮೂಲಕ ಗ್ರಾಮವೊಂದರ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವಾಗಿದೆ. ಈ ಅಧ್ಯಯನ ಕ್ರಮವು ವೈಜ್ಞಾನಿಕವಾಗಿದ್ದು ದಾಖಲೆಗಳಲ್ಲಿ ನಿರೂಪಿತವಾಗದಿರುವ ಚರಿತ್ರೆಯನ್ನು ಮತ್ತು ಸಾಂಸ್ಕೃತಿಕ ಅಂಶಗಳನ್ನು ಮೌಖಿಕ ಆಧಾರಗಳ ಮೇಲೆ ಪುನರ್‌ರೂಪಿಸುವ ವಿಶಿಷ್ಟ ಪ್ರಯತ್ನವಾಗಿದೆ. 'ಹಲಗಲಿ' ಗ್ರಾಮವು ಪೀಟರ್ ಸಂಗ್ರಹಿಸಿದ ಲಾವಣಿಯ ಮೂಲಕವಷ್ಟೆ ನಮಗೆ ಪರಿಚಯವಾದರೆ ಇಂತಹ ಅಧ್ಯಯನಗಳಿಂದ ಭೂತ ಮತ್ತು ವರ್ತಮಾನಗಳ ನಿಜದ ಹಲಗಲಿಯು ನಮ್ಮ ಕಣ್ಮುಂದೆ ಬರುತ್ತದೆ. ಇಂತಹ ಪ್ರಯತ್ನದ ಫಲವೇ ಇಟ್ಟಣ್ಣನವರ ಹಲಗಲಿ ಗ್ರಾಮದ ಜನಪದೀಯ ಅಧ್ಯಯನವಾಗಿದೆ.



## ಅಧ್ಯಾಯ : ಮೂರು

# ಪ್ರತಿರೋಧ : ಒಂದು ತಾತ್ವಿಕ ಚರ್ಚೆ

"ಪ್ರತಿರೋಧ" ಎನ್ನುವ ಪದ ಈ ಅಧ್ಯಯನದ ಪರಿಕಲ್ಪನಾತ್ಮಕ ಪದವಾಗಿದೆ. ಆದ್ದರಿಂದ ಲಾವಣಿ ಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳನ್ನು ಕುರಿತು ಅಧ್ಯಯನ ಮಾಡುವುದಕ್ಕಿಂತ ಮುಂಚಿತವಾಗಿ ಪ್ರತಿರೋಧದ ಕುರಿತು ತಾತ್ವಿಕ ಚರ್ಚೆ ಮಡುವುದು ಅವಶ್ಯವಾಗಿರುವುದರಿಂದ ಇದನ್ನು ನನ್ನ ಅಧ್ಯಯನದ ಒಂದು ಭಾಗವಾಗಿ ಮಾಡಿಕೊಂಡು ಚರ್ಚಿಸಲಾಗಿದೆ. ಇದರಲ್ಲಿ 'ಪ್ರತಿರೋಧ' ಎಂದರೇ ಏನು? ಅದರ ಅರ್ಥ, ಸ್ವರೂಪ, ಲಕ್ಷಣ ಅದರ ಮಾದ್ಯಮ ಮತ್ತು ಅದರ ಪರಂಪರೆ ಕುರಿತು ಈ ಅಧ್ಯಾಯದಲ್ಲಿ ಚರ್ಚೆ ಮಾಡಲಾಗಿದೆ.

"ಪ್ರತಿರೋಧ" ಎಂದರೆ ಏನು? ಎಂದು ಅರ್ಥೈಸುವುದಕ್ಕಿಂತ ಮುಂಚೆ ಈ ಪದದ ಅರ್ಥವನ್ನು ನೋಡುತ್ತಾ. ಈ ಪದದಲ್ಲಿ ಎರಡು ಪದಗಳಿರುವುದು ಕಂಡು ಬರುತ್ತದೆ. ಒಂದು 'ಪ್ರತಿ' ಇನ್ನೊಂದು 'ರೋಧ', 'ಪ್ರತಿ' ಎಂದರೆ ಒಂದರ 'ಪ್ರತಿಬಿಂಬ', 'ಒಂದರ ಎದುರು' ಒಂದಕ್ಕೆ ಸಮನಾದ ಮತ್ತೋಂದು ಅದರ 'ಎದುರಾಳಿ' ಮುಂತಾದ ಅರ್ಥಗಳಿವೆ. ಹಾಗೆ 'ರೋಧ' ಎಂದರೆ ಸಾಮಾನ್ಯವಾಗಿ 'ವಿರೋಧ' ಸಿಟ್ಟು, ಆಕ್ರೋಶ, ಮುಂತಾದವು. ಈ ಎರಡು ಪದಗಳನ್ನು ಕೂಡಿಸಿದಾಗ "ಪ್ರತಿ+ರೋಧ"= ಪ್ರತಿರೋಧ ಪ್ರತಿ ಎಂದರೆ ಒಂದರ ಎದುರು ಮತ್ತೊಂದು 'ರೋಧ' ಎಂದರೆ 'ವಿರೋಧ' ಎರಡನ್ನು ಸೇರಿಸಿದಾಗ 'ಒಂದರ ಎದುರು ಮತ್ತೊಂದು ವಿರೋಧವನ್ನು ವ್ಯಕ್ತಪಡಿಸುವುದು ಎಂದು ಅರ್ಥೈಸಲಾಗುತ್ತದೆ. ಪ್ರತಿಭಟನೆ ಎನ್ನುವ ಪದ ಇಂಗ್ಲೀಷಿನ "Resistance" ಎಂಬ ಪದದಿಂದ ಕನ್ನಡದಲ್ಲಿ ಪ್ರತಿರೋಧಾ, ಪ್ರತಿಭಟನೆ ಎಂದು ಸಂವಾಧಿಸಿಕೊಳ್ಳಲಾಗಿದೆ. ಇದರ ಅರ್ಥ ವಿರೋಧಿಸು, ಪ್ರತಿಭಟಿಸು ವಿರೋಧ ಒಡ್ಡು, ಆಜ್ಞೆ ಮೊದಲಾದವುಗಳಂತೆ ವರ್ತಿಸು, ನಿರಾಕರಿಸು ಇನ್ನು "Resist" ಎಂದರೆ ಪ್ರತಿರೋಧಕ, ನಿರೋಧಕ, ವಿರೋಧಿಸುವುದು ಎದುರಿಸುವುದು, ನಿರೋಧಶಕ್ತಿ, ತಡೆದುಕೊಳ್ಳುವುದು ಅಡ್ಡಿ ಆತಂಕ ಅತ್ಯಂತ ಕಡಿಮೆ ಇರುವ ಹಾದಿ: ಹಾಗೆ "Resistant" ಎಂದರೆ ವಿರೋಧಿಸುವ ಪ್ರತಿಭಟಿಸುವ. ಪ್ರತಿಭಟನಶೀಲ ನಿರೋಧಕ ತಡೆಯುವ ಅಡ್ಡಿಪಡಿಸುವ ಮುಂತಾದವು ಒಟ್ಟಾರೆಯಾಗಿ 'ಪ್ರತಿರೋಧ' ಎಂದರೆ ಒಂದು ವಸ್ತು ಇನ್ನೊಂದು ವಸ್ತುವಿನ ಮೇಲೆ ಪ್ರಭಾವ ಬೀರಿ ಅದನ್ನು ತಡೆಯುವ, ನಿಧಾನ ಮಾಡುವ ನಿಲ್ಲಿಸುವ ಶಕ್ತಿ ಎಂದು ಕರೆಯಬಹುದು.

'ಪ್ರತಿರೋಧ' ಎನ್ನುವುದು ಒಂದು ನೈಸರ್ಗಿಕ ಕ್ರಿಯೆ ಅದು ಸೃಷ್ಟಿಯಲ್ಲಿರುವ ಪ್ರತಿಯೊಂದು ಜೀವಿ ಮತ್ತು ವಸ್ತುವಿನ ಗುಣ ಎಂದು ಹೇಳಬಹುದ. ಅದು ಒಂದು ಸ್ವಭಾವ. ಒಂದು ಸಿದ್ಧಾಂತ ತಿಳುವಳಿಕೆ ಬದುಕಿನ ಕ್ರಮ ಪ್ರಕೃತಿಯಲ್ಲಿ ಪರಿಸರದಲ್ಲಿ ಒಂದು ಕ್ರಿಯೆ ನಡೆದರೆ ಅದಕ್ಕೊಂದು ಪ್ರತಿಕ್ರಿಯೆ ಇದ್ದೆ ಇರುವುದು ಪ್ರಕೃತಿಯ ಸಹಜಗುಣ ಅದು ನಿಸರ್ಗದ ಪ್ರತಿ ಚರಾಚರ ವಸ್ತುವಿನಲ್ಲಿಯೂ ಈ ಗುಣ ಇರುವುದು ಖಂಡಿತ ಆದರೆ ಇದು ಪ್ರಾಣಿ, ಪಕ್ಷಿ, ಸಸ್ಯ, ನೀರು, ಬೆಂಕಿ ಮುಂತಾದವುಗಳಲ್ಲಿ ಪ್ರತಿರೋಧ ಇರುವುದು ಕಂಡು ಬರುತ್ತದೆ. ಯಾವುದೇ ಸಸ್ಯವನ್ನು ನಾವು ಮುಟ್ಟಿದಾಗ ಅದು ಒಂದು ಪ್ರತಿಕ್ರಿಯೆಯನ್ನು ತೋರಿಸುವುದು. ಉದಾ:- 'ಮುಟ್ಟಿದರೆ ಮುನಿ' ಎಂಬ ಸಸ್ಯ ಅದನ್ನು ಮುಟ್ಟಿದಾಗ ಈ ಸಸ್ಯದ ಎಲೆಗಳು ಮುದುಡಿಕೊಳ್ಳುತ್ತವೆ ಹಾಗೆ ಪುಷ್ಪಗಳ ಸಸ್ಯಗಳು ಗುಲಾಬಿ ಮತ್ತು ಪಾಪಸ್‌ಕಳ್ಳಿ ಇವುಗಳನ್ನು ಮುಟ್ಟಿದಾಗ ಅದರ ಮುಳ್ಳುಗಳು ತಾಗೆ ತಾಗುತ್ತದೆ. ಇದು ಸಸ್ಯಗಳಲ್ಲಿ ತೋರುವ ಪ್ರತಿರೋಧದ ಸ್ವರೂಪ ಎಂದು ಗುರುತಿಸಬಹುದು. ಅದೇ ರೀತಿ ನೀರು, ಬೆಂಕಿ ಅಲ್ಲಿಯೂ ಕೂಡಾ ನಾವು ಪ್ರತಿರೋಧದ ಸ್ವಭಾವವನ್ನು ಕಾಣುತ್ತೇವೆ ಹರಿಯುವ ನೀರನ್ನು ಕಟ್ಟಿದಾಗ ಅದು ಹೆಚ್ಚಾಗಿ ಕಟ್ಟಿ ಒಡೆಯುವುದು, ಬೆಂಕಿಯನ್ನು ಮುಟ್ಟಿದಾಗ ಮುಟ್ಟಿದ ಕೈ ಸುಡುವುದು ಹೀಗೆ ಇವುಗಳಲ್ಲಿ ಪ್ರತಿರೋಧದ ಗುಣವನ್ನು ಕಾಣುತ್ತೇವೆ ಅದೆ ತರ ಪ್ರಾಣಿಗಳಲ್ಲಿಯೂ ಕೂಡಾ ನಾವು ಪ್ರತಿರೋಧದ ಸ್ವಭಾವವನ್ನು ಕಾಣುತ್ತೇವೆ ಮನುಷ್ಯನು ಒಬ್ಬ ಪ್ರಾಣಿಯಾಗಿರುವುದರಿಂದ ಅವನು ಕೂಡಾ ಎಲ್ಲಾ ಪ್ರಾಣಿಗಳಿಗೆ ಹೊರತಾದವನಲ್ಲ. ಅವನಲ್ಲಿ ಅಗಾದವಾದ ಪ್ರತಿರೋಧದ ಸ್ವಭಾವವನ್ನು ನಾವು ಚರಿತ್ರೆಯಿಂದ ತಿಳಿದುಕೊಳ್ಳುತ್ತೇವೆ. ಅದಕ್ಕಾಗಿ ಇದನ್ನು ಮಾನವನ ಸಹಜ ಸ್ವಭಾವ ಅವನ ಮಾನಸಿಕವಾದ 'ಭಾವನೆಯಾಗಿದೆ. ಇದು ಅವರಲ್ಲಿ ಒಂದು ಪ್ರಕ್ರಿಯೆಯಾಗಿ ಕಂಡುಬರುತ್ತದೆ.

ಪ್ರತಿರೋಧವು ಮಾನವನಲ್ಲಿ ಹಲವಾರು ಸ್ವರೂಪದಲ್ಲಿ ಕಂಡುಬರುತ್ತದೆ ಮಾನವನ ಭಾಷಿಕ ಮತ್ತು ಭೌತಿಕ ಪ್ರತಿರೋಧ. ಮಾನವನು ತನಗೆ ಸಹಿಸಲಿಕ್ಕೆ ಆಗದೆ ಇರುವ ತನಗೆ ಅನ್ಯಾಯ ಆಕ್ರೋಶ ತನ್ನ ಜೀವನಕ್ಕೆ ಅಡ್ಡಿ ಆತಂಕವನ್ನು ತರುವ ಸಂಗತಿಯನ್ನು ಅಸಹನೆ, ಅಸಮ್ಮತ, ಭಿನ್ನಭಾವ ಟೀಕೆ, ತಕರಾರು, ಉಪೇಕ್ಷೆ, ನಿರ್ಲಕ್ಷ, ಆಲಕ್ಷ, ಮೌನ, ಕ್ರಿಯೆ, ಪ್ರತಿಕ್ರಿಯೆ ಮುಂತಾದ ಸ್ವರೂಪದಲ್ಲಿ ಕಂಡುಬರುತ್ತದೆ. ಇದೆ ಮುಂದೆ ಒಂದು ಸಿದ್ಧಾಂತವಾಗಿ ಒಂದು ತಿಳುವಳಿಕೆಯಾಗಿ ಒಂದು ಬದುಕಿನ ಕ್ರಮವಾಗಿ ಸಮಾಜದಲ್ಲಿ ಒಂದು ಚಟುವಟಿಕೆ ಯಾಗುತ್ತದೆ. ಆನಂತರ ಒಂದು ಆಲೋಚನಕ್ರಮವಾಗಿ ಒಂದು ಮೌಲ್ಯವಾಗಿ ಒಂದು ರಾಜಕಾರಣ ಮತ್ತು ಸಾಮಾಜಿಕ ಚಟುವಟಿಕೆಯಾಗಿ ಹೊರಹೊಮ್ಮುತ್ತದೆ ನಂತರ ಅದೊಂದು ಮೌಲ್ಯವಾಗಿ ಸಮಾಜದಲ್ಲಿ ಹೋರಾಟದ ರೂಪತಾಳಿ ಚಳುವಳಿ ಎಂದು ಹೆಸರು ಪಡೆದುಕೊಳ್ಳುತ್ತದೆ. ಈ ಚಳುವಳಿಗಳು ಸಂಘ ಸಂಘಟನೆಗಳಾಗಿ ಮಾರ್ಪಾಡುಗಳಾಗುತ್ತದೆ. ಅಷ್ಟೇ ಅಲ್ಲ ಇವು ಮಹಾಕ್ರಾಂತಿಗಳಾಗುವ ಸಾಧ್ಯತೆ ಇರುತ್ತದೆ. ಕೊನೆಗೆ ಕ್ರಾಂತಿಗಳಾಗಿ ರೂಪುಗೊಳ್ಳುತ್ತವೆ.

ಈ ಪ್ರತಿರೋಧ ಮಾನವನಲ್ಲಿ ಅಷ್ಟೇ ಅಲ್ಲ ಅವನ ಒಂದು ಸ್ವಭಾವವಾಗಿ ಕಂಡುಬರುತ್ತದೆ ಎಂದರೆ ನಿಸರ್ಗದ ಪ್ರತಿಯೊಂಬ್ಬ ಮಾನವನು ಕೂಡಾ ಹಾಗೆ ಅವನ ಜೀವನಕ್ಕೆ ಅವನ ಬದುಕಿಗೆ ಅವನ ಸ್ವಾತಂತ್ರಕ್ಕೆ ಅಡ್ಡಿ ಆತಂಕಗಳನ್ನು ಒಡ್ಡಿದಾಗ ಅವನು ಅದನ್ನು ಪ್ರತಿಕ್ರಿಯಿಸುತ್ತಾನೆ. ಹಾಗೆ ಮುಖ್ಯವಾಗಿ ಅವನ ಹಕ್ಕು ಮತ್ತು ಬದ್ಧತೆಗೋಸ್ಕರ ಅವನು ತನ್ನ ಎದುರಾಳಿಯ ಜೊತೆ ವಿರೋಧವನ್ನು ವ್ಯಕ್ತಪಡಿಸುತ್ತಾನೆ. ತನಗೆ ಸಾಮಾಜಿಕ ಸ್ಥಾನಮಾನ ಸಿಗದೆ ಇದ್ದಾಗ ಅವನು ಕಿಡಿ ಕಾರುತ್ತಾನೆ ಮನುಷ್ಯನಲ್ಲಿ ತಾರತಮ್ಯತೆ ಇದ್ದಾಗ ಅವನಿಗೆ ಅತಂತ್ರ್ಯತೆ ಅಬದ್ಧತೆ ಇರದೆ ಇದ್ದಾಗ ಸಹಜವಾಗಿ ರೂಪದಲ್ಲಿ ಇದು ಕಂಡುಬರುತ್ತದೆ.

ಹೀಗೆ ಮನುಷ್ಯನು ತನ್ನ ಪ್ರತಿರೋಧವನ್ನು ಹಲವಾರು ಮಾಧ್ಯಮಗಳ ಮೂಲಕ ವ್ಯಕ್ತಪಡಿಸುತ್ತಾನೆ. ಕಲೆ, ಸಂಗೀತ, ವಾಣಿಜ್ಯ, ಸಾಹಿತ್ಯ ತನ್ನ ಅಭಿವ್ಯಕ್ತಿಯಲ್ಲಿ ಹೋರಾಟ ಹೊಡೆದಾಟ, ಸಿನಿಮಾ ಮುಂತಾದವು.

ಮನುಷ್ಯ ಏನನ್ನು ಪ್ರತಿಭಟಿಸುತ್ತಾನೆ? ಎನ್ನುವುದಕ್ಕೆ ಸಾಮ್ರಾಜ್ಯ ಮುಷ್ಠಿಯಲ್ಲಿಟ್ಟುಕೊಂಡು ಕ್ರೂರಿಯನ್ನು ಪ್ರತಿಭಟಿಸುತ್ತಾನೆ. ತನ್ನ ಮಟ್ಟವೆ ದೊಡ್ಡದು ಎಂದು ಬೀರುವ ಅಹಂಕಾರಿಯನ್ನು ಪ್ರತಿಭಟಿಸುತ್ತಾನೆ. ಹೀಗಾಗಿ ಎಲ್ಲಾ ದೇಶಗಳಲ್ಲಿ ಮತಕ್ಕೆ ವಿರೋಧಗಳಾದವರನ್ನು ಕಾಣಬಹುದು.

"ಪ್ರತಿರೋಧದ ಪರಿಕಲ್ಪನೆಯನ್ನು ಅದರ ಈ ಕೆಳಗಿನ ಲಕ್ಷಣಗಳಿಂದ ಸ್ಪಷ್ಟಪಡಿಸಿ ಕೊಳ್ಳಬಹುದು."

೧. **ಐತಿಹಾಸಿಕ ಸಂದರ್ಭ:–** ಯಾವುದೇ ಪ್ರತಿಭಟನಾತ್ಮಕ ಚಳುವಳಿಗೆ ತಳಹದಿಯಾಗಿ ಒಂದು ರಾಜಕೀಯ ಆರ್ಥಿಕ, ಸಾಮಾಜಿಕ ಸಂದರ್ಭ ಒದಗಿ ಬರುತ್ತದೆ. ಈ ಸಂದರ್ಭದಲ್ಲಿ ಶೋಷಿತರ ಪಾಲಿಗೆ ಸುಧಾರಣೆಯ ಎಲ್ಲ ದಾರಿಗಳೂ ಮುಚ್ಚಿಟ್ಟು ಅವರು ದುಸ್ಥಿತಿಗೆ ತಳ್ಳಲ್ಪಟ್ಟು ಪ್ರತಿಭಟನೆಯನ್ನೇ ಬಿಡುಗಡೆಯ ಅಸ್ತ್ರವಾಗಿ ಸ್ವೀಕರಿಸುತ್ತಾರೆ.

೨. **ರಾಜಕೀಯ ಶಕ್ತಿಗಳ ದೃಢೀಕರಣ:–** ಶೋಷಿತರಲ್ಲಿ ಪ್ರತಿಭಟನೆಯ ಸಾಧ್ಯತೆಯನ್ನು ನಿರ್ಲಕ್ಷಿಸಿದ ಆಡಳಿತವರ್ಗವೂ ಬಲ ಪ್ರಯೋಗವನ್ನೇ ತಮ್ಮ ಅಸ್ತಿತ್ವದ ಸಾಧನವಾಗಿ ಬಳಸುತ್ತಾರೆ. ಪ್ರತಿಭಟನೆಯ ಸೂಚನೆಗಳು ರಾಜಕೀಯ ಶಕ್ತಿಗಳ ದೃವೀಕರಣವಾಗಿ ಚಳುವಳಿಯ ನಾಯಕರ ಹುಟ್ಟುಡಗಿಸುವಂತೆ ನಡೆಯುತ್ತಿದೆ.

೩. **ನಾಯಕತ್ವ:–** ಮೇಲೆ ಹೇಳಿದ ಐತಿಹಾಸಿಕ ಸಂದರ್ಭದಲ್ಲಿ ಬಹುಜನ ಹಿತಾಯ ಬಹುಜನ ಸುಖಾಯ ಎಂಬ ಉದ್ದೇಶವುಳ್ಳ ನಾಯಕನೊಬ್ಬ ಒದಗಿ ಬರುತ್ತಾನೆ. ಈ ಸಮುದಾಯದೊಳಗಿನಿಂದಲೂ ಬರಬಹುದು. ಅಥವಾ ಹೊರಗಿನಿಂದಲೂ ಬರಬಹುದು, ಹೊರಗಿನ ನಾಯಕತ್ವ ಲಭಿಸಿದರೂ ಸಾಕಷ್ಟು ಶೀಘ್ರವಾಗಿ ಒಳಗಿನ ನಾಯಕರೂ ಬೆಳೆದು ಬರುತ್ತಾರೆ.

**೪. ಪರಿಶ್ರಮ:–** ಶೋಷಣೆಗೊಳಗಾದವರ ಪೂರ್ಣ ಸಮುದಾಯವು ಚಳುವಳಿಯಲ್ಲಿ ನೇರವಾಗಿ ಪಾಲ್ಗೊಳ್ಳದಿದ್ದರೂ ಅದರಲ್ಲಿ ಪಾಲ್ಗೊಂಡವರಿಂದಾಗಿ ಇನ್ನುಳಿದವರ ಬದುಕು, ಕೂಡ ಗುಣಾತ್ಮಕ ಅಥವಾ ಋಣಾತ್ಮಕ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ.

**೫. ಪರಿವರ್ತನೆ:–** ಪ್ರತಿಯೊಂದು ಪ್ರತಿಭಟನಾತ್ಮಕ ಚಳುವಳಿಯೂ ಕಾಲಕಾಲೀನ ಮತ್ತು ತತಪ್ರದೇಶದ ಸಾಮಾಜಿಕ, ಆರ್ಥಿಕ ಪರಿವರ್ತನೆಕಗಳು ನಾಂದಿ ಹಾಡುತ್ತದೆ. ಇದು ರಾಜಕೀಯದ ಮೇಲೂ ಪರಿಣಾಮಗಳನ್ನುಂಟು ಮಾಡಿ ಹೊಸ ಆಡಳಿತ ವ್ಯವಸ್ಥೆ ರೂಪುಗೊಳ್ಳುತ್ತದೆ. ಉದಾ:– ಎಲ್ಲಾ ಪ್ರಜಾಪ್ರಭುತ್ವದ ಸರಕಾರಗಳ ಸ್ಥಾಪನೆಯ ಹಿಂದೆ ಪ್ರತಿಭಟನಾತ್ಮಕ ಕ್ರಾಂತಿ ನಡೆದ ಇತಿಹಾಸವಿದೆ.

**೬. ಹೊಸ ಮೌಲ್ಯಗಳ ಪ್ರತಿಷ್ಠಾಪನೆ:–** ಪ್ರತಿಭಟನಾತ್ಮಕ ಚಳುವಳಿಯ ಒಂದು ಉದ್ದೇಶವು ಇನ್ನೊಂದು ಪ್ರತಿಭಟನೆಗೆ ಎಡೆ ಮಾಡಿಕೊಡದಿರುವುದು ಅಂದರೆ ಸಮಾಜದಲ್ಲಿ ಶೋಷಣೆಗೆ ಪೋಷಣೆ ನೀಡುವ ಎಲ್ಲಾ ಮೌಲ್ಯಗಳನ್ನು ನಿವಾರಿಸಿ ಸಮಾನತೆಯ ಮೌಲ್ಯಗಳನ್ನು ಅಂಗೀಕರಿಸುವುದು.

ಅಸಮಾನತೆ ಮತ್ತು ಶೋಷಣೆಗಳನ್ನು ಅನಿರ್ಬಂಧಿತ ಹಕ್ಕನ್ನಾಗಿಸಿಕೊಂಡ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಯ ವಿರುದ್ಧದ ಆಲೋಚನೆಗಳು ಪ್ರತಿಭಟನಾ ಸ್ವರೂಪಗಳಾಗಿ ರೂಪಗೊಂಡು, ಸಂಘಟನಾತ್ಮಕ ಶಕ್ತಿಯನ್ನು ಪಡೆದುಕೊಂಡು ಹೋರಾಟ ಮತ್ತು ಚಳುವಳಿಗಳ ಮೂಲಕ ಜನಸಾಮಾನ್ಯರ ಬದುಕನ್ನು ಸುಧಾರಿಸಲು ಪ್ರಯತ್ನಿಸಿ ಹೊಸ ಸಂಸ್ಕೃತಿಯ ಹುಟ್ಟಿಗೆ ಕಾರಣವಾಗಿರುವುದನ್ನು ಇತಿಹಾಸದಲ್ಲಿ ಕಾಣುತ್ತೇವೆ. ಇಂಥ ಜನಪದ ಸಿದ್ಧಾಂತಗಳು ಹಲವು.

ಮಾನವ ತಾನು ಜನಿಸಿದಾಗಿನಿಂದ ಎಷ್ಟೇ ಕಷ್ಟ ಪರಂಪರೆಗಳು ಬಂದರೂ ಸಹಿತ ತಾನು ಬದುಕುವುದೇ ಅವನ ಪ್ರಥಮ ಪ್ರಯತ್ನವಾಗಿದೆ. ಹೀಗೆ ಬಾಳಿ ಬದಕಲು ಯತ್ನಿಸಿದ ಮಾನವನನ್ನು ಎರಡು ವಿಧವಾದ ಪ್ರತಿಬಂಧಕಗಳು ಅವನನ್ನು ಬಾಧಿಸಿರುವುದು ಕಂಡುಬರುತ್ತದೆ.

೧. ಭೌತಿಕ.

೨. ಸಾಮಾಜಿಕ.

**೧. ಭೌತಿಕ**

"ಭೌತಿಕವಾಗಿ ಪ್ರಕೃತಿ ತಂದೊಡ್ಡಿದ ತೊಡರುಗಳನ್ನು ಎದುರಿಸಿ ನಾಗರಿಕತೆಯನ್ನು ಸ್ಥಾಪಿಸಿದ ಮಹತ್ಕಾರ್ಯ ಗೌರವ ಮಾನವನಿಗೆ ಸಲ್ಲತಕ್ಕದಾಗಿದೆ ಮಾನವರ ಗುಂಪನ್ನು ಮೃಗಗಳ ಗುಣದ ಬೇರ್ಪಡಿಸುವ ವಿಶೇಷತೆ ಇದೇ ಆಗಿದೆ ಎಂದು ಹೇಳಬಹುದು ಮನುಷ್ಯ ತನ್ನ ಬುದ್ಧಿಶಕ್ತಿಯ ವಿಶೇಷದಿಂದ ಪ್ರಕೃತಿಯ ಚಲನವಲನಗಳ ಮೇಲೆ ಹತೋಟಿಯನ್ನು ಹೊಂದಿದ್ದಾನೆ. ಇದೇ ವಿಜ್ಞಾನದ ಸಾಧನೆ. ವಿಜ್ಞಾನವನ್ನು ಬೆಳೆಸುವುದರ ಮೂಲಕ ಮಾನವನು ಪ್ರಾಕೃತಿಕ

ಪ್ರತಿಬಂಧಕಗಳನ್ನು ಪರಿಹರಿಸಿಕೊಂಡಿದ್ದಾನೆ, ಪರಿಹರಿಸುತ್ತಿದ್ದಾನೆ; ಮತ್ತು ಉಳಿದಿರುವ ಸಮಸ್ಯೆಗಳ ಪರಿಹಾರಕ್ಕೆ ಶ್ರಮಿಸುತ್ತಿದ್ಧಾನೆ.

ಪ್ರಕೃತಿಯಿಂದ ಜನಿಸಿದ ಮನುಷ್ಯ ತನ್ನ ಜೀವನವನ್ನು ಸಾಗಿಸಲು ಸಮಾಜ ಜೀವಿಗಳಾದರು. ಆದರೆ ಪ್ರಕೃತಿಯ ಮೇಲೆ ಹೋರಾಡಿ ಸಾಧಿಸಿದಷ್ಟು ವಿಜಯವನ್ನು ಅವನು ತನ್ನ ಸಮಾಜ ಜೀವನದಲ್ಲಿ ಗಳಿಸಿಲ್ಲ ಎಂದು ಹೇಳಬಹುದು. ಪ್ರಕೃತಿಯಿಂದ ಸುಖವನ್ನು ಅನುಭವಿಸುವುದರ ಜೊತೆಗೆ ಮನುಷ್ಯ ತಾನು ಬಾಳಲು ನಿರ್ಮಿಸಿಕೊಂಡ ಸಮಾಜದಿಂದಲೂ ಬೇರೊಂದು ವಿಧವಾದ ಕಷ್ಟಗಳನ್ನು ಅನುಭವಿಸಿದ್ದಾನೆ. ಆದಿ ಮಾನವನ ಮತ್ತು ಅನಾಗರಿಕ ಕಾಲದ ಸಮಾಜಗಳ ಇತಿಹಾಸವನ್ನು ಬಿಟ್ಟರೆ (ಆದಿಯುಗ Prinitive Period) ಈವರೆಗೆ ಮನುಷ್ಯ ತನ್ನ ಬದುಕು ಸಾಗಿಸುತ್ತಿರುವ ಮಾನವ ನಿರ್ಮಿತ ಉಪಟಳಗಳಿಗೆ ಹೆಚ್ಚು ತುತ್ತಾಗಿದ್ದಾನೆ ಎಂದು ಹೇಳಬಹುದು. ಮನುಷ್ಯ ತನ್ನ ವ್ಯವಸ್ಥೆಯ ಒಳಗಡೆ ನಿಯಮಗಳು ಕಟ್ಟುಪಾಡುಗಳೇ ಮೊದಲಾದವು ಚೆನ್ನಾಗಿ ಬದುಕಲು, ಸುಖಸಂಪತ್ತುಗಳನ್ನು ಅನುಭವಿಸಲು ಹಾತೊರೆದ ಮನುಷ್ಯ ಜೀವಿಗಳ ಸ್ವಪ್ನವನ್ನು ಮಾಡಿವೆ.

ಹಸಿವು, ಬಡತನ, ಆಕ್ರಮಣ, ಶೋಷಣೆ, ದಬ್ಬಾಳಿಕೆ, ಬೇಧ, ಭಾವ, ಇವು ಈವರೆಗೆ ಮಾನವನನ್ನು ಕಾಡಿರುವುದು ಕಂಡು ಬರುತ್ತದೆ ಪ್ರಕೃತಿಯ ಮೇಲಣ ಜಯಲಾಭಕ್ಕಾಗಿ ನಿರ್ದೇಶಗೊಂಡ ಮನುಷ್ಯ ತನ್ನ ಪ್ರಯತ್ನ ಪರಂಪರೆಗಳೇ ಒಂದು ಇತಿಹಾಸವಾಗಿ ಕಂಡುಬರುತ್ತದೆ. ಮನುಷ್ಯ ಮನುಷ್ಯರಲ್ಲಿಯೇ ಕಲಹ, ಯುದ್ಧ, ಉಪಟಳ, ಇದರಿಂದ ನುಚ್ಚುನೂರಾದ ಜೀವನ; ಅದನ್ನು ಎದುರಿಸುವುದಕ್ಕೆ ಕೊಂಡ ಕ್ರಮಗಳು ಹೊಸ ಕಟ್ಟುಪಾಡುಗಳ; ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಯ ಒಳಗಡೆ ಬದಲಾವಣೆಗಳು ಇವುಗಳೇ ಮಾನವ ರಕ್ತ ಬಸಿಯುತ್ತಾ ಇರಬೇಕು ಕರಷಿರಂಗದಲ್ಲಿಯೂ ಕೂಡಾ ದುಡಿಮೆಗಾರರ ಪಾಡು ಹೇಳತೀರದು ಮಳೆ ಬರಲಿ ಬಿಡಲಿ ಪಸಲು ಬರಲಿ ಬಿಡಲಿ, ಪಸಲಿಗೆ ರೋಗ ತಗಲಿ ಬಿಡಲಿ ಅವರು ಎಷ್ಟೇ ನಷ್ಟ ಹೊಂದಿದರು ಕೂಡಾ ನಿಗದಿಯಾದ ಮೊತ್ತವನ್ನು ಅವರು ಹಣದ ರೂಪದಲ್ಲೇ ಅಥವಾ ಧಾನ್ಯದ ರೂಪದಲ್ಲೇ ತಮ್ಮ ಮಾಲೀಕರಿಗೆ ಸಲ್ಲಿಸಲೇಬೇಕು ಹೆಚ್ಚು ಆಸ್ತಿಯನ್ನು ಹೊಂದಿದವರಿಗೆ ನಷ್ಟ ಅಷ್ಟು ಪರಿಣಾಮಕಾರಿಯಾಗಿ ಕಾಣುವುದಿಲ್ಲ. ಹಲವು ಮೂಲಗಳಿಂದ ಅವರಿಗೆ ಆದಾಯ ಬರುತ್ತಾ ಇರುವುದರಿಂದ ಅವರಿಗೆ ಜಿವನವನ್ನು ನಿರ್ವಹಿಸಲು ಕಷ್ಟವಾಗಿಲ್ಲ ಆದರೆ ದುಡಿಯುವ ವರ್ಗದವರಿಗೆ ತಮ್ಮ ಕೂಲಿಗೆ ಸಿಕ್ಕ ಪ್ರತಿಫಲದಿಂದ ಇವರು ಊಟಮಾಡಲು ಹೊರಟರೆ ಸಾಲತೀರುವುದಿಲ್ಲ. ಸಾಲ ತೀರಿಸಲು ಹೋದರೆ ಹೊಟ್ಟೆಯ ಮೇಲೆ ಒದ್ದೆಯ ಬಟ್ಟೆ ಬರುತ್ತದೆ.

ಕೃಷಿನೇ ಮುಖ್ಯ ಕಸುಬಾಗಿರತಕ್ಕಂತ ಎಲ್ಲ ವ್ಯವಸ್ಥೆಗಳ ಜೀವನಕ್ರಮ ಅವರ ಶೈಲಿ ಇದೇ ಆಗಿರುತ್ತದೆ. ಪ್ರಾಚೀನಕಾಲದಿಂದ ಇವತ್ತಿನವರೆಗೂ ಭಾರತೀಯ ಇತಿಹಾಸದಲ್ಲಿ ಕಂಡುಬರುವ ಚಿತ್ರಣ ಇದೇ ಆಗಿರುತ್ತದೆ. ಆದರೆ ಪ್ರಪಂಚದ ಹಲವಾರು ಭಾಗದ ಹಲವಾರು ವ್ಯವಸ್ಥೇಗಳಲ್ಲಿ

ಖಾಸಗೀ ಸ್ವಾಯತ್ತತೆ ಮತ್ತು ದುಡಿಮೆಯ ಕ್ರಮ ವಿವಿಧ ರೂಪದಲ್ಲಿರುವುದು ತಿಳಿಯುತ್ತದೆ. ಅಂದಿನಿಂದ ಇಂದಿನವರೆಗೂ ಇದರಲ್ಲಿ ಅನೇಕ ಮಾರ್ಪಾಡುಗಳು ಕ್ರಮವಾಗಿ ಉದ್ಭವವಾಗಿವೆ. “ಆದಿಕಾಲದಲ್ಲಿ ಸೂರೆ ಗುಲಾಮಗಿರಿಗಳಿಂದ ಪ್ರಾರಂಭವಾದ ಶೋಷಣೆ ವ್ಯಾವಸಾಯವೇ ಮುಖ್ಯಕಸುಬಾಗಿದೆ. ಕೂಲಿಕಾರ್ಮಿಕ ವಾರ ಮತ್ತು ಗುತ್ತಿಗೆ ರೂಪಗಳಲ್ಲಿ ಎಲ್ಲ ದೇಶಗಳಲ್ಲೂ ನಡೆದಿವೆ. ಹದಿನಾರು ಮತ್ತು ಹದಿನೇಳನೇ ಶತಮಾನಗಳಲ್ಲಿ ವಾಣಿಜ್ಯ, ವ್ಯಾಪಾರ ಮತ್ತು ಕೈಗಾರಿಕೆಗಳು ಅಭಿವೃದ್ಧಿ ದೊಡ್ಡ ದೊಡ್ಡ ಪ್ರಮಾಣದಲ್ಲಿ ನಡೆದು ಶೋಷಣೆ ಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರಗಳಿಗೂ ಹಬ್ಬಿ, ಕೂಲಿಗಾಗಿ, ವೇತನಕ್ಕಾಗಿ ದುಡಿಯುವ ದುಡಿಮೆಗಾರರನ್ನೆಲ್ಲ ಬಾಚಿ ಅಪ್ಪಿಕೊಂಡಿತು”[೪] ಕೃಷಿನೆ ಮುಖ್ಯ ಉದ್ಯೋಗವಾಗಿರುವ, ದೇಶಗಳಲ್ಲಿ ಭೂಮಿಯನ್ನು ಹೊಂದಿರುವವರು ಶ್ರೀಮಂತರಾದರೂ ಇವರ ಜೊತೆ ಇವರ ಸರಿಸಮಾನವಾಗಿ ಇರುವ ವ್ಯಾಪಾರ ಮತ್ತು ಕೈಗಾರಿಕೆಗಳನ್ನು ಹೊಂದಿರುವವರು ಕೂಡಾ ಶ್ರೀಮಂತರಾದರು ಈ ಎರಡನ್ನು ಹೊಂದಿಲ್ಲದೆ ಇರುವವರು ದುಡಿಯುವ ವರ್ಗದವರಾದರು ಹೀಗೆ ಮೇಲು ವರ್ಗ ಮತ್ತು ಕೇಳವರ್ಗದವರ ಮಧ್ಯ ತಾರತಮ್ಯ ಮತ್ತು ಶೋಷಣೆ ಹೆಚ್ಚಾಗುತ್ತಾ ಬಂದಿತು ಹೀಗೆ ಶೋಷಣೆ ಹೆಚ್ಚಾದಂತೆ. ಅದನ್ನು ಸಹಿಸಲು ಆಗದೆ ಇರುವಂತಹ ಶೋಷಣೆಗೆ ಒಳಗಾದವರು ಪ್ರತಿಭಟಿಸಲು ಪ್ರಾರಂಭ ಮಾಡಿದರು. ಇದನ್ನು ವ್ಯವಸ್ಥೆಯ ಮತ್ತೊಂದು ಇತಿಹಾಸ ಎಂದು ಹೇಳಬಹುದು.

ಪ್ರಾಚೀನ ಸಮಾಜಗಳಲ್ಲಿ ಶೋಷಣೆ, ದಬ್ಬಾಳಿಕೆ ಮುಂತಾದವುಗಳು ತುಂಬಾ ಬಲಪ್ರಯೋಗದಿಂದ ಹಲವಾರು ವೇಳೆ ನಡೆದಿದ್ದವು. ಇವತ್ತು ಕೂಡಾ ಇವು ಅವ್ಯಕ್ತವಾಗಿ ಪರೋಕ್ಷವಾಗಿ ನಡೆಯುತ್ತಾ ಇವೆ ಮಾನವ ಮಾನವರ ಮೇಲೆ ಅತ್ಯಾಚಾರ ನಡೆಯುತ್ತಿತ್ತು. ಮಾನವನ ವ್ಯವಸ್ಥೆ ಇದಕ್ಕೆಲ್ಲ ಅಂಗೀಕಾರವನ್ನು ಒತ್ತಿದೆ. ಮಾನವನ ಪ್ರಾಚೀನ ಜೀವನದಲ್ಲಿ ಪ್ರಭುತ್ವ ವರ್ಗ ಗುಲಾಮರಿಂದ ದುಡಿಸಿಕೊಳ್ಳುತ್ತಿತ್ತು. ಆದುದರಿಂದ ಮಾನವ ಮಾನವರ ಮೇಲೆ ಅತ್ಯಚಾರ ನಡೆಯುತ್ತಿತ್ತು. ಗುಲಾಮಗಿರಿ ಪರೋಕ್ಷವಾಗಿ ಇಲ್ಲದಿದ್ದರು ಆರ್ಥಿಕ ವ್ಯವಸ್ಥೆ ಪರೋಕ್ಷವಾಗಿ ಶೋಷಣೆ ಮತ್ತು ಗುಲಾಮಗಿರಿಗೆ ಆವಕಾಶವನ್ನು ಕೊಡುತ್ತಾ ಬಂದಿದೆ. ತುಂಬಾ ಅನಾಗರಿಕ ವ್ಯವಸ್ಥೆಯನ್ನು ಮತ್ತು ಹಿಂದಿನ ಕಾಲದಿಂದ ಉತ್ಪಾದನಾ ಸಾಧನಗಳಾದ ಭೂಮಿ, ಮುಂತಾದವುಗಳು ಖಾಸಗೀ ಸ್ವಾಮ್ಯಕ್ಕೆ ಸೆರಿರುವುದು ಕಂಡುಬರುತ್ತದೆ.

ಆದರೆ ಸ್ವಂತ ಆಸ್ತಿ ಇದ್ದವರ ಅಧೀನದಲ್ಲಿ ದುಡಿದು ದುಡಿಮೆಯನ್ನು ಅವಲಂಬಿಸಿ ದುಡಿದು ದುಡಿದು ಶವಗಳಂತೆ ಬದುಕುತ್ತಿರುವುದು ಕಂಡುಬರುತ್ತದೆ. ಖಾಸಗೀ ಸ್ವಾಮ್ಯವಿರುವ ಒಂದು ವ್ಯವಸ್ಥೆಯಲ್ಲಿ ಪ್ರತ್ಯಕ್ಷವಾಗಿ ಯಾವ ಶೋಷಣೆ ಮತ್ತು ಅಸಾಮಾನತೆಯೂ ಕಂಡುಬರುವುದಿಲ್ಲ. ಉತ್ಪಾದನೆಗೆ ವಸ್ತುಗಳಿರುತ್ತವೆ. ಇದರ ಮಾಲಿಕತ್ವ ವಹಿಸುವ ಮಾಲಿಕರು ಇರುತ್ತಾರೆ ದುಡಿಯುವ ವರ್ಗ ತಮಗೆ ಪ್ರತಿಫಲವಾಗಿ ಕೂಲಿ ಇಲ್ಲವೆ ವೇತವನ್ನು ಪಡೆಯುತ್ತಿರುವಂತೆಯೂ ಕಂಡುಬರುತ್ತಿದೆ. ಅದೇ ತರಹ ಬೇಸಾಯ ಮಾಡುವವರು ಕೂಡಾ ಗುತ್ತಿಗೆ ಇಲ್ಲವೆ ಕೂಲಿ ಜೀತದಾಳುಗಳಾಗಿ ದುಡಿಯುವುದು ಕಂಡುಬರುತ್ತದೆ. ಇವರಿಗೆ ಕೂಲಿಯನ್ನು

ನಿರ್ಧರಿಸುವವರು ಖಾಸಗಿ ಒಡೆಯರಾಗಿರುವುದು ಕಂಡುಬರುತ್ತದೆ ಹೀಗೆ ಶೋಷಣೆ ಎನ್ನುವುದು ಖಾಸಗಿ ಒಡೆಯರ ಇಲ್ಲವೆ ಯಜಮಾನರ ಮತ್ತು ಪ್ರಭುತ್ವದ ಒಳಗಡೆ ಅಡಗಿರುತ್ತವೆ. ಇಲ್ಲಿ ಯಾವ ಕೆಲಸ ಕಾರ್ಯಗಳನ್ನು ಮಾಡದೆ ಈ ಮಾಲಿಕರು ಹೆಚ್ಚು ಪ್ರತಿ ಫಲವನ್ನು ಪಡೆಯುತ್ತಾರೇ. ಹೀಗೆ ಹೆಚ್ಚು ಸಾಧನಗಳನ್ನು ಹೊಂದಿದಷ್ಟು ಅವರ ಆಧಾಯ ಹೆಚ್ಚುತ್ತ ಹೋಗುತ್ತಿದೆ. ಹಾಗೇನೆ ದುಡಿಯುವ ವರ್ಗದವರು ಎಷ್ಟು ದುಡಿದರು ಅವರ ಸಂಪತ್ತು ಹೆಚ್ಚದೆ ಇರುವುದರಿಂದ ಅವರಿಗೆ ಇಲ್ಲಿ ಶೋಷಣೆಯಾಗುವುದು ಕಂಡುಬರುತ್ತದೆ. ಈ ಕೆಳವರ್ಗ ಅಂದರೆ ಈ ಪ್ರಭುತ್ವದ ಕೆಳಗೆ ದುಡಿಯುವ ವರ್ಗ ತಮ್ಮ ದುಡಿಮೆಯಿಂದಲೆ ಜೀವನ ಸಂಸಾರಗಳನ್ನು ಬದುಕಿಸುವುದಕ್ಕೆ ಕೆಲಸ ಮಾಡುತ್ತಿರಬೇಕು ಹೀಗೆ ಪ್ರಭುತ್ವ ವರ್ಗದವರ ಅಭಿವೃದ್ಧಿಗಾಗಿ, ಅವನ ಸಂಸಾರವನ್ನು ಭರ್ತಿ ಮಾಡುವುದಕ್ಕಾಗಿ ಬೆವರು ಸುರಿಸಿ. ಶೋಷಣೆಗೆ ಒಳಪಟ್ಟ ಜನರು ತಮ್ಮ ಪಾಡನ್ನು ಮೌನ ಪ್ರಾಣಿಗಳಂತೆ ಸಹಿಸಿಕೊಂಡು ಇರಲು ತಯಾರಿರಲಿಲ್ಲ ಅವರು ಪ್ರತಿಭಟನೆಯನ್ನು ಆದಿಯಿಂದಲು ಮಾಡುತ್ತಾ ಬಂದಿರುವುದು ಚರಿತ್ರೆಯಿಂದ ತಿಳಿದುಬರುತ್ತದೆ. ಮನುಷ್ಯರು ಸಾಮಾನ್ಯವಾಗಿ ಶಾಂತಿ ಪ್ರಿಯರಾಗಿರುತ್ತಾರೆ. ತನ್ನ ಉಪಜೀವನಕ್ಕೆ ಬೇಕಾದ ಹಾಗೂ ಜೀವಿಸಲು ಯಾವುದೇ ಒಂದು ವರ್ಗವನ್ನು ಅನುಸರಿಸುತ್ತ ಬಂದಿರುತ್ತರೆ. ಎಷ್ಟೆ ತೊಂದರೆ ಬಂದರು ಅದನ್ನು ಅಪ್ಪಿಕೊಂಡು ಬಂದಿರುವ ಕಷ್ಟನಷ್ಟಗಳನ್ನು ಸಹಿಸಿಕೊಂಡು, ತಾಳ್ಮೆಯಿಂದ ಜೀವನವನ್ನು ಸಾಗಿಸುತ್ತಾ ಬಂದಿರುತ್ತಾರೆ ಜೀವನ ಕ್ರಮವನ್ನು ಅವನು ಬಿಡಲು ಇಚ್ಛಿಸುವುದಿಲ್ಲ. ದಿನಂಪ್ರತಿ ಬದಲಾವಣೆಗೆ ಅವನ ಮನಸ್ಸು ಒಪ್ಪುವುದಿಲ್ಲ. ಎಷ್ಟೇ ತೊಂದರೆಗಳು ಬಂದರೂ ಕೂಡಾ ಒಂದು ಜೀವನ ಶೈಲಿಗೆ ಬದ್ಧನಾದಾಗ ಪ್ರೀತಿ, ಸ್ವಜನ ಪ್ರೇಮ ಇವುಗಳನ್ನು ಬಿಟ್ಟು ಬೇರೆ ಕಡೆಗೆ ಹೋಗಲಿಕ್ಕೆ ಅಥವಾ ಅದನ್ನು ವಿರೋಧಿಸಲಿಕ್ಕೆ ಸಾಮಾನ್ಯವಾಗಿ ತಯಾರು ಇರುವುದಿಲ್ಲ.

ಕಷ್ಟ ಮತ್ತು ಸಹಿಷ್ಣುತೆ ಮನುಷ್ಯನ ದೊಡ್ಡ ಗುಣವಾಗಿರುವುದರಿಂದ ಸಹನೆ ಇಲ್ಲದಿದ್ದರೆ ವಿಜ್ಞಾನವಾಗಲಿ ಮತ್ತು ನಾಗರಿಕತೆಯಾಗಲಿ ಬೆಳೆಯುತ್ತಲೇ ಇರಲಿಲ್ಲ. ಆದರೆ ಯಲ್ಲದಕ್ಕೂ ಮಿತಿಯುಂಟು. ಆ ಮಿತಿಯನ್ನು ಕಳೆದುಕೊಂಡಾಗ ಮನುಷ್ಯ ಪ್ರತಿಭಟನೆ ಮಾಡುವುದು ಸಹಜವಾಗಿರುತ್ತದೆ.

ಮುಂಚೆ ಪ್ರಕೃತಿ ಒಡ್ಡಿದ ಆಸರೆ ಅತ್ಯಲ್ಪವಾಗಿತ್ತು. “ಆಸರೆಯನ್ನು ಪಡೆದಿದ್ದ ಒಂದು ಗುಂಪಿನ ಜನರಿಂದ ಇನ್ನೊಂದು ಗುಂಪಿನ ಜನರು ಕಸಿದುಕೊಳ್ಳಲು ಯುದ್ಧ ಹೂಡುತ್ತಿದ್ದರು.[೨೧]” ಪ್ರಕೃತಿಯಲ್ಲಿ ದೊರಕಿದ ಈ ಅಲ್ಪ ಆಶ್ರಯವು ಗೆದ್ದವರ ವಶಕ್ಕೆ ಹೋಗುತ್ತಿತ್ತು. ಸೋತಿರುವ ಜನರ ವ್ಯವಸ್ಥೆ ಕುಸಿಯುತ್ತಾ ಹೋಯಿತು, ಸೋತವರ ಹೆಂಗಸರು, ಗೆದ್ದವರ ಉಪ ಪತ್ನಿಯರಾಗಿಯೂ ಪರಿವರ್ತನೆಯಾಗಿ ಅವರ ಅಧೀನಕ್ಕೊಳಗಾದರು ಅಲ್ಲದೆ ಅವರು ಸೇವೆಯನ್ನು ಸಲ್ಲಿಸತೊಡಗಿದರು. ಇದು ಅತಿಯಾದ ಅವರ ಉಪಟಳಗಳಿಂದ ತಪ್ಪಿಸಿಕೊಳ್ಳಲು ಯುದ್ಧ ಸಿದ್ಧತೆ, ಕೋಟೆ ಕೊತ್ತಲಲುಗಳ ಕಟ್ಟಡ ಮುಂತಾದ ಸಿದ್ಧತೆಗಳು ಪ್ರಾರಂಭವಾದವು ಹೀಗೆ

ಗುಲಾಮರಾಗಿ ಬಂದಿರುವವರು ಅವರ ಒಡೆಯನಿಗಾಗಿ ದುಡಿಯಬೇಕು ಅವನಿಗೆ ಯಾವುದೇ ತರಹದ ಹಕ್ಕು ಬಾಧ್ಯತೆಗಳು ಇರುತ್ತಿರಲಿಲ್ಲ. ಎನ್ನುವ ಮನೋಭಾವ ಹುಟ್ಟುತ್ತ ಬಂತು. ಆದರೂ ಸಹಿತ ಗುಲಾಮರ ದುಡಿಮೆಯ ಮೇಲೆಯೇ ನಾಗರಿಕತೆಯನ್ನು ಕಟ್ಟಿದ ಪ್ರಾಚೀನ ಸಮಾಜಗಳಲ್ಲಿ (ಈಜಿಪ್ಟ್, ಗ್ರೀಸ್, ರೋಮ್, ಇಂಡಿಯಾ) ಒಡೆಯರ ಕ್ರೂರ ವರ್ತನೆಯನ್ನು ತಾಳಲಾರದೆ ಗುಲಾಮರು ಅನೇಕ ವೇಳೆ ದಂಗೆ ಎದಿದ್ದಾರೆ. ಈ ದಂಗೆಗಳೆ ಹಲವಾರು ಪ್ರತಿಭಟನೆಗಳಾಗಿ ರೂಪುಗೊಂಡವು.

ಹೀಗೆ ಮಾನವ ಅನಾಗರಿಕ ವ್ಯವಸ್ಥೆಯಿಂದಲೂ ಇವತ್ತಿನವರೆಗೆ ಮೇಲು ಜಾತಿ, ಮೇಲುವರ್ಗ, ಒಟ್ಟಾರೆಯಾಗಿ ಮೇಲ್‌ಸ್ಥರದಲ್ಲಿ ಇರುವವರಿಂದ ಅವರ ವಿರುದ್ಧ ಪ್ರತಿಭಟನೆ ಮಾಡಿರುವುದು ತಿಳಿದು ಬರುತ್ತದೆ. ಈ ಪ್ರತಿಭಟನೆ ಎನ್ನುವುದು ಒಂದು ಕಾರಣಕ್ಕೆ ಆಗುವುದಿಲ್ಲ. ಅದಕ್ಕೆ ಹಲವಾರು ಕಾರಣಗಳಿರುತ್ತವೆ ಆದರೆ ಆ ಎಲ್ಲ ಕಾರಣಗಳು ಕೂಡಾ ಮೇಲ್‌ಸ್ಥರದವರು ಕೆಳಸ್ಥರದವರಿಗೆ ಮಾಡಿರುವ ಶೋಷಣೆಗಳೆ ಆಗಿರುತ್ತವೆ. ಪ್ರತಿಭಟನೆ ಹೊಟ್ಟೆಪಾಡಿಗೆ ಇರಬಹುದು. ಅಸಾಮಾನತೆ, ದಬ್ಬಾಳಿಕೆ ಇರಬಹುದು ಅನ್ಯಾಯ ಅಕ್ರಮಗಳಿಗೆ ಇರಬಹುದು ಆದರೆ ಈ ಎಲ್ಲ ಕಾರಣಗಳಿಂದ ಪ್ರತಿಭಟನೆ ನಡೆದಿರುವುದಂತು ನಿಜವಿದ್ದು ಗುರುತಿಸಬಹುದು.

ಇನ್ನು ಮುಂದೆ ನಮ್ಮ ಮಾನವನ ಚರಿತ್ರೆಯಲ್ಲಿ ಅಂದರೆ ಅನಾಗರಿಕರಿಂದ ನಾಗರಿಕ ಕಾಲದವರೆಗೂ ಯಾವ ಯಾವ ಕಾರಣಕ್ಕೆ ನಮ್ಮ ಚರಿತ್ರೆಯಲ್ಲಿ ಪ್ರತಿಭಟನೆಗಳಾದವು ಅವುಗಳ ತಾತ್ವಿಕ ಹಿನ್ನೆಲೆಯನ್ನು ಮುಂತಾದ ಪ್ರತಿಭಟನೆಗಳನ್ನು ಕುರಿತು ಸಂಕ್ಷಿಪ್ತ ಪರಂಪರೆಯನ್ನು ತಿಳಿಯುವುದು ಅವಶ್ಯವೆಂದು ಅನಿಸುತ್ತದೆ.

ರೋಮ್ ಸಾಮ್ರಾಜ್ಯದಲ್ಲಿ "ಸ್ಪರ್ಟಾಕಸು" ಎಂಬ ಗುಲಾಮನ ನೇತೃತ್ವದಲ್ಲಿ ನಡೆದ ದಂಗೆ ಬಹಳ ಮುಖ್ಯವಾದದ್ದು. ಪ್ರಾಚೀನ ಕಾಲದಲ್ಲಿ ಪ್ರತಿಭಟನೆ ಎನ್ನುವುದು ಗುಲಾಮರಿಂದ ಮಾತ್ರವಲ್ಲದೆ. ಅದೇ ಸಮಾಜದಲ್ಲಿ ಕೀಳು ವರ್ಗದವರಿಂದಲೂ ಸಹ ಬಂದಿದೆ. ಇದಕ್ಕೆ ಕೀಳು ವರ್ಗದವರಿಗೂ ಮೇಲು ವರ್ಗದವರಿಗೂ ಇದ್ದ ವೈಷಮ್ಯವೇ ಕಾರಣವೆಂದು ಅನೇಕ ನಿದರ್ಶನಗಳಿಂದ ತಿಳಿದುಬರುತ್ತದೆ. ಮೇಲು ವರ್ಗದವರೊಡನೆ ಕೀಳು ವರ್ಗದವರು ಹೋರಾಟ ನಡೆಸಿ ಸಮಾನ ಹಕ್ಕುಗಳನ್ನು ಪಡೆದಿರುವುದು ಕಂಡು ಬರುತ್ತದೆ. ಗ್ರೀಕ್ ದೇಶದಲ್ಲಿ ಅನೇಕ ಸಮಾಜ ಸುಧಾರಕರು(ಸೋಲನ್ ಮತ್ತು ಕ್ಲೇಸ್ಥನೀಸ್) ಸಮಾಜದಲ್ಲಿ ಅಸಮಾಧನಕ್ಕೆ ಮೂಲ ಕಾರಣವಾಗಿದ್ದ ವರ್ಗಬೇಧವನ್ನು ಇತರ ಭಿನ್ನತೆಗಳನ್ನು ಸುಧಾರಣೆಗಳ ಮೂಲಕ ಪರಿಹರಿಸಿದರು "ರೋಮ್ ದೇಶದಲ್ಲಿ ಪೆಬಿಯನರು(ಕೀಳುವರ್ಗ) ಪೆಬ್ರೀಶಿಯನ್‌ರೊಡನೆ(ಉತ್ತಮವರ್ಗ) ಹೋರಾಡಿ ಸಮಾಜದ ಹಕ್ಕುಗಳನ್ನು ಪಡೆದಿರುವುದು ಕಂಡುಬರುತ್ತದೆ". ಅದೇ ತರಹದಾಗಿ ಪ್ರಾಚೀನ ಭಾರತದಲ್ಲೂ ಶೋಷಣೆಗೆ ಭದ್ರಬುನಾದಿಯಾದ ಜಾತಿ ಪದ್ಧತಿಯನ್ನು ಬಹು ಮಟ್ಟಿಗೆ ಪ್ರತಿಭಟಿಸಿ ಜೈನ, ಬೌದ್ಧ ಸುಧಾರಕರು ಚಳುವಳಿಗಳನ್ನು ಮಾಡಿದರು ಇವರು ಕೇವಲ ಜಾತಿಪದ್ಧತಿಯನ್ನು

ಅಷ್ಟೇ ಪ್ರತಿಭಟಿಸದೆ ಭಾರತೀಯ ಸಮಾಜದ ಶೋಷಣೆ ಹಿಂಸೆ, ಅನ್ಯಾಯ, ಅಕ್ರಮ, ತಾರತಮ್ಯತೆ ಮುಂತಾದ ಕಾರಣಗಳಿಗೆ ಇವರು ಚಳುವಳಿಗಳನ್ನು ಮಾಡಿ ಸುಧಾರಾಣೆಯನ್ನು ಭಯಸಿದರು.

ಪಾಶ್ಚಾತ್ಯ ಮತ್ತು ಪೌರ್ವಾತ್ಯ ದೇಶಗಳಲ್ಲಿ ಭೂಮಿಯನ್ನು ಉಳ್ಳ ಮಾಲಿಕರಿಂದ ಒದಗಿರುವ ಉಪಟಳ ಶೋಷಣೆ ಮುಂತಾದವುಗಳನ್ನು ಮತ್ತು ಇದರ ಜೊತೆ ನಿರಂಕುಶ ಪ್ರಭುವಾದರಾಜ ವಿಧಿಸುವ ಕಂದಾಯ, ತೆರಿಗೆ ಮತ್ತು ಸುಲಿಗೆಗಳನ್ನು ತಡೆಯಲಾರದೆ ಸಾಮಾನ್ಯ ಜನರು ಕೂಡಾ ದಂಗೆ ಎದ್ದು ಪ್ರತಿಭಟನೆಯನ್ನು ಪ್ರಾರಂಭಿಸಿದರು. ೧೩೪೭ರಲ್ಲಿ ರೋಮ್ ದೇಶದಲ್ಲಿ ೧೩೫೭ರಲ್ಲಿ ಫ್ರಾನ್ಸ್‌ನಲ್ಲಿ, ೧೩೮೧ರಲ್ಲಿ ಇಂಗ್ಲೆಂಡ್‌ನಲ್ಲಿ ಅಲ್ಲಿಯ ರಾಜರು ಅವರ ಕಿರುಕುಳ ಮತ್ತು ಶೋಷಣೆಯನ್ನು ತಾಳಲಾರದೆ ದಂಗೆ ಎದ್ದರೂ ೧೩೮೧ರಲ್ಲಿ ಇಂಗ್ಲೆಂಡ್‌ನಲ್ಲಿ ರೈತರು ಕಿರುಕುಳ ಮತ್ತು ಶೋಷಣೆಯನ್ನು ತಡೆಯಲಾರದೆ ದಂಗೆ ಎದ್ದರು. ೧೫೨೦ರಲ್ಲಿ ಜರ್ಮನಿ ದೇಶದಲ್ಲಿ ರೈತರು ದಂಗೆ ಎದ್ದರು. ಇವು ಆಗ ನಡೆದ ಹಲವು ದಂಗೆಗಳಲ್ಲಿ ಮುಖ್ಯವಾದವು.

ಎಷ್ಟೇ ಕಷ್ಟ ಬಂದರೂ ಮೌನವಾಗಿ ಸಹಿಸಬಹುದು ಆದರೆ ಸಹಿಸಲು ಅಸಾಧ್ಯವಾದರೆ ಆವಾಗ ಪ್ರತಿಭಟನೆಯನ್ನು ಸೂಚಿಸಿ ಅದರಲ್ಲಿ ಅಪಜಯ ಹೊಂದಿದರೆ ಉಂಟಾಗುವ ಪರಿಣಾಮಗಳು ಅಷ್ಟಷ್ಟಲ್ಲ ಮೂಕ ಜಂತುಗಳಂತಿರುವ ಮಾನವರಿಂದ ಅನುಕೂಲಗಳನ್ನು ಪಡೆಯುತ್ತಾ ಬಂದಿರುವ ಮೆಲ್‌ಸ್ಥರದ ವರ್ಗ ಕೋಪಗೊಂಡು ಸೇಡು ತೀರಿಸಿಕೊಳ್ಳಲು ಹಿಂದೆಟು ಹಾಕುವುದಿಲ್ಲ. ಹೀಗೆ ಅನೇಕ ಪ್ರತಿಭಟನೆಗಳನ್ನು ಸೌಮ್ಯವರ್ಗ ತನ್ನ ಕ್ರೂರತನದಿಂದ ಅಡಗಿಸಿರುವುದು ತಿಳಿಯುತ್ತದೆ. ನಿರ್ಧಯವಾಗಿ ಪಾಠಕಲಿಸುವ ರೀತಿಯಲ್ಲಿ ಪ್ರತಿಭಟಿಸಿದವರನ್ನು ದುಡಿಸಿರುವುದು ಕಂಡುಬರುತ್ತದೆ. ಇದರಿಂದ ಹಲವಾರು ಸಲದಂತೆಯ ಪ್ರಕರಣಗಳು ಕಂಡು ಬರದಿದ್ದರೆ ದಂಗೆ ಇರಲಿಲ್ಲವೆಂದು ಅಲ್ಲ ಸೌಮ್ಯವರ್ಗದವರು ಕ್ರೂರ ವರ್ತನೆಯನ್ನು ನೋಡಿ ಜನರು ಹೆದರುತ್ತಿದ್ದರು; ಹತಾಶರಾಗಿ ತಮ್ಮ ಹಗೆಯ ಬರಹವನ್ನು ಹಳಿದುಕೊಂಡು, ವಿಧಿವಿಲಾಸವೆಂದೂ ದೇವರ ನಿಯಾಮಕವೆಂದು ದೇವರಲ್ಲಿ ಮೊರೆಹೊಕ್ಕರು, ತಮ್ಮ ಬಾಳೇ ದುಡಿಮೆಯ ಬಾಳು, ದೇವರು ಬಹುಶ ಹಾಗೆಯೇ ನೇಮಕ ಮಾಡಿದ್ದರು ಇರಬಹುದು ಅಥವಾ ಇಹದ ಕಾರ್ಪಣ್ಯದ ಬಾಳು ಪೂರ್ವಜನ್ಮದ ತಪ್ಪಿಗಾಗಿ ಅನುಭವಿಸುವ ದಂಡ ಎಂಬ ಭಾವನೆ ಮೂಡಿತು. ಇಹ ಲೋಕದಲ್ಲಿ ಸುಖವನ್ನು ಕಾಣದೆ ಪರಲೋಕದ ಕಲ್ಪನೆ ಬೆಳೆಯಿತು. ಸೌಮ್ಯವರ್ಗ ಮತ್ತು ಸೌಮ್ಯವರ್ಗದ ಮುಖಂಡನಾದ ರಾಜನಿಂದ ಪೋಷಿತರಾದ ಶ್ರೀಮಂತರು, ಪುರೋಹಿತರು, ಪಂಡಿತರು, ಪ್ರಚಾರಿಗಳು ಮತ್ತು ಉಳಿಗ ವರ್ಗದವರು ಪ್ರತಿಭಟನೆ ತಪ್ಪೆಂದು ಬೋಧನೆ ಮಾಡಿದರು.

ಶೋಷಣೆ, ದುಸ್ಥಿತಿ, ದಾರಿದ್ರ್ಯ, ಮೇಲುವರ್ಗದವರಿಂದ ಕೀಳು ವರ್ಗದವರು ಅನುಭವಿಸಿದ ತಾತ್ಸಾರ, ತಾರತಮ್ಯ, ನಿರ್ಲಕ್ಷತೆಗಳು, ಸಮಾಜದಲ್ಲಿ ಅಲ್ಲೋಲಕಲ್ಲೋಲವನ್ನು, ರಾಜಕೀಯ, ವಿಪ್ಲವಗಳನ್ನು ಉಂಟು ಮಾಡಿವೆ. ಸಮಾಜವನ್ನು ಅವ್ಯವಸ್ಥೆಯಿಂದ ಪಾರುಮಾಡುವುದು

ವಿಚಾರವೇತ್ತರ ತಿಳಿದು ಉತ್ತಮ ಸಮಾಜವೊಂದರ ದರ್ಶನಕ್ಕಾಗಿ ಹಂಬಲಿಸತೊಡಗಿದರು ಇಂತಹ ಆದರ್ಶ ಸಮಾಜದ ರಚನೆಗೆ ತೊಡಗಿದವರಲ್ಲಿ ಮೊಟ್ಟಮೊದಲನೆ ಸುಧಾರಣೆಯೆಂದರೆ ಗ್ರೀಕ್ ದೇಶದ ರಾಜಕಾರಣಿ ಮತ್ತು ತತ್ವಜ್ಞಾನಿ ಪ್ಲೇಟೋ ಎಂದು ಹೇಳಬಹುದು.

ಪ್ಲೇಟೋ ತಾನು ವಾಸವಾಗಿರುವ ಅಥೇನ್ಸ್‌ನಗರದ ರಾಜಕೀಯ ವೈಪರಿತ್ಯ ಕಲಹ ಮತ್ತು ದೊಂಬಿಗಳನ್ನು ಗಮನಿಸಿ ಅದನ್ನು ಸರಿಪಡಿಸಲು ಆದರ್ಶರಾಜ್ಯದ ನಿರ್ಮಾಣದ ಕನಸನ್ನು ಕಂಡನು. ಇದನ್ನು ಅವನು ತನ್ನ 'ರಿಪಬ್ಲಿಕ್' ಎಂಬ ಗ್ರಂಥದಲ್ಲಿ ಚಿತ್ರಿಸಿದನು. ರಾಜ್ಯವನ್ನು ಉತ್ತಮ ಸ್ಥಿತಿಯಲ್ಲಿಡಬೇಕಾಗಿದೆ. ಆಳುವ ವರ್ಗದಿಂದ ಮಾತ್ರ ಸಾಧ್ಯವೆಂದು ತಿಳಿದವನು, ಆಳ್ವಿಕೆ ಮಾಡುವ ಕೆಲಸವನ್ನು ಅವರ ಮುಖ್ಯಕರ್ತವ್ಯವನ್ನಾಗಿ ಮಾಡುವುದರಿಂದ ರಾಜ್ಯಕ್ಕೆ ಕ್ಷೇಮ ಲಭಿಸುತ್ತದೆ ಎಂದು ಭಾವಿಸಿದನು. ಒಡೆತನ ಎನ್ನುವುದನ್ನು ಅವರ ಕಾರ್ಯ... ಭಂಗವನ್ನು ಮತ್ತು ಸ್ವಾರ್ಥವನ್ನು ತರುತ್ತವೆ. ಆದ್ದರಿಂದ ಆಳುವ ವರ್ಗವನ್ನು ಅವುಗಳಿಂದ ಪಾರುಮಾಡಬೇಕು ಎಂದು ತಿಳಿಸಿದನು. "ಕಮ್ಯುನಿಸಂ" ಎಂಬ ಹೆಸರಿನಲ್ಲಿ ಆಳುವ ವರ್ಗಕ್ಕೆ ತನ್ನದೆಂದು ಹೇಳಿಕೊಳ್ಳುವ ಯಾವ ಸ್ವಾಮ್ಯವೂ ಇರಕೂಡದೆಂದನು. ಆದರೆ ತನ್ನ 'ಕಮ್ಯನಿಸಂ' ಅನ್ನು ಯಾವ ರಾಜ್ಯಕ್ಕೆ ಅನ್ವಯಿಸಲು ಅವನು ಇಷ್ಟಪಡಲಿಲ್ಲ.

"ಪ್ಲೇಟೋ ತನ್ನ ಜೀವಿತದ ಕಾಲಾವಧಿಯಲ್ಲಿ ತನ್ನ ಆದರ್ಶ ರಾಜ್ಯದ ನಿಷ್ಪ್ರಾಯೋಜಕತೆಯನ್ನು ಕಂಡನು. ಆದರ್ಶ ಸಮಾಜವನ್ನು ಪ್ರಯೋಗ ರೂಪದಲ್ಲಿ ತರಲು ಯತ್ನಿಸಿ ವಿಫಲನಾದನು ಅಥೇನ್ಸ್‌ನಗರದ ವೈಪರೀತ್ಯಗಳು ಪ್ಲೇಟೋ ಭಾವಿಸಿದಂತೆ "ತನ್ನದು" "ನನ್ನನು" ಎಂಬ ಸ್ವಾರ್ಥದಿಂದಾಗಲಿ ಅಥವಾ ಪ್ರತಿಯೊಬ್ಬ ತನ್ನ ಸ್ವಭಾವಕ್ಕೆ ಅನುಗುಣವಾದ ಕಾರ್ಯವನ್ನು ಮಾಡುವುದೇ ಇರುವುದರಿಂದಾಗಲಿ ಉಂಟಾಗಿರಲಿಲ್ಲ. ಅಥೇನ್ಸ್ ನಗರದ ಸಮಾಜವ್ಯವಸ್ಥೆ ಗುಲಾಮರ ದುಡಿಮೆಯನ್ನು ಅವಲಂಬಿಸಿತ್ತು. ಶೋಷಣೆಯ ಮೂಲಕ ಜೀವನ ನಡೆಸುತ್ತಿದ್ದ ಅಥೇನ್ಸ್‌ನಗರದ ಪೌರರು ಆರ್ಥಿಕಾಭಿವೃದ್ದಿಯನ್ನು ಕೈಗೊಳ್ಳಲು ಸಮಾಜದ ಆರ್ಥಿಕವ್ಯವಸ್ಥೇ ಕ್ಷೀಣಿಸತೊಡಗಿತು. ಮುಳುಗುತ್ತಿರುವ ಹಡಗಿಸುವ ಇಲಿಗಳು ಬೆದರುವಂತೆ ಪೌರರು ಅಳಿದುಳಿದ ಸಂಪತ್ತಿನ ಲೂಟಿಯಲ್ಲಿ ನಿರತರಾದರು. ಸ್ಥಿತಿಗತಿಗಳು ಹೀಗಿರಲು ಆದರ್ಶ ಸಮಾಜ ರಚನೆಯನ್ನು ಅಥೇನ್ಸ್‌ನಗರದ ಯಾವ ಪೌರನು ಒಪ್ಪುವಂತಿರಲಿಲ್ಲ. ಪ್ಲೇಟೋನಿನ ಆದರ್ಶ ಸಮಾಜ ಅಥೇನ್ಸ್‌ನಗರ ಶ್ರೀಮಂತರ ನೇತೃತ್ವದಲ್ಲಿ ಗಳಿಸಿದ್ದ ಉಚ್ಛ್ರಾಯ ಸ್ಥಿತಿಯನ್ನು ಚರಮಗೀತೆಯಾಯಿತು. ಆದರೂ ಪ್ಲೇಟೋ ಪ್ರತಿಪಾದಿಸಿದ ಆದರ್ಶ ಸಮಜ ನೀತಿ ಕಲ್ಲಿನಾ ನೀತಿಯಾಗಿ ಉಳಿದು ಕೊಂಡಿದೆ.

ಪ್ಲೇಟೋ ಪ್ರಾಚೀನಕಾಲಕ್ಕೆ ಸೇರಿದವನು ಇವನ ನಂತರ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ಟೀಕೆಯನ್ನು ಸೂಚಿಸುವ ಬರಹಗಳು ಹೇರಳವಾಗಿ ಹೊರಬಿದ್ದಿರುವುದು ಕಂಡುಬರುತ್ತದೆ. ಇವುಗಳ ದೃಷ್ಟಿಕೋನ ವಿರಕ್ತಿಯನ್ನು ಬೋಧಿಸುವ, ಪ್ರಕೃತಿಗೆ ಅನುಗುಣವಾಗಿ ಬಾಳು ನಡೆಸು ಎಂದು ಹೇಳುವ ದೈವನಿಯಮಕ್ಕೆ ಕೈತೋರಿಸುವ ನಿಸ್ಸಹಾಯಕತೆಯನ್ನು ಪ್ರತಿಬಿಂಬಿಸುವ

ಇಹಲೋಕವನ್ನು ಮಾಯೆ, ಇಹಲೋಕದ ವಸ್ತುಗಳಿಗೆ ಅಂಟಿಕೊಂಡಷ್ಟೂ ಮುಕ್ತಿ ಅಸಾಧ್ಯವೆಂದು ತಿಳಿಸುವ ರೀತಿ ಇದಾಗಿದೆ. ಇಂತಹ ಬರೆಹಗಾರರು ಪೌರಾತ್ಯರಲ್ಲಿಯೂ ಮತ್ತು ಪಾಶ್ಚಿಮಾತ್ಯ ರಲ್ಲಿಯೂ ಕಂಡು ಬರುತ್ತಾರೆ. ಪೌರ್ರಾತ್ಯರನ್ನು ತೆಗೆದುಕೊಂಡರೆ ಭಾರತದಲ್ಲಿ ಪ್ರಥಮವಾಗಿ ಮಹಾವೀರ, ಬುದ್ಧ ಇವರು ಬರುತ್ತಾರೆ. ಚೀನಾದಲ್ಲಿ ಕನ್‌ಫ್ಯೂಷಿಯಸ್, ಲೋಟ್ಸೇ ಮುಂತಾದವರು ಬರುತ್ತಾರೆ. ಅಷ್ಟೇ ಅಲ್ಲ ಭಾರತದಲ್ಲಿಯೂ ಕೂಡ ಕಾಲಕ್ರಮೇಣ ಸಾಧುಸಂತರಾದ ರಾಮದಾಸ್, ತುಳಸೀದಾಸ್, ಚೈತನ್ಯ, ಪುರಂದರದಾಸ್ ಮುಂತಾದವರು ಬರುತ್ತಾರೆ. ಪಾಶ್ಚಿಮಾತ್ಯ ದೇಶಗಳನ್ನು ತೆಗೆದುಕೊಂಡರೆ ಪ್ಲೇಟೋವಿನ ನಂತರ ಸ್ಟೋಯಿಕ್‌ಗಳೆಂಬ ವಿರಕ್ತರೂ, ತರುವಾಯ ಏಸುಕ್ರಿಸ್ತ ಮಹಮದ್ ಬರುತ್ತಾರೆ. ಇವರ ನಂತರ ಅಸಂಖ್ಯಾತ ಸಾಧು ಸಂತರ ಮೇಲೆ ಹೇಳಿದ ಗುರುಗಳ ಉಪದೇಶವನ್ನು ಪುನಃಪುನಃ ಹೇಳಿದ್ದಾರೆ.

ಈ ಎಲ್ಲ ಸಾಧು ಸಂತರು ಜನರ ಆಗುಹೋಗುಗಳನ್ನು ಕಣ್ಣಾರೆ ನೋಡಿ ಮನದಲ್ಲಿ ಮರುಗಿದವರು, ಒಂದುಕಡೆ ಕಂಡದ್ದು ಅಟ್ಟಹಾಸ, ವೈಭವ ವಿಲಾಸ, ಇನ್ನೊಂದು ಕಡೆ ಯಾತನೆ, ದಾರಿದ್ರ್ಯ, ಕ್ಷುಬ್ದ ಜೀವನ, ಜೀವನ ನಡೆಸುವುದಕ್ಕೋಸ್ಕರ ಮಾನವರು ಮಾನವರ ಮೇಲೆ ಯುದ್ಧ, ಮೋಸ, ಕಪಟ, ಕುಹಕಗಳಲ್ಲಿ ನಿರತರಾಗಿರುವುದನ್ನು ಕಂಡರು. ಆಡಳಿತ ವರ್ಗ ತನ್ನ ಸ್ವಾರ್ಥದ ರೂಪದಲ್ಲಿ ಮುಳುಗಿ ದಯೆ, ಕರುಣೆ, ಅನ್ಯಪ್ರಾಣಿ ಚಿಂತನೆ ಸಹಾಯ, ಸಹಕಾರ ಇವುಗಳನ್ನು ತೊರೆದಿರುವುದನ್ನು ಕಂಡರು. ಮಾನವ ವ್ಯಕ್ತಿಗಳು ಇದೇ ರೂಪದಲ್ಲಿ ಬಹುಕಾಲವಿರುವುದಾದರೆ ಮಾನವತ್ವವೇ ಹೋಗುವುದಾಗಿ ಬಗೆದು ಇವುಗಳೆಲ್ಲಕ್ಕೂ ಸ್ವಾರ್ಥ ಮತ್ತು ದುರಾಸೆಯೇ ಕಾರಣ ಎಂದು ತಿಳಿಸಿದರು. ಪ್ರಾರಂಭದಲ್ಲಿ ಸಾಧು ಸಂತರ ಹಿತವಚನಗಳು ಅನೇಕರನ್ನು ಆಕರ್ಷಿಸಿದವು. ಶಿಷ್ಯಮಂಡಳಿಗಳು ಹುಟ್ಟಿದವು ಮತ್ತು ಸಾಧು ಸಂತರ ಹೆಸರಿನಲ್ಲಿ ಪಂಥಗಳು ಹುಟ್ಟಿದವು. ಭಾರತದಲ್ಲಿ ಇವು ದಾಸಪಂಥಗಳೆಂದೂ, ಶಿವಶರಣರ ಪಂಥಗಳೆಂದು ಹೆಸರನ್ನು ಪಡೆದುಕೊಂಡವು. ಈ ಎರಡು ಪಂಥಗಳು ಕ್ರಿ.ಶ.೧೨ನೇ ಶತಮಾನದಲ್ಲಿ ಭಾರತದಲ್ಲಿ ಹುಟ್ಟಿಕೊಂಡವು ಈ ಶರಣರು ಮತ್ತು ದಾಸರು ತಮ್ಮ ವಚನ ಮತ್ತು ಕೀರ್ತಿನೆಗಳ ಮೂಲಕ ತಮ್ಮ ಪ್ರತಿಭಟನೆಯನ್ನು ಪ್ರತಿಬಿಂಬಿಸಿದರು. ಇವರ ಸಾಹಿತ್ಯದಲ್ಲಿ ಸಮಾಜದ ಸ್ಪಷ್ಟ ಚಿತ್ರಣವನ್ನು ಅಕ್ರಮ ಮತ್ತು ಅಸಮಾನತೆ ಸ್ತ್ರೀ ಪುರುಷವೆಂಬ ಬೇಧಭಾವ ಮುಂತಾದ ವಿಚಾರಗಳ ಕುರಿತು ಇವರು ಪ್ರತಿಭಟಿಸಿದರು ಇವರನ್ನು ದಾಸಚಳವಳಿ ಮತ್ತು ಶರಣ ಚಳವಳಿಗಳೆಂದೆ ಕರೆಯಲಾಯಿತು. ಇವರ ತಿಳುವಳಿಕೆ ಜನಸಾಮಾನ್ಯರಿಗೆ ಮುಟ್ಟಿದೆ. ಅದು ಹಾಗೆ ಮುಂದುವರಿಯುತ್ತಲೇ ಬಂದಿರುವುದು ಕಾಣಬಹುದು.

೧೫ನೇ ಶತಮಾನದ ನಂತರ ಪಾಶ್ಚಿಮಾತ್ಯ ದೇಶಗಳಲ್ಲಿ ರೂಪ ತಾಳಿರುವ ಚಳುವಳಿಗಳು ಇತಿಹಾಸದಲ್ಲಿ ಬಹುಮುಖ್ಯವಾದಂತವು ಜನಸಾಮಾನ್ಯರನ್ನು ಸುಧಾರಣೆ ಹಿತವಚನಗಳಲ್ಲೇ ಪರ್ಯಾಶಾನ ಹೊಂದದೆ ಸುಧಾರಿತವಾದ ವ್ಯವಸ್ಥೆಯ ಸಾಧನೆಗಾಗಿ ಅತಿಯಾದ ಶೋಷಿತವರ್ಗ ಪ್ರತಿಭಟನೆಗಳನ್ನು ಆರಂಭಿಸಿದರು, ಇಲ್ಲಿ ಪ್ರಪಂಚದಾದ್ಯಂತ ಸಾಹಿತಿಗಳು ಮತ್ತು ಬರಹಗಾರರು

ಈ ಪ್ರತಿಭಟನೆಗೆ ಬೆಂಬಲವನ್ನು ನೀಡಿದರು. ಈ ತೆರನಾಗಿ ಕಷ್ಟದಿಂದ ಕೂಡಿದ ವ್ಯವಸ್ಥೆಗೆ ಪ್ರತಿಯಾಗಿ ಸುಖೀ ರಾಜ್ಯವೊಂದು ಇದೆ ಎಂದು ಹೇಳುವ ಗ್ರಂಥಗಳು ಹೇರಳವಾಗಿ ಹುಟ್ಟಿಕೊಂಡವು ಈ ತೆರನಾದ ಗ್ರಂಥವನ್ನು ಬರೆದು ತುಂಬಾ ಪ್ರಸಿದ್ಧಿಯನ್ನು ಪಡೆದ ಬರಹಗಾರನೆಂದರೆ ಇಂಗ್ಲೆಂಡ್ ದೇಶದ ಥಾಮಸ್ಸ ಮೋರ್ ಎಂಬಾತನು ಈತನು ಎಲ್ಲೂ ಇಲ್ಲದ ಆದರ್ಶರಾಜ್ಯ (utopia) ಎಂಬಗ್ರಂಥವನ್ನು ೧೫೧೬ರಲ್ಲಿ ರಚಿಸಿ ತಾಗಿರುವ ವ್ಯವಸ್ಥೆಯನ್ನು ತನ್ನ ಗ್ರಂಥದ ಮೂಲಕ ಪ್ರತಿಭಟಿಸಿದನು.

ಇಂಗ್ಲೆಂಡ್ ದೇಶದಲ್ಲಿ ೧೬೪೦ರಲ್ಲಿ ಉಂಟಾದ ಕ್ರಾಂತಿಯು ಅಲ್ಲಿಯ ನೊಂದ ಜನಸಮುದಾಯದ ಚಳವಳಿಗೆ ಬೆಂಬಲವನ್ನು ನೀಡಿತು. ಈ ಕ್ರಾಂತಿ ಉಂಟಾಗಲು ಅಲ್ಲಿ ಹಲವಾರು ಕಾರಣಗಳಿರುವುದು ಕಂಡುಬಂದಿತು. ಶೋಷಣೆಗೆ ಒಳಪಟ್ಟು ಜನಸಮುದಾಯ ಅಲ್ಲಿ ಇತ್ತು, ಅಲ್ಲಿಯ ರಾಜನ ಅತಿಯಾದ ಕೆಟ್ಟವರ್ತನೆ ವ್ಯಾಪಾರೀ ಮತ್ತು ಅಲ್ಲಿಯ ಜನರ ವರ್ಗದವರನ್ನು ಉದ್ರೇಕಗೊಳಿಸಿತ್ತು. ಆಚರಣೆಯಲ್ಲಿದ್ದ ಕಟ್ಟಳೆ ಕಾನೂನುಗಳು ವ್ಯಾಪಾರಿವರ್ಗ ಅಡ್ಡಿ ಆತಂಕಗಳಿಲ್ಲದೆ. ರಾಜನ ಮತ್ತು ರಾಜನ ಆಶ್ರಯದಲ್ಲಿರುವ ಸಾಮಂತರ ಉಪಟಳವಿಲ್ಲದೆ. ನಿರಂಬಳವಾಗಿ ವ್ಯಾಪಾರ ಮಾಡುವುದಕ್ಕೂ ಹಣಕೂಡಿಡುವುದಕ್ಕೂ ಉದ್ಯಮಗಳಲ್ಲಿ ನಿರತರಾಗುವುದಕ್ಕೂ ಅಡ್ಡಿ ಬಂದಿದ್ದವು. ರಾಜನ ನಿರಂಕುಶ ಪ್ರಭುತ್ವವನ್ನು ವ್ಯಾಪಾರ ಮತ್ತು ಉದ್ಯಮಕ್ಕೆ ಅಡ್ಡಿಬರುವ ಕಟ್ಟಳೆ ಕಾನೂನುಗಳನ್ನು ಬದಿಗೊತ್ತಿದ ಹೊರತು ವ್ಯಾಪಾರೀ ವರ್ಗದ ಏಳಿಗೆಗೆ ಅವಕಾಶವಿರಲಿಲ್ಲ. ಬದಲಾವಣೆಯಿಂದ ಹೊದರು ವ್ಯಾಪಾರೀ ವರ್ಗದ ಏಳಿಗೆಗೆ ಅವಕಾಶವಿರಲಿಲ್ಲ. ಬದಲಾವಣೆಯಿಂದ ರಾಜನ ಮತ್ತು ಆತನ ಹಿಂಬಾಲಕ ವರ್ಗದವರ ಹಕ್ಕುಬಾಧ್ಯತೆಗಳಿಗೆ ಧಕ್ಕೆ ಬರುತ್ತಿತ್ತು ಅವರು ಬದಲಾವಣೆಯನ್ನು ಪ್ರತಿಭಟಿಸಿದರು. ಈ ಪ್ರತಿಭಟನೆ ಸಂದಾನದ ಮೂಲಕ ಬಗೆಹರಿಯಲಿಲ್ಲ ಅದು ಆಂತರಿಕ ಯುದ್ಧಕ್ಕೆ ಸಿದ್ಧವಾಯಿತು. ಅಲ್ಲಿಯ ಜನರು (ಚಾರೆಲ್ಸ್) ಎಂಬ ದೊರೆಯನ್ನು ಶಿರಚ್ಛೇದನ ಮಾಡಿದರು. ಆನಂತರ ಮತೊಬ್ಬ ದೊರೆಯನ್ನು ಬೇರೆ ಕಡೆಯಿಂದ ತಂದು ಪಟ್ಟಕಟ್ಟಿದರು ಆಂತರಿಕ ಯುದ್ಧದಲ್ಲಿ ವಿಜಯಶಾಲಿಗಳಾದ ವ್ಯಾಪಾರೀ ಮತ್ತು ಜಮಿನ್ದಾರಿ ವರ್ಗ ತಮ್ಮ ಹಕ್ಕುಗಳನ್ನು ಘೋಷಿಸಿದರು. ವ್ಯಾಪಾರ ಮತ್ತು ಉದ್ಯಮಗಳಲ್ಲಿ ಸರ್ಕಾರ ಕಾನೂನುಗಳ ಮೂಲಕ ಅಡ್ಡಿಆತಂಕಗಳನ್ನು ಒಡ್ಡದ ಹಾಗೆ ನೇಮಕ ಮಾಡಿದರು. ಸ್ವಾಮ್ಯ ಮತ್ತು ವ್ಯಾಪಾರ ವರ್ಗದವರಿಂದ ಚುನಾಯಿತರಾದ ಪ್ರತಿನಿಧಿಗಳ ಸಮ್ಮತವಿಲ್ಲದೆ ಶಾಸನ ಮಾಡಕೂಡದೆಂಬ ಸಂಪ್ರದಾಯಕ್ಕೆ ರಾಜನು ಒಪ್ಪುವಂತೆ ಮಾಡಿದರು.

ಕ್ರಾಂತಿಯ ವೇಳೆಯಲ್ಲಿ ಅಲ್ಲಿಯ ಪ್ರತಿಭಟನಾಕಾರರು ಕೇಳಿದುದು ಮತನೀಡುವ ಹಕ್ಕು, ಪ್ರತಿನಿಧಿಗಳ ಒಪ್ಪಿಗೆ ಪಡೆದು ಶಾಸನವಾಗುವ ಭರವಸೆ, ವ್ಯಕ್ತಿಸ್ವತಂತ್ರ್ಯ, ಪೌರರ ಹಕ್ಕುಗಳು, ಶಾಸನ ಸಮ್ಮುಖ ಆರ್ಥಿಕವಾಗಿ ಖಾಸಗೀ ಸ್ವಾಮ್ಯಕ್ಕೆ ರಕ್ಷಣೆ ಮತ್ತು ಉದ್ಯಮ ಸ್ವಾತಂತ್ರ್ಯ ಆದರೆ ಈ ಮಧ್ಯೆ ಒಡಕು ಶಬ್ದವೆಂಬಂತೆ ಒಂದು ವಾದ ಆಂದೋಲನದ ರಂಗದಲ್ಲಿ ಕಾಲಿಟ್ಟಿತು. ವ್ಯಾಪಾರೀ ಮತ್ತು ಸ್ವಾಮ್ಯ ವರ್ಗದವರನ್ನು ಸ್ತಬ್ಧರನ್ನಾಗಿ ಮಾಡಿತು. ಈ ಹೊಸವಾದದ

ಪ್ರತಿಪಾದಕರೆಂದರೆ ಜರಾಲ್ಡ್ ವಿನ್‌ಸ್ಟಾನ್ ಲೇ ಮತ್ತು ಲಿಲ್‌ಬರ್ನೆ, ಇವರವಾದ ಅತಿಸುಲಭವಾಗಿ ಕಂಡುಬಂದಿತು. ಇವರು ತುಂಬಾ ಸರಳವಾಗಿ ಪ್ರತಿಭಟನೆಯನ್ನು ಮಾಡಿದರು. ಇವರ ಪ್ರಕಾರ "ಸಾಮಾನ್ಯ ಜನರು ಎಲ್ಲರು ಒಂದೆ ಅವರೆಲ್ಲ ದೇವರ ಮಕ್ಕಳು, ಎಲ್ಲರೂ ಅಣ್ಣ ತಮ್ಮಂದಿರ ಹಾಗೆ ಅಕ್ಕ ತಂಗಿಯರ ಹಾಗೆ, ಎಲ್ಲರೂ ಒಂದೇ ಸಮಾಜಕ್ಕೆ ಸೇರಿದವರು, ದೇವರು ತನ್ನ ಮಕ್ಕಳಲ್ಲಿ ಹೇಗೆ ಬೇಧಭಾವವನ್ನು ಮಾಡುವುದಿಲ್ಲವೋ, ಹಾಗೆಯೇ ಬೇಧಭಾವ, ತಾರತಮ್ಯ ಅಸಮಾನತೆ ಇರುವ ಸಮಾಜ ದೇವರ ದೃಷ್ಟಿಯಲ್ಲಿ ಸರಿಯಲ್ಲ, ಎಲ್ಲರೂ ಸಮಾನರು ಆದುದರಿಂದ ಸಾಮಾಜಿಕ ಮತ್ತು ರಾಜಕೀಯ ರಂಗದಲ್ಲಿ ಹೇಗೆ ಸಮಾನತೆ ಅವಶ್ಯಕವೆಂದು ಹೇಳಲು ಸಾಧ್ಯವೊ ಹಾಗೆಯೇ ಆರ್ಥಿಕ ರಂಗದಲ್ಲಿಯೂ ಸಹ ಸಮಾನತೆ ಅವಶ್ಯಕವಾಗಿದೆ ಎಂದು ಹೆಳಿದರು, ಆರ್ಥಿಕ ಸಮಾನತೆ ಆಗುವವರೆಗೂ ರಾಜಕೀಯ ಮತ್ತು ಸಾಮಾಜಿಕ ಸಮಾನತೆ ತರಲು ಸಾಧ್ಯವಿಲ್ಲ ಅದಕ್ಕಾಗಿ ಆರ್ಥಿಕ ಸಮಾನತೆ ಸಿಗುವವರೆಗೂ ಹೋರಾಟ ಮುಂದುವರಿಯುವ ಅವಶ್ಯಕತೆಯನ್ನು ಅವರು ಸಾರಿದರು. ಹೀಗೆ ಮೊಟ್ಟ ಮೊದಲನೆಯ ಬಾರಿಗೆ, ಆರ್ಥಿಕ ಸಮಾನತೆ ಇದ್ದ ಹೊರತು ಜನಸಮುದಾಯಕ್ಕೆ ಕ್ಷೇಮವಿಲ್ಲವೆಂದು ಹೇಳಿ ಜನಸಮುದಾಯದ ಗಮನವನ್ನು ಆರ್ಥಿಕ ರಂಗದಲ್ಲಿರುವ ಅಸಮಾನತೆಗೆ ಸೆಳದದ್ದು ೧೬೪೦ರ ಕ್ರಾಂತಿಯ ಮಹತ್ಕಾರ್ಯವಾಗಿದೆ.

ಹೀಗೆ ಆರ್ಥಿಕ ಸಮಾನತೆಗಾಗಿ ನಡೆದ ಹೋರಾಟ ಇಂಗ್ಲೀಸ್ ಕ್ರಾಂತಿಗೇ ಕೊನೆಗೊಳ್ಳಲಿಲ್ಲ. ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಫ್ರಾನ್ಸ್‌ದೇಶದಲ್ಲಿ ನಡೆದ ಮಹಾಕ್ರಾಂತಿ ೧೭೮೯ ಮತ್ತೆ ಆರ್ಥಿಕ ಅಸಮಾನತೆಯ ಪ್ರಶ್ನೆ ಪುನಃ ಜನ್ಮತಾಳಿತು, ಫ್ರಾನ್ಸಿನ ಮಹಾಕ್ರಾಂತಿ ಇಂಗ್ಲಿಷ್ ಕ್ರಾಂತಿಯಂತೆ ವ್ಯಾಪಾರಿ ಮತ್ತು ಜಮೀನ್ದಾರಿ ವರ್ಗಗಳ ಮುಂದಾಳತ್ವದಲ್ಲಿ ನಿರಂಕುಶ ಪ್ರಭುತ್ವದ ನಾಶಕ್ಕೂ ಖಾಸಗೀ ಸ್ವಾಮ್ಯದ ಆಧಾರದ ಮೇಲೆ ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳ ಸ್ಥಾಪನೆಗೂ ನಡೆಯಿತು ಕ್ರಾಂತಿಯ ವೇಳೆ ಆರ್ಥಿಕ ಪ್ರಶ್ನೆ ಪ್ರಮುಖಸ್ಥಾನ ಪಡೆದುಕೊಳ್ಳುತ್ತದೆ ಎಂದು ಅಂದುಕೊಂಡಿರಲಿಲ್ಲ. ಆದರೆ ಕ್ರಾಂತಿಯು "ಸ್ವಾತಂತ್ರ್ಯ ಸಮಾನತೆ ಮತ್ತು ಭ್ರಾತೃತ್ವ" ಎಂಬ (Liberty, Equalityland Fraternity) ಎಂಬ ಧ್ಯೆರ್ಯವನ್ನು ಹೊಂದಿತ್ತು ಇದು ಆರ್ಥಿಕ ಸಮಾನತೆಯನ್ನು ಮತ್ತೆ ಮತ್ತೆ ಪ್ರಚೋದಿಸಿತು. ಈ ಸಮಯದಲ್ಲಿ 'ಜಿಟ್ಯುಫ್' ಎಂಬುವವನ ಮುಖಂಡತ್ವದಲ್ಲಿ "ಸಮಾನತೆಗಾರರ ಪಿತೂರಿ" ಎಂಬ ಸಂಘ ಒಂದು ರಚನೆಗೊಂಡಿತು ಈ ಆರ್ಥಿಕ ಸವಾನತೆ ಎಂಬ ವಾದ ನ್ಯಾಯದ ಹೆಸರಿನಲ್ಲಿ ಪ್ರತಿಪಾದಿತವಾಯಿತು. ಇದು ಅತ್ಯಂತ ಶೀಘ್ರದಲ್ಲಿ ಜನಸಮುದಾಯವನ್ನು ತಟ್ಟಿತು, ಆದರೆ ಆಡಳಿತವರ್ಗ ಈ ಕ್ರಾಂತಿಯನ್ನು ಬಹುಬೇಗನೆ ಸದೆಬಡಿಯಿತು.

ಬೆಟ್ಯೂಫ್ ಮತ್ತು ಆತನ ಸಹವರ್ತಿಗಳು ಮಂಡಿಸಿದವಾದಕ್ಕೂ ಇಂಗ್ಲಿಷ್ ಕ್ರಾಂತಿಯ ಸಮಯದಲ್ಲಿ ಮಂಡಿತವಾದ ಸಮಾನತೆಯ ವಾದಕ್ಕೂ ಕೆಲವು ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಇಂಗ್ಲೀಷ್ ಕ್ರಾಂತಿಯು ಆರ್ಥಿಕ ಸಮಾನತೆಯನ್ನು ದೇವರ ಹೆಸರಿನಲ್ಲಿ ಕೇಳಿತು, ಫ್ರೆಂಚ್

ಕ್ರಾಂತಿಯು ನ್ಯಾಯ ಮತ್ತು ವಿವೇಚನಗಳ (Justice and Reason) ಹೆಸರಿನಲ್ಲಿ ಮಂಡಿಸಿತು. ನಿರಂಕುಶ ಪ್ರಭುತ್ವ, ಸಾಮಾಜಿಕ ಮತ್ತು ರಾಜಕೀಯ ರಂಗಗಳಲ್ಲಿ ಅಸಮಾನತೆ ಹಕ್ಕುರಹಿತ ಕರ್ತವ್ಯಗಳು ಹೇಗೆ ಅನ್ಯಾಯವೋ ವಿವೇಚನಾರಹಿತವೋ ಹಾಗೆಯೇ ವಾಸ್ತವಿಕವಾಗಿರುವ ಆರ್ಥಿಕ ಅಸಮಾನತೆ ಸಹ ಅನ್ಯಾಯವೆಂದೂ ವಿವೇಚನಾರಹಿತವೆಂದೂ ಸಾರಿದರು. ಮತ್ತೆ ಫ್ರೆಂಚ್ ಕ್ರಾಂತಿಯು ನ್ಯಾಯ ಅನ್ಯಾಯಗಳ ಹೆಸರಿನಲ್ಲಿ ಸಾರಿದ ಸಂದೇಶ ಬಹು ಮಹತ್ತರವಾದ ಪ್ರಭಾವವನ್ನು ಬೀರುವಂತಹುದಾಗಿತ್ತು ನ್ಯಾಯ ಅನ್ಯಾಯಗಳ ಪ್ರಶ್ನೆ ವಿವೇಕ ಬುದ್ಧಿಯ ತೀರ್ಮಾನಕ್ಕೆ ಒಳಪಟ್ಟಿದ್ದರಿಂದ ಸಮಸ್ಯೆಗಳ ಬಗ್ಗೆ ತೀರ್ಮಾನ ದೈವ ಪ್ರಭಾವದಿಂದ ಪ್ರತ್ಯೇಕಿಸಲ್ಪಟ್ಟವು. ದೈವ ಪ್ರಭಾವದಿಂದ ಬಿಡುಗಡೆ ಹೊಂದಿದ ಮನುಷ್ಯ ಬುದ್ಧಿಗೆ ಪ್ರಾಶಸ್ತ್ಯ ದೊರಕಿತು, ಎಲ್ಲದಕ್ಕೂ ಮನುಷ್ಯ ಬುದ್ಧಿ ಫ್ರಾನ್ಸ್‌ನ ಮಹಾಕ್ರಾಂತಿಯ ಕಾಲದಲ್ಲಿ ಅವತರಿಸಿದ ಸಮಾನತೆಯ ತತ್ವ ನೊಂದ ಜನರ ತಾತ್ಕಾಲಿಕ ಆರ್ಭಟವಾಗದೆ ಚಿರಸ್ಥಾಯಿಯಾಯಿತು, ಅಲ್ಲದೆ ಫ್ರಾನ್ಸ್ ದೇಶದಲ್ಲಿ ಅನೇಕ ವಿಚಾರವಂತರು ಸಮಾನತೆಯ ಸಮಸ್ಯೆಯನ್ನು ಓರೆಗೆ ಹಚ್ಚಿದರು, ಇದರ ವಿಷಯವಾಗಿ ಸಾಹಿತ್ಯ ಬೆಳೆಯತೊಡಗಿತು. ಈ ಪ್ರತಿಭಟನಾಕಾರರು ಸಮಾನತೆ ಇರುವ ಸಮಾಜವನ್ನು ಬುದ್ಧಿಯ ಬಲದಿಂದ ರಚಿಸಲು ಸಾಧ್ಯವೆಂದು ತಿಳಿಸಿದರು, 'ಸಮಾಜವಾದ' ಫ್ರಾ. ಫಾರಿಯರ್' ಫ್ರಾಡನ್ ಮತ್ತು ಮುಖ್ಯವಾಗಿ ಸ್ಪೇಟ್ ಸೈಮನ್‌ರ ಬರಹಗಳು ಬಹಳ ಮುಖ್ಯವಾದವು ಎಂದು ಹೇಳಬಹುದು. ಹೀಗೆ ಫ್ರಾನ್ಸ್ ದೇಶ ಹೊಸ ಸಮಾಜದ ಸೃಷ್ಟಿಗೆ ಕಾರಣವಾಯಿತು ಎಂದು ಹೇಳಬಹುದು.

ಆನಂತರ ಇಂಗ್ಲೆಂಡ್ ದೇಶದಲ್ಲಿ ಕೈಗಾರಿಕಾ ಕ್ರಾಂತಿ(Industrial Revalution) ಉಂಟಾಯಿತು. ಕ್ರಮೇಣ ಕ್ರಾಂತಿ ಯುರೋಪಿನ ಅನೇಕ ಭಾಗಗಳಿಗೆ ಹರಡಿತು, ಈ ಕ್ರಾಂತಿ ಇಂಗ್ಲೆಂಡ್ ಮತ್ತು ಫ್ರಾನ್ಸ್ ದೇಶಗಳ ರಾಜಕೀಯ ಕ್ರಾಂತಿಗಳಷ್ಟೇ ಮುಖ್ಯವಾದದ್ದು. ಇದು ಪ್ರಪಂಚದ ಹಲವಾರು ಭಾಗಗಳಲ್ಲಿ ಈ ಪ್ರತಿಭಟನೆ ಹರಡಿತು, ಉತ್ಪಾದನೆಯಲ್ಲಿ ಯಾಂತ್ರಿಕ ಶಕ್ತಿಯನ್ನು ಉಪಯೋಗಿಸುವುದೇ ಈ ಪ್ರತಿಭಟನೆಯ ಪ್ರಮುಖ ಉದ್ದೇಶವಾಯಿತು ಕಾರ್ಮಿಕರು ಅತ್ಯಧಿಕ ರೀತಿಯಲ್ಲಿ ಶೋಷಣೆ ಆಗುತ್ತಿರುವುದನ್ನು ವಿರೋಧಿಸಿತು. ಇದರಿಂದ ಪ್ರತಿಭಟನೆ ಮತ್ತು ಮುಷ್ಕರಗಳು ಆರಂಭವಾದವು, ಈ ಪ್ರತಿಭಟನೆಯಲ್ಲಿ ರಾಬರ್ಟ್ ಓವೆನ್ ಎಂಬ ಉದಾರವಾದಿಯು ಯಂತ್ರದ ಉಪಯೋಗದಿಂದ ಕಾರ್ಮಿಕರಿಗೆ ಶೋಷಣೆಯಾಗುವುದಿಲ್ಲ. ಅದರ ಉಪಯೋಗದಿಂದ ಬಂದ ಪ್ರತಿಫಲವನ್ನು ದುಡಿಯುವ ಕೂಲಿಗಳಿಗೆ ಹಿಂತಿರುಗಿಕೊಡುವುದರಿಂದ ಶೋಷಣೆಗೆ ಅವಕಾಶವಿರುವುದಿಲ್ಲವೆಂದು ಹೇಳಿದನು ನಂತರ ಕಾರ್ಮಿಕವರ್ಗದ ಸ್ಥಿತಿಗತಿಗಳೇ ಬೇರೆಯಾಗಿದ್ದವು ಬಂಡವಾಳ ವ್ಯವಸ್ಥೆಯ ಬಗ್ಗೆ ಎಲ್ಲ ಸಮರ್ಥನೆಯೂ ಕಾರ್ಮಿಕವರ್ಗದ ಚಳವಳಿಯನ್ನು ತಡೆಗಟ್ಟಲು ಅಶಕ್ತವಾಯಿತು.

ಆ ನಂತರ ಭಾರತದಲ್ಲಿ ಈ ಎಲ್ಲ ಕ್ರಾಂತಿಗಳ ಪ್ರಭಾವದಿಂದ ಅಂದರೆ ಆಫ್ರಿಕಾದಲ್ಲಿ ನಡೆದ ಬಿಳಿಯರನ್ನು ವಿರೋಧಿಸಿ ಕರಿಯರು ಪ್ರತಿಭಟಿಸಿದ ಪ್ರತಿಭಟನೆಗಳನ್ನು ನೋಡಿ

ಭಾರತೀಯರು ಪ್ರೇರಣೆಗೊಂಡರು ಅದರಲ್ಲಿಯೂ ಮಹಾತ್ಮಾಗಾಂಧಿ ಆಫ್ರಿಕಾದಲ್ಲಿ ಆ ಸಂದರ್ಭದಲ್ಲಿ ಇದ್ದು ಭಾರತಕ್ಕೆ ಬಂದಿದ್ದರು ಆವಾಗ ಭಾರತದಲ್ಲಿ ಬ್ರಿಟೀಷರು ಅಂದರೆ ವಸಹತುಶಾಹಿಗಳು ಭಾರತೀಯರನ್ನು ತಮ್ಮ ಆಡಳಿತದಲ್ಲಿ ಹಿಡಿದಿದ್ದರು ವ್ಯಾಪರಕ್ಕೆಂದು ಬಂದು ಭಾರತೀಯರ ಸಂಪೂರ್ಣ ಆಡಳಿತ ವ್ಯವಸ್ಥೆಯನ್ನು ತಮ್ಮ ರಾಜಕೀಯ ಅನುಕೂಲಕ್ಕೆ ತಕ್ಕ ಹಗೆ ಬದಲಾಯಿಸಿ ಭಾರತೀಯ ಮುಗ್ಧ ಜನರನ್ನು ಶೋಷಣೆ ಮಾಡುತ್ತಿದ್ದರು. ಇದನ್ನು ವಿರೋಧಿಸಿ ಮಹತ್ಮಾಗಾಂಧಿಯ ಮುಖಂಡತ್ವದಲ್ಲಿ ಬ್ರಿಟೀಷರ ಆಡಳಿವನ್ನು ಖಂಡಿಸಿ ಸ್ಥಳೀಯವಾಗಿ ಸ್ವತಂತ್ರ ಸಮರ ಭಾರತದಲ್ಲಿ ನಡೆದು ಕೊನೆಗೆ ಈ ಸಂಗ್ರಾಮ ಭಾರತಕ್ಕೆ ಸ್ವತಂತ್ರವನ್ನು ತಂದುಕೊಟ್ಟಿತು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಹಿಂದಿದ್ದ ಮೇಲ್ವರ್ಗ ಮತ್ತು ಮೇಲ್ಜಾತಿಯವರು ಕೇಳಜಾತಿಯವರ ಮೇಲೆ ಮಾಡುತ್ತಿದ್ದ ಶೋಷಣೆಯನ್ನು ವಿರೋಧಿಸಿ ಬಾಬಾಸಾಹೇಬ ಅಂಬೇಡ್ಕರ ಮೇಲ್ಜಾತಿಯವರ ಶೋಷಣೆಯನ್ನು ಪ್ರತಿಭಟನೆ ಮಾಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಎಂದು ಕೆಳಜಾತಿಯವರನ್ನು ಗುರುತಿಸಿ ಸಾಮಾಜಿಕ ಸಮಾನತೆಯನ್ನು ಕಾಪಾಡುವಲ್ಲಿ ಇವರ ಪಾತ್ರ ಮುಖ್ಯವಾಯಿತು. ಇದರ ಪರಿಣಾಮವಾಗಿ ದಲಿತಸಮುದಾಯದ ಚಳುವಳಿಗಳು ಅಲ್ಲಲ್ಲಿ ಆಗಿ ಹೋದವು.

ಇದರ ಜೊತೆಗೇನೆ 'ಬಂಡಾಯ' ಎನ್ನುವ ಒಂದು ಸಾಹಿತ್ಯ ಪಂಥದಲ್ಲಿ ಶಿಕ್ಷಣವಂತರ ಗುಂಪು ಮೇಲ್ವರ್ಗದವರು ಕೇಳವರ್ಗದವರ ಮೇಲೆ ಮಾಡುವಂತ ಶೋಷಣೆಯನ್ನು ಬರವಣಿಗೆಯ ರೂಪದಲ್ಲಿ ಪ್ರತಿಭಟಿಸಿದರು.

ಇದರ ಜೊತೆಗೆ ರೈತ ಚಳುವಳಿ ಮಹಿಳಾ ಚಳುವಳಿ ಹೀಗೆ ಹಲವಾರು ಚಳುವಳಿಗಳು ಅಂದಿನಿಂದ ಇಂದಿನವರೆಗೂ ನಡೆದು ಬಂದಿರುವುದು ನಮಗೆ ತಿಳಿದುಬರುತ್ತದೆ. ಇವತ್ತು ಮಹಿಳೆಯರ ಮೇಲೆ ಪುರುಷರಿಂದ ಆಗುತ್ತಿರುವ ಅತ್ಯಾಚಾರವನ್ನು ಪ್ರತಿಭಟಿಸಿ ಇಡೀ ದೇಶದಲ್ಲಿ ಮಹಿಳಾ ಪ್ರತಿಭಟನೆಗಳು ಆಗುತ್ತ ಇರುವುದನ್ನು ನಾವು ಇಂದು ನೋಡುತ್ತಿದ್ದೇವೆ.

ಹೀಗೆ ಪ್ರತಿರೋಧ ಮತ್ತು ಪ್ರತಿಭಟನೆ ಎನ್ನುವುದು ಮನುಷ್ಯನ ಸಹಜಗುಣವಾಗಿ ಬೆಳೆದುಬಂದು ಮಾನವನ ಚರಿತ್ರೆಯುದ್ದಕ್ಕೂ ನಾವು ಈಃ ಪ್ರತಿರೋಧಗಳನ್ನು ನೋಡುತ್ತಾ ಬರುತ್ತೇವೆ.



ಅಧ್ಯಾಯ : ನಾಲ್ಕು

# ಲಾವಣಿ ಸಾಹಿತ್ಯ ಪರಿಚಯ

---

ೞ.೧. ಲಾವಣಿ ಪದದ ಉತ್ಪತ್ತಿ ಹಾಗೂ ಅರ್ಥ ವಿವರಣೆ

ೞ.೨. ಲಾವಣಿ ಇತಿಹಾಸ

ೞ.೩. ಲಾವಣಿ ಲಕ್ಷಣ

ೞ.ೞ. ಲಾವಣಿ ಪ್ರಕಾರ

## ಅಧ್ಯಾಯ : ನಾಲ್ಕು

# ಲಾವಣಿ ಸಾಹಿತ್ಯ ಪರಿಚಯ

"ಇಂಗ್ಲೀಷಿನ Balladಗೆ ಲಾವಣಿ ಎಂಬ ಪದ ಕನ್ನಡದಲ್ಲಿ ಸಂವಾದಿಯಾಗಿ ಬೆಳೆದುಬಂದಿದೆ. ಈ ಪದವನ್ನು ಡಾ. ಹಾ.ಮಾ. ನಾಯಕ ತಮ್ಮ 'ಜನಪದ ಸಾಹಿತ್ಯ ಅದರ ಸ್ವರೂಪ' ಪ್ರಬಂಧದಲ್ಲಿ ಮೊಟ್ಟ ಮೊದಲು ಬಳಸಿದರು."[೧] ಇದನ್ನೇ ಆಧಾರವಾಗಿಟ್ಟುಕೊಂಡು ಲಾವಣಿಗಳ ಚರಿತ್ರೆಯನ್ನು ವಿವರಿಸುವಾಗ Balladಗಳ ಚರಿತ್ರೆಯನ್ನೇ ಆಧಾರವಾಗಿಟ್ಟುಕೊಂಡು ವಿವರಿಸಲಾಗುತ್ತದೆ. 'ಲಾವಣಿ' ರೂಪವು Balladಗಳ ಮಾದರಿಯಲ್ಲಿಯ ಕಥನ ಕಾವ್ಯ ಆದರೆ ಅದಕ್ಕೆ ಅದರದೇ ಆದ ವಿಶಿಷ್ಟ ಲಕ್ಷಣಗಳಿವೆ. ಲಾವಣಿ ಲಕ್ಷಣಗಳನ್ನು ಚರ್ಚಿಸುವ ಮೊದಲು 'ಲಾವಣಿ' ಪದದ ವ್ಯುತ್ಪತ್ತಿ. ಅರ್ಥವಿವರಣೆ ಹಾಗೂ ಇತಿಹಾಸ ಅರಿತುಕೊಳ್ಳುವದು ಅಧ್ಯಯನಕ್ಕೆ ಪೂರ್ವ ಮಾಹಿತಿ ಎಂದು ಭಾವಿಸುತ್ತೇನೆ.

### ೪.೧. ಲಾವಣಿ ಪದದ ಉತ್ಪತ್ತಿ ಹಾಗೂ ಅರ್ಥ ವಿವರಣೆ

'ಲವಣ' ಶಬ್ದದಿಂದ ಲಾವಣಿ ವ್ಯುತ್ಪತ್ತಿಗೊಂಡಿದೆಯೆಂದು ಹೇಳಲಾಗಿದೆ. 'ಲವಣ' ಎಂದರೆ ಉಪ್ಪು, ಉಪ್ಪಿನಂತೆ ಲಾವಣಿ ರುಚಿಕಟ್ಟಾಗಿರುವೆಂದು ಭಾವಿಸಲಾಗಿದೆ. 'ಲಾವಣ್ಯ'ದಿಂದ ಲಾವಣೀ ವ್ಯುತ್ಪತ್ತಿಗೊಂಡಿರಬಹುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಲಾವಣಿಗಳು ಮೊದಮೊದಲು ಹೆಣ್ಣಿನ ಲಾವಣ್ಯ ಇಲ್ಲವೆ ಶೃಂಗಾರ ವರ್ಣಿಸುವ ಸಾಧನಗಳಾಗಿದ್ದವು. ಆನಂತರ ಗಂಡಿನ ಶೌರ್ಯ-ಸಾಹಸ, ದುಃಖ-ದುಮ್ಮಾನ ಹಾಗೂ ಭಕ್ತಿ-ಭಾವಗಳು ಲಾವಣಿಗೆ ವಸ್ತುವಾಗಿರುವುದು ತೋರುತ್ತದೆ.

ಲಾವಣಿಯು ಶೃಂಗಾರದಿಂದ ವ್ಯುತ್ಪತ್ತಿಗೊಂಡಿದೆ. ಲಾವಣಿಯ ಉಗಮ ಕುರಿತು ನಿಖರವಾಗಿ ಹೇಳುವ ಯಾವುದೇ ಆಧಾರಗಳು ಈವರೆಗೆ ಲಭ್ಯವಿಲ್ಲ. ಮಹಾರಾಷ್ಟ್ರದ ಗಡಿಪ್ರದೇಶಗಳಲ್ಲಿ ಈ ಲಾವಣಿ ಸಾಹಿತ್ಯವನ್ನು ಹೋಲುವ ಸಾಹಿತ್ಯ ವಿಫುಲವಾಗಿ ದೊರೆಯುತ್ತದೆ. ಹಾಗಾಗಿ ಲಾವಣಿ ಸಾಹಿತ್ಯವು ಮಹಾರಾಷ್ಟ್ರದಲ್ಲಿಯೇ ಉದಮಿಸಿರಬಹುದು ಎಂದು ಊಹಿಸಲಾಗಿದೆ.ಇನ್ನೊಂದು ನಿದರ್ಶನದ ಪ್ರಕಾರ ಪೇಶ್ವೆಯವರು ಯುದ್ಧ ಸಮಯದಲ್ಲಿ ಸೈನಿಕರಿಗೆ ಹುರುಪು ಹುಮ್ಮಸ ನೀಡುವುದಕ್ಕಾಗಿ ಹೇಳಿಸುತ್ತಿದ್ದ ಪೋವಾಡ ಲಾವಣಿಗಳು ಕನ್ನಡ ಲಾವಣಿ ರಚನೆಗೆ

ಪ್ರೇರಣೆಯಾದವು. ಮರಾಠಿ ಪೋವಾಡ ಲಾವಣಿಗಳು ಕ್ರಮವಾಗಿ ವೀರ ಹಾಗೂ ಶೃಂಗಾರ ರಸಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತವೆ. ಅವು ಗ್ರಾಮೀಣಕ್ಕೆ ಬದಲಾಗಿ ನಗರ ಸಂಪ್ರದಾಯದಲ್ಲಿ ಬೆಳೆದು ಬಂದವು. ಆದರೆ ಕನ್ನಡ ಲಾವಣಿಗಳು ವೀರ ಹಾಗೂ ಶೃಂಗಾರ ರಸಗಳನ್ನು ಮೇಳವಿಸಿಕೊಂಡು ನಗರಕ್ಕೆ ಬದಲಾಗಿ ಗ್ರಾಮೀಣ ಸಂಪ್ರದಾಯದಲ್ಲಿ ಹುಟ್ಟಿಕೊಂಡು ಶುದ್ಧ ಜಾನಪದಗಳಾಗಿ ಉಳಿದಿದೆ.

## ೪.೨. ಲಾವಣಿ ಇತಿಹಾಸ

ಮಹಾರಾಷ್ಟ್ರದ ಪೋವಾಡ ಲಾವಣಿಗಳು ಎಂಬ ಸಾಹಿತ್ಯದಿಂದ ಪ್ರಭಾವಿತವಾಗಿ ಕನ್ನಡ ಲಾವಣಿಗಳು ಹುಟ್ಟಿರುವುದರಿಂದ ಇದಕ್ಕೆ ದೀರ್ಘವಾದ ಇತಿಹಾಸವಿರುವುದು ಕಂಡುಬರುತ್ತದೆ. ಹದಿನೇಳನೆಯ ಶತಮಾನದ ಗುಣಚಂದ್ರನ 'ಛಂದಸ್ಸಾರಂ' ಗ್ರಂಥದ ಲಕ್ಷಣ ಪದ್ಯ 'ಲಾವ'(ಣಿ)ಯ ಪಾದ ಮಿತಿಯ ಅನಿರ್ದಿಷ್ಟತೆ ಮತ್ತು ಅಂತ್ಯಪ್ರಾಸಗಳೆಂಬ ಎರಡು ಲಕ್ಷಣಗಳನ್ನು ಸೂಚಿಸಿದರು ಇದಕ್ಕೆ ಲಕ್ಷ್ಯವಾದ ಲಾವಣಿ ಹಾಡುಗಳು ಕನ್ನಡದಲ್ಲಿದ್ದವೆಂಬುದಕ್ಕೆ ಆಧಾರಗಳು ಸಿಕ್ಕಿಲ್ಲ "ಸಾಮಾನ್ಯವಾಗಿ ಲಾವಣಿಕಾರರು ತಮ್ಮ ಕೃತಿ ರಚನೆಯ ಕಾಲಮಾನದ ಬಗೆಗೆ ಹೇಳಿಕೊಂಡಿರದಿದ್ದರೂ ಅಲ್ಲಿನ ಘಟನೆಗಳು ಜರುಗಿದ ಸಂವತ್ಸರಾಧಿಗಳನ್ನು ಖಚಿತವಾಗಿ ಹೇಳಿರುವ ಆಧಾರದ ಮೇಲಿಂದ ಲಾವಣಿ ರಚನೆಯ ಕಾಲಮಾನ ಊಹಿಸಲು ಸಾಧ್ಯವಾಗಿದೆ.[೧]

ಉದಾಹರಣೆಗೆ, ಫ್ಲೀಟರು ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳಲ್ಲಿ ೨ 'ಆದಾಯ ತೆರಿಗೆ' ಪರಮಧೂತನಾಮ(೧೮೬೮), ಪರಜೋತ್ಪತ್ಯ ಸಂವತ್ಸರ ೧೮೬೯ಗಳಿಗೆ ಸಂಬಂಧಿಸಿದುದು, 'ಸಂಗೊಳ್ಳಿ ರಾಯಣ್ಣನ ದಂಗೆ' ಕ್ರಿ.ಶ. ೧೮೨೯ರಲ್ಲಿ ಜರುಗಿದುದು 'ಹಲಗಲಿ ಬೇಡರು' ಹಾಡಿನ ವಸ್ತು ೧೮೫೭ರ ಬ್ರಿಟಿಷರ ನಿಶಸ್ತ್ರೀಕರಣ ಕಾಯ್ದೆಯ ಪ್ರತಿಕ್ರಿಯೆ, 'ಸಂಗ್ಯಾನ ಅಪರಾಧ ಮತ್ತು ಸಾವು' ಹಾಡಿನ ಘಟನೆ ನಡೆದದ್ದು 'ಸೆಕೆ ಸತ್ತರಾಸೌ ಪಂಚಾವಂಸಿ (ಶಾ.ಶ. ೧೭೮೫) ರುದ್ರೋದ್ಗಾರಿ ಸಂವತ್ಸರ ಎಂದು ನಮೂದಿಸಲಾಗಿದೆ. ಕಳೆದ ಶತಮಾನದ ಧಾತುನಾಮ ಸಂವತ್ಸರ(ಶಾ.ಶ. ೧೭೯೮)ರಲ್ಲಿ ಬಿದ್ದ ಭೀಕರ ಬರಗಾಲದ ಸಚಿತ್ರ ಲಾವಣಿಯೊಂದು ಸ್ಪಷ್ಟವಾಗಿ ಕಾಲವನ್ನು ಸೂಚಿಸುತ್ತದೆ. ಲಾವಣಿಕಾರರು ಸಾಮಾನ್ಯವಾಗಿ ಆಯಾಕಾಲದ ವೃತ್ತಪತ್ರಿಕೆಗಳಂತೆ ಗೋಚರವಾಗುತ್ತಾರೆ. ಒಂದು ಮಹತ್ವದ ಘಟನೆ ನಡೆದ ನಂತರ ಅದರ ನೆನಪು ಇನ್ನೂ ಜನರ ಚಿತ್ತದಲ್ಲಿ ಜೀವಂತವಿರುವಾಗಲೇ ಆ ವಸ್ತುವನ್ನು ಬಳಸಿಕೊಂಡು ಮೊದಲ ಲಾವಣಿ ಹುಟ್ಟುತ್ತದೆ. ಅದರ ಯಶಸ್ಸನ್ನಾಧರಿಸಿ ಅದೇ ವಸ್ತು ಕುರಿತು ಹಲವಾರು ಲಾವಣಿಕಾರರು ಕೃತಿ ರಚಿಸುತ್ತಾರೆ. ಹೀಗಾಗಿ, ಒಂದೇ ವೃತ್ತಾಂತವನ್ನವಲಂಬಿಸಿದ ಅನೇಕಾನೇಕ ಲಾವಣಿಗಳು ಪ್ರಚಾರಕ್ಕೆ ಬಂದಿರುವ ನಿದರ್ಶನಗಳುಂಟು, ಆದುದರಿಂದ ಹಾಡುಗಳಲ್ಲಿರುವ ವೃತ್ತಾಂತದ ಕಾಲಕ್ಕೂ, ಆ ವೃತ್ತಾಂತವನ್ನು ಬಳಸಿಕೊಂಡು ಹುಟ್ಟಿದ(ವೃತ್ತಾಂತದ ಕಾಲವನ್ನು ಸ್ಪಷ್ಟವಾಗಿ ನಮೂದಿಸುವ) ಲಾವಣಿಗೂ ಬಹಳವೆಂದರೆ ಒಂದೆರಡು ವರ್ಷದ ಅಂತರವಿರುವ ಸಾಧ್ಯತೆಯುಂಟು, ಈಗ ಲಭ್ಯವಿರುವ ಹಾಗೂ ಅವುಗಳಲ್ಲಿ ಸ್ಪಷ್ಟವಾಗಿ ಕಾಲಮಾನ ಸೂಚಿಸಿರುವ ಲಾವಣಿಗಳಲ್ಲಿ ಕಿತ್ತೂರ

ಬಂಡಾಯ ವೃತ್ತಾಂತಕ್ಕೆ ಸಂಬಂಧಿಸಿದವುಗಳೇ ಅತಿ ಹಳೆಯವಾಗಿರುವ ಪ್ರಯುಕ್ತ ಅವುಗಳಲ್ಲಿ ಕೆಲವಾದರೂ ೧೮೨೫ರಿಂದ ೧೮೩೨ರ ಅವಧಿಯಲ್ಲಿ ರಚಿತವಾಗಿರಬೇಕೆಂದು ತರ್ಕಿಸಲಾಗುತ್ತದೆ. ಈ ಅವಧಿಗೆ ಮುನ್ನ ಲಾವಣಿಗಳು ರಚಿತವಾದುದಕ್ಕೆ ಖಚಿತವಾದ ಆಧಾರಗಳು ಇನ್ನೂ ಲಭ್ಯವಾಗಬೇಕಿದೆ.

## ೪.೩. ಲಾವಣಿ ಲಕ್ಷಣ

ಈಗಾಗಲೇ ಹೇಳಿದಂತೆ ಕನ್ನಡ ಲಾವಣಿಗಳು ಮಹಾರಾಷ್ಟ್ರದ ಪೋವಾಡ, ಲಾವಣಿಗಳಿಂದ ಪ್ರಭಾವಿತವಾದುದರಿಂದ ಅವುಗಳ ಶೈಲಿ ಹಾಗೂ ಹಾಡುಗಾರಿಕೆ ಪ್ರಭಾವಕ್ಕೊಳಗಾದುದು ಸಹಜ, ಹರದೇಶಿ, ನಾಗೇಶಿ, ಸಖಿ, ಖ್ಯಾಲಿ, ಕಲ್ಗಿ, ತುರಾ ಮುಂತಾದ ಪಾರಿಭಾಷಿಕ ಪದಗಳಿಂದ ಲಾವಣಿಯನ್ನು ಗುರುತಿಸಲಾಗುತ್ತದೆ. ಲಾವಣಿ ಹಾಡನ್ನು ಈ ಪಾರಿಭಾಷಿಕ ಪದಗಳು ನುಡಿಗೆ ಬದಲಾಗಿ ಚೌಕುಗಳಾಗಿ ವಿಭಾಗಿಸುವುದು, ಆದಿಪ್ರಾಸವನ್ನು ತ್ಯಜಿಸುವುದು, ಇಡಿಯ ಚೌಕಿಗೆಲ್ಲ ಒಂದೇ ಅಂತ್ಯಪ್ರಾಸ ಯೋಚಿಸಿಕೊಂಡಿರುವ ಇವೇ ಮೊದಲಾದ ಲಕ್ಷಣಗಳು ಮರಾಠಿ ಪ್ರಭಾವದತ್ತ ಬೆರಳುಟ್ಟು ಮಾಡಿ ತೋರಿಸುತ್ತವೆ. ಈ ಹಿನ್ನೆಲೆಯಲ್ಲಿ ಕನ್ನಡ ಲಾವಣಿ ಲಕ್ಷಣಗಳನ್ನು ಪರಿಶೀಲಿಸಬಹುದು.

ಲಾವಣಿಯು ವಿಷಯವನ್ನು ನಿರೂಪಣಾತ್ಮಕವಾಗಿ ಪ್ರತಿಬಿಂಬಿಸುತ್ತದೆ. ನಿರೂಪಣೆಯ ನಾಲ್ಕೂ ಸಾಮಾನ್ಯ ಅಂಶಗಳಾದ ಕ್ರಿಯೆ, ಪಾತ್ರ, ವೇಷ, ಭೂಷಣ ಮತ್ತು ವಸ್ತು ಇವುಗಳಲ್ಲಿ ಲಾವಣಿ ಮೊದಲನೆಯದಕ್ಕೆ(ಕ್ರಿಯೆ) ಪ್ರಾಶಸ್ತ್ಯ ಕೊಡುತ್ತದೆ. ವೇಷ-ಭೂಷಣ ಅನಿಶ್ಚಿತ, ವಸ್ತು ಮೇಲಿಂದ ಮೇಲೆ ಸೂಚಿತವಾಗಿರುತ್ತವೆ. ಪಾತ್ರಗಳು ಸಾಮಾನ್ಯವಾಗಿ ಸಾಂಕೇತಿಕವಾದವುಗಳು ಮತ್ತು ಬಹಳಷ್ಟು ಪಾತ್ರಗಳು ಬೆಳವಣಿಗೆ ರಹಿತವಾಗಿರುತ್ತವೆ. ಆದರೆ ಸ್ವಲ್ಪ ನಾಟಕೀಯವಾಗಿರುತ್ತವೆ. ಕ್ರಿಯೆ ಮಾತ್ರ ಆಸಕ್ತಿಯನ್ನು ಆಗಾಗ್ಗೆ ಆಶ್ಚರ್ಯವನ್ನು ಹುಟ್ಟಿಸುತ್ತದೆ ಮತ್ತು ತನ್ನ ಶುದ್ಧ ಏಕರೂಪತೆಯಿಂದಾಗಿ ಮನಸ್ಸಿನ ಮೇಲೆ ಗಾಢ ಪ್ರಭಾವ ಬೀರುವಂಥದ್ದಾಗಿರುತ್ತದೆ. ಲಾವಣಿ, ಕ್ರಿಯೆ ವಿವರಿಸುವಲ್ಲಿ ಕಟ್ಟುನಿಟ್ಟಾದ ಮಿತವ್ಯಯವನ್ನು ಅನುಸರಿಸುತ್ತದೆ. ಪರಾಕಾಷ್ಠೆಗೆ ಸಂಬಂಧಿಸಿದ ಪೂರ್ವೋಕ್ತ ಘಟನೆಗಳನ್ನು ಆಗಾಗ್ಗೆ ಕೈಬಿಡಲಾಗುತ್ತದೆ. ವಿವರಣಾತ್ಮಕ ಮತ್ತು ಪ್ರೇರಕ ಅಂಶಗಳು ಮಾತ್ರ ಉಳಿದುಕೊಳ್ಳುತ್ತವೆ. ಕ್ರಿಯೆ ಸಾಮಾನ್ಯವಾಗಿ ಕಥಾವಸ್ತುವಿನ ರೀತಿಯಲ್ಲೇ ಇದ್ದು ಕಥಾವಸ್ತು ಆಗಿಂದಾಗ್ಗೆ ಪರಾಕಾಷ್ಠೆಯ ಕ್ಷಣಗಳವರೆಗೆ ಕಡಿಮೆಗೊಳ್ಳುತ್ತಿರುತ್ತದೆ. ಕಥಾವಸ್ತು ನಿಯೋಜಿಸುವ ಅಸ್ತಿರ ಸನ್ನಿವೇಶ ಮತ್ತು ವಿಶ್ಲೇಷಣೆ(ವಿಭಜನೆ)ಗಳಿಂದಾಗಿ ಲಾವಣಿ ಆಗಿಂದಾಗ್ಗೆ ವಿವರಣೆಯತ್ತ ಗಮನಹರಿಸುತ್ತ ಕಥೆಗೆ ಬೇಕಾದ ವಿವರಗಳನ್ನು ಮತ್ತು ಪೂರ್ವೋಕ್ತ ಮಾಹಿತಿಗಳನ್ನು ಒದಗಿಸುವ ವಿಚಾರಗಳನ್ನು ಕೇಳುಗ(ಶ್ರೋತೃ)ನಿಗೆ ಬಿಡುತ್ತದೆ.

"ಲಾವಣಿಯ ಮತ್ತೊಂದು ಮುಖ್ಯ ಲಕ್ಷಣ ಗೇಯತೆಯ ಗುಣ, ಲಾವಣಿಯನ್ನು ವಾದ್ಯಪರಿಕರಗಳೊಂದಿಗೆ ಹಾಡಲಾಗುತ್ತದೆ. ಸಂಗೀತದ ದೃಷ್ಟಿಯಿಂದ ಹೇಳುವದಾದರೆ ಲಾವಣಿ ವಿಶಿಷ್ಟ ತಂತ್ರದಿಂದ ಕೂಡಿದೆ. ಚಿಟಕಿ ಲಾವಣಿಯಲ್ಲಿ ಪಲ್ಲ, ಏರು, ಇಳವು ಮುಕ್ತಾಯ

ಇರುವುದುಂಟು ಆದರೆ ಕಲ್ಲಿ–ತುರಾ ಲಾವಣಿಯಲ್ಲಿ ಹಾಡಿಗೆ ಮೊದಲು ಸ್ತುತಿ"[೩] ಬರುತ್ತದೆ. ಇದಕ್ಕೆ 'ಸಖಿ' ಎಂದು ಗುರುತಿಸಲಾಗುತ್ತದೆ. ಹಾಡಿನ ಕೊನೆಯ ನುಡಿಗೆ 'ಖ್ಯಾಲಿ' ಎಂದು ಕರೆಯಲಾಗುತ್ತದೆ. 'ಸಖಿ' ಮತ್ತು 'ಖ್ಯಾಲಿ'ಗಳ ಮಧ್ಯದಲ್ಲಿದ್ದುದೆಲ್ಲ ಲಾವಣಿ ಹಾಡು, ಹಾಡಿನ ಹರವು ಹೆಚ್ಚಾಗಿದ್ದರೆ ಅದನ್ನು ನುಡಿ ಇಲ್ಲವೆ ಚೌಕುಗಳೆಂದು ವಿಭಾಗಿಸಲಾಗುತ್ತದೆ. ಹಾಡಿನಾರಂಭದಲ್ಲಿರುವ ಪಲ್ಲದಲ್ಲಿ ಇಡಿಯ ಲಾವಣಿಯ ಸಾರ ಹುದುಗಿರುತ್ತದೆ. ಒಂದೊಂದು ಚೌಕ(ನುಡಿ) ಮುಗಿಯುತ್ತಲೇ ಪಲ್ಲವಿಪುನರಾವರ್ತಿಗೊಳ್ಳುವದು, ಪಲ್ಲವಿಯನ್ನು ವಿಲಂಬಿತ ಲಯದಲ್ಲಿ ಸಾವಕಾಶವಾಗಿ ರಾಗವೆತ್ತಿ ಹಾಡುತ್ತಲೇ ಮಧ್ಯಲಯಕ್ಕೆ ಇಳಿದು ಏರಿನಲ್ಲಿ ಹಾಡಲಾಗುತ್ತದೆ. ಅದುವೆ 'ಏರು' ಒಂದೆರಡು ನುಡಿಗಳು ಏರಿನಲ್ಲಿಯೇ ಕೇಳಿಬರುತ್ತವೆ. ಆ ಮೇಲೆ ದೃತಲಯಕ್ಕೆ ಬಂದು ಸಣ್ಣ ಸಣ್ಣ ಸಾಲಿನ ಇಳವು ನುಡಿಗಳು ಕೇಳಿಸುತ್ತವೆ. ಲಾವಣಿ ರಚನೆಯಲ್ಲಿ ಇದಕ್ಕೆ 'ಇಳವು' ಎಂದು ಕರೆಯಲಾಗಿದೆ. ಇಳವಿಗೆ 'ಚ್ಯಾಲ' ಎಂದೂ ಕರೆಯುವುದುಂಟು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ 'ಏರು' ನುಡಿಯ ಛಂದಸ್ಸಿಗೂ 'ಇಳವು' ನುಡಿಯ ಛಂದಸ್ಸಿಗೂ ಬಹಳ ವ್ಯತ್ಯಾಸವಿದೆಯಲ್ಲದೆ ಅವುಗಳನ್ನು ಹಾಡುವ ಧಾಟಿಯಲ್ಲಿಯೂ ಭಿನ್ನತೆ ಕಂಡುಬರುತ್ತದೆ. ಒಂದೊಂದು ಚೌಕದಲ್ಲಿ ಈ ವೈಶಿಷ್ಟ್ಯ ಶ್ರೋತೃಗಳ ಅನುಭವಕ್ಕೆ ಬಾರದಿರದು, ಎಲ್ಲ ಗುಣಗಳಿಂದ ಲಾವಣಿ ಸಾಹಿತ್ಯ ಜನರನ್ನು ಆಕರ್ಷಿಸುತ್ತದೆ. ಪ್ರತಿಯೊಂದು ಲಾವಣಿಯ ಕೊನೆಯಲ್ಲಿ ಲಾವಣಿಕಾರ ಏರಿನಲ್ಲಿ ತನ್ನ ಊರು, ಹೆಸರು ಇಲ್ಲವೆ ತನ್ನ ಆರಾಧ್ಯ ದೈವವನ್ನು ನೆನೆಯುತ್ತಾನೆ. ಈ ಒಂದು ಲಕ್ಷಣಕ್ಕೆ ಹಾಡಿನ ಮುದ್ರಿಕೆ ಎಂದು ಕರೆಯಲಾಗುತ್ತದೆ. ಹಾಡಿನ ಕೊನೆ ಮುಗಿಯುತ್ತಾ ಬಂದಂತೆಲ್ಲ ಲಾವಣಿಕಾರ ಅದರ ಇಳವಿನಲ್ಲಿ ಅದರ ಪಲ್ಲವಿಯನ್ನು ಪುನರಾವರ್ತಿಗೊಳಿಸುತ್ತಾನೆ. ಇದರ ಮೂಲಕ ಹಾಡಿಗೆ ಮುಕ್ತಾಯಗೊಳಿಸುತ್ತಾನೆ. ಈ ಎಲ್ಲ ಸಂಗೀತದ ಲಕ್ಷಣಗಳ ಜೊತೆಗೆ ಲಾವಣಿಯು ನರ್ತನದ ಜೊತೆ ಸೇರುತ್ತದೆ. ಸಾಮಾನ್ಯವಾಗಿ ಮೇಳಲಾವಣಿಯಲ್ಲಿ ಅದರಲ್ಲೂ ಕಲ್ಲಿ–ತುರಾ ಸ್ಪರ್ಧಾತ್ಮಕ ಗೀತಗೋಷ್ಠಿಯಲ್ಲಿ ಹಾಡಿನ ಜೊತೆಗೆ ನರ್ತನ ಮಾಡುವುದು ಕಂಡುಬಂದರೂ ಹಾಡಿಗಿಂತ ನರ್ತನ ಮಹತ್ವದಲ್ಲವೆಂಬುದನ್ನು ಮರೆಯಲಾಗದು.

"ಲಾವಣಿಯ ಮತ್ತೊಂದು ಲಕ್ಷಣ ಅದು ಸ್ವರೂಪದಲ್ಲಿ ಜಾನಪದಕ್ಕೆ ಸೇರಿದ್ದು. ಲಾವಣಿ ಜಾನಪದಕ್ಕೆ ಸೇರಿದ್ದರೂ ಸಹಿತ ಅದು ಪುರಾತನವಾದ ಪ್ರಕಾರವಲ್ಲ. ಅನಾಗರಿಕರಿಂದ ರಚನೆಯಾಗಿಲ್ಲ ಅದು ಸುಶಿಕ್ಷಿತ ಮತ್ತು ಸಾಹಿತ್ಯಿಕ ಪ್ರಜ್ಞೆಯುಳ್ಳ ನಾಗರೀಕರಿಂದಲೆ ರಚನೆಯಾಗಿ ರುವುದು."[೪] ಲಾವಣಿ ಪ್ರಕಾರ ಜಾನಪದದಲ್ಲಿ ತನ್ನ ಹಿಂದೆ ಒಂದು ದೊಡ್ಡ ಪರಂಪರೆಯನ್ನೇ ಹೊಂದಿದೆ. ಆ ಪರಂಪರೆ ಅಕ್ಷರಸ್ಥ ಮತ್ತು ಪ್ರಜ್ಞಾಪೂರ್ಣ ಸಂಸ್ಕೃತಿಯಿಂದ ಭಾಗಶಃ ನಿಯಂತ್ರಣಕ್ಕೊಳಪಟ್ಟಿದೆ. ಅವರಿಂದ ಆಕಾರವನ್ನು ಪಡೆದುಕೊಂಡಿರುವಂಥದ್ದೂ ಆಗಿದೆ. ಜನಪದರು ಅವಿದ್ಯಾವಂತರಾಗಿರುವದಕ್ಕಿಂತಲೂ ಹೆಚ್ಚಾಗಿ ಅನಕ್ಷರಸ್ಥರು. ಅವರು ಸಮರೋಪದ ವ್ಯಕ್ತಿಗಳು ಬದುಕಿನ ನಾಟಕೀಯ ಸ್ಥಿತಿಯಲ್ಲಿ ಅವರು ಎಲ್ಲದರ ಬಗ್ಗೆಯೂ ಆಸಕ್ತಿ ಇರಿಸಿಕೊಂಡವರು. ಸತ್ವಯುಕ್ತ ಕಥೆ ಮತ್ತು ಜನಪದ ಕಥೆಗಳ ದೊಡ್ಡ ಭಂಡಾರವೇ ಅವರಲ್ಲಿದೆ. ಸಂಪ್ರದಾಯವಾದ

ಅರೆನಂಬಿಕೆಗಳಿಂದ ಕೂಡಿದ ಜಾನಪದ ನಿಧಿ ಅವರದು. ಆದ್ದರಿಂದ ಲಾವಣಿ ಜಾನಪದ ಐತಿಹ್ಯ ಮತ್ತು ಸ್ಥಳೀಯ ಚರಿತ್ರೆಗಳ ಸಮ್ಮಿಶ್ರಣವೇ ಆಗಿದೆ. ಕಾಲದಿಂದ ಕಾಲಕ್ಕೆ ಜನಪದರು ಲಾವಣಿಯ ರಚನೆಯೊಂದಿಗೆ ಅದಕ್ಕೆ ಆಕಾರ ಕೊಡುವುದು, ವಸ್ತುವನ್ನು ಬದಲಾವಣೆಗೊಳ್ಳ ಪಡಿಸುವುದು. ಘಟನೆ, ಶೈಲಿಗಳನ್ನು ಮಾರ್ಪಡಿಸುವುದು, ತಪ್ಪಿಗೆ ಅವಕಾಶವಾಗದಂತೆ ಸ್ಪರ್ಶಿಸುವುದು ಇದನ್ನೆಲ್ಲ ಮಾಡುತ್ತ ಬಂದರು.

"ಲಾವಣಿಯ ಇನ್ನೊಂದು ಲಕ್ಷಣ ಘಟನಾಸ್ವರೂಪದ್ದಾದರೂ ವೈಯಕ್ತಿಕವಾದುದಲ್ಲ. ಸಣ್ಣಕತೆಯ ಹಾಗೆ ಲಾವಣಿ ಒಂದು ಸಣ್ಣಘಟನೆ ತೆಗೆದುಕೊಂಡು ಅದನ್ನು ಹಂತಗೊಳಿಸಿ, ಅದಕ್ಕೊಂದು ಆರ್ಥಿಕ ಕೇಂದ್ರವನ್ನೊದಗಿಸುತ್ತದ." ಈ ರೀತಿಯಾಗಿ ಲಾವಣಿ ಉಪಖ್ಯಾನಾತ್ಮಕವಾಗಿ ಘಟನೆಗಳನ್ನು ಬೆಳೆಸಿ ಕಥೆಯಾಗಿಸುವ ಜನಪದ ಕಥೆ ಅಥವಾ ಮಹಾಕಾವ್ಯಗಳಿಂದ ಭಿನ್ನವಾಗಿರುತ್ತದೆ. ಇದು ಕಥೆಯನ್ನು ಅತ್ಯವಶ್ಯಕ ವಿವರಣೆಗಳಿಂದ, ಪ್ರೇರಣೆಗಳಿಂದ, ಘಟನಾತ್ಮಕ ವಸ್ತುವಿನಿಂದ ಎಲ್ಲಕ್ಕಿಂತಲೂ ಮುಖ್ಯವಾಗಿ ಸಂಪಾದಕೀಯ ಕ್ರಮ ಕೈಕೊಳ್ಳುವುದರಿಂದ ಮುಕ್ತಗೊಳಿಸುತ್ತದೆ. ಇದರ ಫಲಿತಾಂಶಗಳು ವೈಯಕ್ತಿಕ ಸಂಬಂಧದಿಂದ ಸಂಪೂರ್ಣವಾಗಿ ಕಳಚಿಕೊಳ್ಳುವುದು ಮಾತ್ರವೇ ಆಗಿರದೆ ಅದರ ತೆರಪುಳ್ಳ(ಬಿಡುವುಳ್ಳ) ನಿರೂಪಣೆಯಿಂದ ಓದುಗ ಅತ್ಯುತ್ತಮ ನಾಟಕೀಯ ಕ್ರಿಯೆಯ ಕೆಲವು ಕ್ಷಣಗಳನ್ನು ಮಾತ್ರ ಅನುಭವಿಸುತ್ತಾನೆ.

### ೪.೪. ಲಾವಣಿ ಪ್ರಕಾರ

ಲಾವಣಿಯ ವಿಷಯ ಹಾಗೂ ಸ್ವಭಾವಕ್ಕನುಗುಣವಾಗಿ ಅವುಗಳನ್ನು ನಾಲ್ಕು ವಿಧದಲ್ಲಿ ವಿಂಗಡಿಸಿ ಅಧ್ಯಯನಕ್ಕೊಳಪಡಿಸಬಹುದು. ೧. ಕಥಾಸಾರ ಲಾವಣಿಗಳು, ೨. ನೀತಿಸಾರ ಲಾವಣಿಗಳು, ೩. ತತ್ವಸಾರ ಲಾವಣಿಗಳು, ೪. ಹರದೇಶಿ ನಾಗೇಶಿ ಲಾವಣಿಗಳು.

### ೧. ಕಥಾಸಾರ ಲಾವಣಿಗಳು

ಶಿವ-ಪಾರ್ವತಿ ಇಲ್ಲವೆ ದೇವಾನುದೇವತೆಗಳ ಬದುಕಿನ ಕಥೆಗಳನ್ನಾಧರಿಸಿಯೋ ಅಥವಾ ಚಾರಿತ್ರಿಕ ಹಾಗೂ ಸಾಮಾಜಿಕ ವ್ಯಕ್ತಿ-ಘಟನೆಗಳನ್ನಾಧರಿಸಿಯೋ ಹುಟ್ಟಿಕೊಂಡ ಲಾವಣಿಗಳನ್ನು ಕಥಾಸಾರ ಲಾವಣಿಗಳೆಂದು ಹೇಳಲಾಗಿದೆ. ಕಥೆಗಾರಿಕೆ, ಕವನಗಾರಿಕೆ, ಹಾಗೂ ಹಾಡುಗಾರಿಕೆ-ಕಲೆಗಳ ತ್ರಿವೇಣಿ ಸಂಗಮವಾಗಿರಬಹುದು. ಕಥಾಸಾರ ಲಾವಣಿಗಳಲ್ಲಿ ಕಂಡು ಬರುತ್ತದೆ.ಇಂಥ ವಿಶಿಷ್ಟ ಗುಣಗಳಿಂದ ಕೂಡಿದ ಲಾವಣಿಗಳನ್ನು ರಚಿಸುವುದಕ್ಕೆ ಮುರಗೋಡ ಕುಬ್ಬಣ್ಣ ಹಾಗೂ ಸಿದ್ದು-ಶಿವಲಿಂಗರಿಗೆ ಅಗ್ರಸ್ಥಾನ ಸಲ್ಲುತ್ತದೆ. ವಿಸ್ತರಿಸಬೇಕಾದಲ್ಲಿ ವಿಸ್ತರಿಸಿ, ಸಂಕ್ಷೇಪಿಸಬೇಕಾದಲ್ಲಿ ಸಂಕ್ಷೇಪಿಸಿ ಮುಖ್ಯ ರಸಕ್ಕೆ ಭಂಗಬಾರದಂತೆ ಮಾಡುವುದರ ಜೊತೆಗೆ ವೀರ, ಭಾವಗಂಗೆಯ ಗಂಭೀರತೆಯು ಅವರ ಅವರ ಔಚಿತ್ಯಗುಣದ ನಿದರ್ಶನವಾಗಿದೆ. ಉದಾಹರಣೆಗೆ ಜಾಣು-ಕುಬಣ್ಣ ಅವರ 'ವತ್ಸಲಾ ಹರಣ'ದಲ್ಲಿ ವೀರರಸ ದುಮ್ಮಿಕ್ಕಿ ಬೋರ್ಗರೆದರೆ, ಸಿದ್ದು-ಶಿವಲಿಂಗರ 'ಭೀಷ್ಮಪರ್ವ'ದಲ್ಲಿ ಗೋಚರಿಸುವ ನಿತಾಂಥ ರಮ್ಯವಾದ ಭಾವಗಂಗೆಯ ಗಂಭೀರತೆಯು ಗಮನಾರ್ಹ, ಪೌರಾಣಿಕ ಕಥಾನಕಗಳನ್ನಾಧರಿಸಿ ಹುಟ್ಟಿಕೊಂಡ ಲಾವಣಿಗಳಲ್ಲಿಯಂತೆ ಚಾರಿತ್ರಿಕ

ಘಟನೆಗಳನ್ನಾಧರಿಸಿ ಹುಟ್ಟಿಕೊಂಡ ಲಾವಣಿಗಳಲ್ಲಿಯೂ ವೀರರಸ ಪುಟಿದಿರುವುದನ್ನು 'ಕಿತ್ತೂರ ಚೆನ್ನಮ್ಮ', 'ಸಂಗೊಳ್ಳಿ ರಾಯಣ್ಣ', 'ನರಗುಂದ ಬಾಬಾಸಾಹೇಬ', 'ಮುಂಡರಗಿ ಭೀಮರಾಯ', 'ಹಲಗಲಿಬೇಡರು' ಮುಂತಾದ ಲಾವಣಿಗಳಲ್ಲಿ ಕಾಣಬಹುದು ಕಥಾಸಾರ ಲಾವಣಿಗಳಲ್ಲಿ ವೀರ ರಸದಂತೆ ಕರುಣರಸ ಹರಿದಿರುವುದನ್ನು 'ಸಂಗ್ಯಾನ ಅಪರಾಧ ಮತ್ತು ಸಾವು', 'ಕಿತ್ತೂರ ಚನ್ನವ್ವನ ಸೊಸೆ' ತರಹದ ಲಾವಣಿಗಳಲ್ಲಿಯೂ, ಹಾಸ್ಯದ ಹೊನಲು ಹರಿದಿರುವುದನ್ನು 'ಬಸರಿದ್ದೀನಿ ಹೆಸರಿನ್ನೇನಿಡೋಣ' ತರಹದ ಲಾವಣಿಯಲ್ಲಿಯೂ ಹಾಗೂ ಭಕ್ತಿರಸ ಹರಿದಿರುವುದನ್ನು 'ಭಕ್ತಿ ಭಂಡಾರಿ ಬಸವಣ್ಣನವರ ಕುರಿತ ಲಾವಣಿಗಳಲ್ಲಿಯೂ ನೋಡಬಹುದು.

ಒಟ್ಟಿನಲ್ಲಿ ಕಥಾಸಾರ ಲಾವಣಿಗಳಲ್ಲಿ ವೀರ-ಹೋರಾಟದ ಸಂದರ್ಭಗಳು ಚಿತ್ರಿತವಾದಂತೆ ಕರುಣಾ, ಹಾಸ್ಯ, ಭಕ್ತಿ ಪ್ರಸಂಗಗಳು ವರ್ಣಿತವಾಗಿ ಶ್ರೋತೃಗಳನ್ನು ಆಕರ್ಷಿಸಿ ಅವರ ಮನಃ ಪಟಲದ ಮೇಲೆ ಅಚ್ಚೊತ್ತಿಬಿಡುತ್ತವೆ.

### ೨. ನೀತಿಸಾರ ಲಾವಣಿಗಳು

ಕಥಾಸಾರ ಲಾವಣಿಯಲ್ಲಿ ಕಥೆ ಮುಖ್ಯವಾದರೆ, ನೀತಿಸಾರ ಲಾವಣಿಯಲ್ಲಿ ಕಥೆ ಅಮುಖ್ಯವಾಗಿ ನೀತಿ ಮುಖ್ಯವಾಗುತ್ತದೆ. ಪೌರಾಣಿಕ, ಚಾರಿತ್ರಿಕ, ಸಾಮಾಜಿ, ಘಟನೆಗಳನ್ನು ದೃಷ್ಟಂತವಾಗಿಟ್ಟುಕೊಂಡು ನೀತಿ ಶೃತಪಡಿಸುವುದೇ ಲಾವಣಿಕಾರನ ಮುಖ್ಯ ಉದ್ದೇಶವಾಗಿರುತ್ತದೆ. ಉದಾಹರಣೆಗೆ, 'ಅನಸೂಯ್ಯ ಪತಿವೃತಾ ಮಹಿಮೆ, 'ಶಟವಿ' ಮುಂತಾದ ಪೌರಾಣಿಕ ಲಾವಣಿಗಳು, ಕ್ರಮವಾಗಿ ಪತಿವೃತಾ ಧರ್ಮ, ಪ್ರಾರಬ್ಧ ಕರ್ಮದ ನೀತಿ ಬೋಧಿಸಿದರೆ, 'ಸಂಗೊಳ್ಳಿ ರಾಯಣ್ಣ' 'ಭಕ್ತಿ ಭಂಡಾರಿ ಬಸವಣ್ಣ'ನವರ ಕುರಿತ ಚಾರಿತ್ರಿಕ ಲಾವಣಿಗಳು ಕ್ರಮವಾಗಿ ಸ್ವಾಮಿಭಕ್ತಿ, ದೈವಭಕ್ತಿಯ ನೀತಿ ನಿರೂಪಿಸುತ್ತವೆ. 'ಹೊಸ ಫ್ಯಾಶನ ಪದ್ಧತಿ', 'ಹೊಟೆಲ್ ಚಹ ದೋಸೆ', 'ಜೈನಿಬಾಜಿ', 'ಮದ್ಯಪಾನ ನಿರ್ಮೂಲನೆ', 'ಪ್ರೌಢ ಶಿಕ್ಷಣ-ಸಹಕಾರ', 'ಕಾಯಕ', ಮುಂತಾದ ಸಾಮಾಜಿಕ ಲಾವಣಿಗಳು ಶೀರ್ಷಿಕೆಗಳು ಸೂಚಿಸುವ ನೀತಿ ಪ್ರತಿಪಾದಿಸುತ್ತವೆ.

ನೀತಿಸಾರ ಲಾವಣಿಗಳ ವಸ್ತುವಿಷಯಕ್ಕನುಗುಣವಾಗಿ ಅವುಗಳನ್ನು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಎಂದು ಮೂರು ವಿಧವಾಗಿ ವರ್ಗೀಕರಿಸಬಹುದು. 'ಮದ್ಯಪಾನ ನಿರ್ಮೂಲನೆ', 'ಪ್ರೌಢ ಶಿಕ್ಷಣ-ಸಹಕಾರ', 'ಅಸ್ಪೃಶ್ಯತಾ ನಿವಾರಣೇ' ಮುಂತಾದವುಗಳು ಸಾಮಾಜಿಕ ನೀತಿಬೋಧಿಸುವ 'ಕಾಯಕ', 'ಪವಿತ್ರ ಖಾದಿ' ಮುಂತಾದವುಗಳು ಆರ್ಥಿಕ ನೀತಿ ಬೋಧಿಸುವ, ಬ್ರಿಟೀಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಅಮರರಾದ 'ಗಾಂಧೀಜಿ' ಸುಭಾಷ್ ಚಂದ್ರಬೋಸ್, ಮೈಲಾರ ಮಹದೇವಪ್ಪ ಹಾಗೂ ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ 'ಚಲೇಜಾವ ಚಳವಳಿ' ಮುಂತಾದವುಗಳು ಸ್ವರಾಜ್ಯ ನೀತಿ ಪ್ರತಿಪಾದಿಸುವ ಲಾವಣಿಗಳೆಂದು ವರ್ಣಿಸಬಹುದು. ಅದಾಗ್ಯೂ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನೀತಿ ಬೋಧಿಸುವ ಲಾವಣಿಗಳು ಪರಸ್ಪರ ಪೂರಕವಾಗಿರುವುದೊಂದು ವಿಶೇಷ.

## ೩. ತತ್ವಸಾರ ಲಾವಣಿಗಳು

'ತತ್ವ' ಎಂದರೆ ಪರಮಾತ್ಮ, ಪರಮಾತ್ಮನೊಬ್ಬನೇ ಸತ್ಯ. ಜಗತ್ತು ಮಿಥ್ಯೆವೆಂದು ವೇದಾಂತ ಹೇಳುತ್ತದೆ. ಸಂಸ್ಕೃತದಲ್ಲಿ ಉಪನಿಷತ್ತುಗಳು, ಕನ್ನಡದಲ್ಲಿ 'ಕೈವಲ್ಯ ಕಲ್ಪವಲ್ಲರಿ', 'ಜ್ಞಾನಸಿಂಧು' ಮೊದಲಾದ ಆಧ್ಯಾತ್ಮಿಕ ಉದ್ಗ್ರಂಗಳು ಪರಮಾತ್ಮ ಸಾಕ್ಷಾತ್ಕಾರದ ಬಗೆ ವಿವರಿಸುತ್ತವೆ. ಪರಮಾತ್ಮ ಸಾಕ್ಷಾತ್ಕಾರ ಪರಿ ವಿವರಿಸುವ ವಿಚಾರಗಳಾದರೋ ಉಕ್ಕಿನ ಕಡಲೆಗಳಾಗಿರುವುದರಿಂದ ಜನಸಾಮಾನ್ಯರು ಅವುಗಳನ್ನು ತಿಳಿದುಕೊಳ್ಳಲು ಅಸಮರ್ಥರಾಗಿದ್ದಾರೆ, ವೇದಾಂತದ ಕಠಿಣ ವಿಚಾರಗಳನ್ನು ಸರಳ ಹಾಗೂ ಸುಲಭದಲ್ಲಿ ಜನಸಾಮಾನ್ಯರು ತಿಳಿದುಕೊಳ್ಳಲೆಂಬ ಸದುದ್ದೇಶದಿಂದ ವೇದಾಂತ ವಿಚಾರ ಒಳಗೊಂಡ ಲಾವಣಿಗಳು ಹುಟ್ಟಿಕೊಂಡವು, ಪ್ರಾಮಾಣಿಕ ಸುಖ ಕ್ಷಣಿಕವೆಂದು ಪರಮಾತ್ಮನಲ್ಲಿ ಒಂದಾಗುವ ಮೂಲಕ ನಿತ್ಯಸುಖ ಹೊಂದಬಹುದೆಂದು ಪ್ರತಿಪಾದಿಸುವ ಲಾವಣಿಗಳನ್ನು ತತ್ವಸಾರ ಲಾವಣಿಗಳೆಂದು ಹೆಸರಿಸಲಾಗುತ್ತದೆ. ಇಂಥ ಲಾವಣಿರಚನೆಯಲ್ಲಿ 'ಕರ್ನಾಟಕ ಕಬೀರ' ಖ್ಯಾತಿಯ ಶಿಶುನಾಳ ಶರೀಫ ಸಾಹೇಬರು ಅಗ್ರಗಣ್ಯರು ಸೃಷ್ಟಿಯ ಉಗಮ, ಜೀವಿಯ ಜನನ, ಪ್ರಪಂಚದ ಮಾಯೆಯಿಂದ ಆವೃತವಾದ ಜೀವಿ ನಿತ್ಯಸುಖಕ್ಕೆ ಕರಣಕರ್ತನೂ ಹಾಗೂ ಸೃಷ್ಟಿಕರ್ತನೂ ಆದರೆ ಪರಮಾತ್ಮನನ್ನು ಮರೆಯದಿರುವಂತೆ ಎಚ್ಚರಿಸಿದುದ್ದನ್ನು 'ಚಂದದಿ ಕೇಳಿದರೆ ವಿಸ್ತಾರ, ವೇದಾಂತದ ಸಾರ, ಶರೀಫ ಸಾಹೇಬರ ಲಾವಣಿಯಿಂದ ಮನಗಾಣಬಹುದು.

ಶಿಶುನಾಳ ಶರೀಫ ಸಾಹೇಬರಂತೆ, ಗದಗ ಸಮೀಪದ ಮಾರನ ಬಸರಿ ಮೋದಿನಸಾಬನು ವೇದದೊಳಗಿನ ಮಾತು ಹೇಳತೇನಿ ಕೇಳರಿ ಇಟ್ಟು ವಿಶ್ವಾಸ, ಪೃಥ್ವಿಯಲ್ಲಿ ಜನಿಸಿದ ಮೇಲೆ ತಿಳಿಯಬೇಕು. ಅನುಭಾವವನ್ನು 'ಸರ್ವಬಯಲು ನಿರ್ಬಯಲು ಕಾಣದು ಪ್ರಪಂಚ ಮುಂತಾದ ತತ್ವಸಾರ ಲಾವಣಿ ರಚಸಿದ್ದಾನೆ.

ತತ್ವಸಾರ ಲಾವಣಿ ರಚಯತರು ಇಸ್ಲಾಂ ಮತಕ್ಕೆ ಸೇರಿದವರಾದರೂ ಹಿಂದುಧರ್ಮ ಆಳವಾಗಿ ಅಧ್ಯಯನ್ ಮಾಡಿ ಅನುಭಾವಿಯಾಗಿ ಹೊರಹೊಮ್ಮುವುದಲ್ಲದೆ ತಾವು ಕಂಡುಂಡ ಸತ್ಯವನ್ನು ಪಾಮರರು ಅರಿತು ಸದ್ಗತಿ ಹೊಂದಲೆಂಬ ಸದುದ್ದೇಶದಿಂದ ತತ್ವಸಾರ ಲಾವಣಿ ರಚಿಸಿರುವುದು ಪರಧರ್ಮ ಸಹಿಷ್ಣುತೆ ಹಾಗೂ ಧಾರ್ಮಿಕವಿಶಾಲ ಮನೋಭಾವದ ಹೆಗ್ಗುರುತಾಗಿದೆ.

## ೪. ಹರದೇಶಿ-ನಾಗೇಶಿ ಲಾವಣಿಗಳು

ಗಂಡು ಹೆಚ್ಚು ಎಂದು ಹೇಳುವ ಹರದಾಸ, ಹೆಣ್ಣು ಹೆಚ್ಚು ಎಂದು ಹೇಳುವ ನಾಗನಾಥರಿಂದ ರಚಿತವಾದ ಹಾಡುಗಳೇ ಹರದೇಶಿ-ನಾಗೇಶಿ ಲಾವಣಿಗಳು ಮೂಲಕ್ಕೆ ಕಾರಣವಾಯಿತು. ಹರದೇಶಿ-ನಾಗೇಶಿ ಲಾವಣಿಗಳನ್ನು ಕ್ರಮವಾಗಿ ತುರಾಯಿ-ಕಲಗಿ(ತುರಾ-ಕಲ್ಗಿ) ಲಾವಣಿಗಳೆಂದೂ ಕರೆಯಲಾಗುತ್ತದೆ. ತುರಾಯಿ ಗಂಡಿನ ಶಿರೋಭೂಷಣ, ಹಿಂದಿ ಭಾಷೆಯ 'ಕಲಗಿ' ಹೆಂಗಸಿನ ತಲೆಯ ತೊಡಿಗೆ ಹಿಂದಕ್ಕೆ ಈ ಎರಡೂ ಪಂಗಡದವರು ತಮ್ಮ ತಮ್ಮ ಶಿರೋಭೂಷಣ

ಧರಿಸಿಕೊಂಡು ರಂಗಕ್ಕೆ ಇಳಿಯುತ್ತದ್ದಾರಲ್ಲದೆ ಸೋತವರು ತಮ್ಮ ತುರಾಯಿ ಇಲ್ಲವೆ ಕಲಗಿಯನ್ನು ಕೆಳಗಿಡುವ ಮೂಲಕ ಸೋಲೊಪ್ಪಿಕೊಳ್ಳುತ್ತಿದ್ದರು.

ನಾಗೇಶಿ ಪಂಗಡದವರು ಹೆಣ್ಣಿನ ಹಿರಿಮೆಯನ್ನು ಹೇಳುವದಕ್ಕಾಗಿ ಹೆಣ್ಣು ಭೂಮಿಯೆಂದು ಹಾಗೂ ಅದು ಬೆಳೆಗೆ ಅಗತ್ಯವೆಂದು ಹೇಳಿದರೆ, ಶಿವ ಮಳೆಯೆಂದು ಹಾಗೂ ಮಳೆ ಇಲ್ಲದಿದ್ದರೆ ಬೆಳೆ ತೆಗೆಯುವದ್ಹ್ಯಾಂಗ ಎಂದು ಹರದೇಶಿ ಪಂಗಡದವರ ಪ್ರತಿವಾದ.

ಶಕ್ತಿದೇವತೆ ತ್ರಿಮೂರ್ತಿಗಳ ಜನನಕ್ಕೆ ಕಾರಣವೆಂದು ನಾಗೇಶಿಯವರು ವಾದಮಂಡಿಸಿದಾಗ, ತ್ರಿಮೂರ್ತಿಗಳನ್ನು ಹಡೆಯಲು ಆಕೆಗೆ ಯಾರು ಗರ್ಭಧಾರಣ ಮಾಡಿದರೆಂದು ಹರದೇಶಿಯವರ ವರ್ಣಭೇದಕ್ಕೆ ಮರುಸವಾಲು ಹೀಗೆ ವಾದ ಪ್ರತಿವಾದಕ್ಕೆಡೆ ಮಾಡುವ ಹಾಡುಗಳನ್ನು 'ಸವಾಲ್–ಜವಾಬ್' ಹಾಡುಗಳೆಂತಲೂ ಹೇಳಲಾಗಿದೆ.

ವಾದ–ಪ್ರತಿವಾದ ಮಂಡನೆಯಲ್ಲಿ ಎರಡೂ ಪಂಗಡಗಳು ಶಾಸ್ತ್ರ–ಪುರಾಣಗಳನ್ನೋ, ಇಲ್ಲವೆ ಪ್ರಚಲಿತವಿರುವ ಜಾನಪದ ಕಥೆಗಳನ್ನೋ ಆಧಾರವಾಗಿ ಬಳಸಿಕೊಳ್ಳುವುದು ಕಂಡುಬರುತ್ತದೆ. ಕೆಲವು ಸಂದರ್ಭಗಳಲ್ಲಿ ಸವಾಲಿನ ರೂಪದಲ್ಲಿ ಒಗಟು ಹೇಳಿ ಅದನ್ನು ಬಿಡಿಸಲು ಪ್ರತಿ ಪಂಗಡದವರಿಗೆ ಹೇಳಲಾಗುತ್ತದೆ. ಪ್ರಾರಂಭದಲ್ಲಿ ಹಾಡುಗಳು ಗಂಭೀರವಾಗಿ ತಾತ್ವಿಕತೆಯಿಂದ ಕೂಡಿದರೆ. ಕ್ರಮೇಣ ಹಾಡುಗಳಲ್ಲಿ ಅಶ್ಲೀಲತೆ ಇಣುಕಿ ಅನಂತರ ಅಶ್ಲೀಲತೆಯೇ ವಿಜೃಂಭಿಸುವುದರಿಂದ ಲಾವಣಿ ಕೇಳಲು ಬಂದ ಹೆಣ್ಣುಮಕ್ಕಳು ನಾಚಿಕೊಂಡು ಜಾಗ ಖಾಲಿಮಾಡುವದು ಕಂಡುಬರುತ್ತದೆ. ಹಿಂದಕ್ಕೆ ಹರದೇಶ–ನಾಗೇಶಿ, ಪಂಗಡಗಳೆರಡೂ ಗಂಡಸರಿಂದಲೇ ಕೂಡಿರುತ್ತಿದ್ದವು. ಈಚೆಗೆ ಹರದೇಶಿ–ನಾಗೇಶಿ ಹಾಡುಗಳು ಶ್ರೋತೃಗಳನ್ನು ಮತ್ತಷ್ಟು ಆಕರ್ಷಿಸಿವೆ. ಇಂತಹ ಹಾಡುಗಾರ್ತಿಯರು ಸಾಮಾನ್ಯವಾಗಿ ಪರಿಶಿಷ್ಟ ಜಾತಿಗೆ ಸೇರಿದವರಾಗಿರುತ್ತಾರೆ. ಆದಾಗ್ಯೂ ನಾಗೇಶಿ ಪಂಗಡದ ಹಾಡುಗಳನ್ನು ಪುರುಷರು ರಚಿಸಿರುವದೊಂದು ವಿಶೇಷ, ಮಹಲಿಂಗಪುರ(ವಿಜಾಪೂರ ಜಿಲ್ಲೆ)ದ ಕುಬಣ್ಣ, ಹಲಸಂಗಿ(ವಿಜಾಪುರ ಜಿಲ್ಲೆ)ಯ ಸಿದ್ದು ಶಿವಲಿಂಗ, ಬೀಬೀ ಇಂಗಳಗೀ(ವಿಜಾಪುರ ಜಿಲ್ಲೆಯ)ಯ ಹಸನಸಾಬ, ಕೋರಳ್ಳಿ ಮೌಲಾಲಿ, ಗೋಕಾಕ(ಬೆಳಗಾಂವಿ ಜಿಲ್ಲೆ)ದ ಮಲ್ಲೇಶಪ್ಪ ಲಕ್ಷ್ಮಣ, ಯಾದವಾಡ(ಬೆಳಗಾಂವಿ ಜಿಲ್ಲೆ)ದ ಹುಸೇನಿ, ಬಾಳ್ಗೇರಿ(ಬೆಳೆಗಾಂವಿ ಜಿಲ್ಲೆ) ಅಪ್ಪಣ್ಣ ಮುಂತಾವರು ನಾಗೇಶಿ ಪಂಗಡ ಹೆಚ್ಚಳ ಕುರಿತು ಲಾವಣಿ ರಚಿಸಿದರೆ, ಬೆಲ್ಲದಬಾಗೇವಾಡಿ(ಬೆಳಗಾಂವಿ ಜಿಲ್ಲೆ)ಯ ಬಾಳಗೊಂಪಾಳ, ಗೋಕಾಕ(ಬೆಳಗಾಂವಿ ಜಿಲ್ಲೆ)ದ ಕ್ಯಾಮರ್ಣಣ, ಎಳಮೇಲಿ(ವಿಜಾಪೂರ ಜಿಲ್ಲೆ)ಯ ಬಸಯ್ಯ ಮಠಪತಿ, ಮುಳಸಾವಳಗಿ(ವಿಜಾಪೂರ ಜಿಲ್ಲೆ)ಯ ಖಾಜಾಬಾಯಿ, ಆಲಮೇಲ(ವಿಜಾಪೂರ ಜಿಲ್ಲೆ)ದ ರಾಮಸಿಂಗ, ಕಡಣಿ(ವಿಜಾಪೂರ ಜಿಲ್ಲೆ)ಯ ಕಲ್ಲಪ್ಪ ಮುಂತಾದವರು ಹರದೇಶಿಪಂಥ ಹೆಚ್ಚಳ ಕುರಿತು ಲಾವಣಿ ರಚಿಸಿದ್ದಾರೆ.

**೫. ಗೀತಗೋಷ್ಠಿ**

ಲಾವಣಿಗಳು ಜನಮನ ಆಕರ್ಷಿಸಿರುವದಕ್ಕೆ ಅವುಗಳ ಹಾಡುಗಾರಿಕೆಯೇ ಕಾರಣವಾಗಿದೆ. ಸಾಮಾನ್ಯವಾಗಿ ವೈವಿಧ್ಯಮಯ ಲಾವಣಿಗಳನ್ನು ಎರಡು ವಿಧವಾಗಿ ಹಾಡಲಾಗುತ್ತದೆ. (೧) ಬಯಲು ಇಲ್ಲವೆ ಚಿಟಕಿ ಲಾವಣಿ ಹಾಗೂ (೨) ಮೇಳ ಲಾವಣಿ.

### ೧. ಬಯಲು ಇಲ್ಲವೆ ಚಿಟಕ ಲಾವಣಿ

ಒಬ್ಬನೇ, ಹಾಡುವ ಲಾವಣಿಗೆ ಬಯಲು ಲಾವಣಿಯೆಂದು ಕರೆಯಲಾಗಿದೆ. ದಿನನಿತ್ಯ ಉಡುಪಿನಲ್ಲಿರುವ ಗಾಯಕ ಶ್ರೋತೃಗಳ ಅಪೇಕ್ಷೆಯ ಮೇರೆಗೆ ಏಕಾಏಕಿ ಎದ್ದು ನಿಂತು ಸೊಂಟಕ್ಕೆ ಶಲ್ಯ ಬಿಗಿದುಕೊಂಡು ಬಲಗೈ ಬೆರಳುಗಳಿಂದ ಚಿಟಕಿ ಹೊಡೆಯುತ್ತ ಏರುಸ್ವರದಲ್ಲಿ ಲಾವಣಿ ಹಾಡಲು ಪ್ರಾರಂಭಿಸುತ್ತಾನೆ. ಹಾಡಿನ ಸ್ವರಲಯಕ್ಕನುಗಣವಾಗಿ ಗಾಯಕ ಚಿಟಕಿ ಹೊಡೆಯುತ್ತ ಹಾಡುವದರಿಂದ ಇವುಗಳಿಗೆ 'ಚಿಟಕಿ ಲಾವಣಿ'ಗಳೆಂದು ಕರೆಯಲಾಗಿದೆ.

ಚಿಟಕಿ ಲಾವಣಿಯಲ್ಲಿ ಕೆಲವೆಡೆ ಹಾಡುವವನು ಕಾಲಲ್ಲಿ ಗೆಜ್ಜೆಯನ್ನು ಹಾಗೂ ಎಡಗೈಯಲ್ಲಿದಪ್ಪು (ಚರ್ಮವಾದ್ಯ) ಹಿಡಿದು ಸ್ವರಕ್ಕೆ ತಕ್ಕಂತೆ ಬಲಗೈಯಿಂದ ದಪ್ಪು ಬಿಡಿಯುತ್ತ ಕುಣಿಯುತ್ತ ಹಾಡುವದರಿಂದ ಹಾಡು ಕೇಳಲು ಮತ್ತಷ್ಟು ಆಕರ್ಷಕವಾಗಿರುತ್ತದೆ. ಚಿಟಕಿ ಲಾವಣಿಯಲ್ಲಿ ಏರುಪೇರು, ಇಲ್ಲ, ಬದಲಾಗಿ, ಮೊದಲಿನಿಂದ ಕೊನೆಯವರೆಗೆ ಏಕತಾನ, ಶೃಂಗಾರದ ಬದಲು ಒಮ್ಮೊಮ್ಮೆ ಶೌರ್ಯ ಸಾಹಸವನ್ನೋ ಭಕ್ತಿ ಭಾವವನ್ನೋ, ಸಾಮಾಜಿಕ ಸಮಸ್ಯೆಗಳನ್ನೋ ಅದು ಭಿತ್ತರಿಸಬಹುದು ಹಾಡಿನಲ್ಲಿ ತ್ವರಿಗತಿಯಿರುವದರಿಂದ ಚಿಟರೆ ಲಾವಣಿ ಪರಿಣಾಮಕಾರಿಯಾಗಿ ಜನಮನವನ್ನು ಆಕರ್ಷಿಸುತ್ತದೆ.

ಚಿಟಕಿ ಲಾವಣಿಕಾರ ಕಲ್ಗಿ–ತುರಾ ಹೊರತುಪಡಿಸಿ ಮಿಕ್ಕ ಪ್ರಕಾರದ ಲಾವಣಿಗಳನ್ನು ತನ್ನ ಕರ್ಣ ಮಧುರ ಕಂಠದಿಂದ ಹಾಡುತ್ತಾನೆ. ಪುರಾಣ ಪುಣ್ಯಪುರುಷರ, ಸಾಧುಸಂತ ಶಿವಶರಣರ, ವೀರಧೀರರ, ಪತಿವೃತೆಯರ ಹಾಗೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣಾರ್ಪಣೆ ಮಾಡಿ ಹುತಾತ್ಮರಾದವರ ಚರಿತ್ರೆ ಆತನ ಹಾಡಿಗೆ ವಸ್ತುವಾಗಬಲ್ಲದು, ಹಿಂದೆ ನಡೆ ಹಾಗೂ ಚಾಲ್ತಿಯಲ್ಲಿ ಕಂಡ ಘಟನೆಗಳನ್ನೋ ಕಟ್ಟು ಕಥೆಗಳನ್ನೋ ಹಾಡುಕಟ್ಟಿ ಹೃದ್ಯವಾಗಿ ಹಾಡಿ ತನ್ಮೂಲಕ ನೀತಿ ಬೋಧಿಸುವುದೇ ಆತನ ಗುರಿ, ಈ ಬಗೆಯ ಹಾಡುಗಾರಿಕೆಗೆ ರಾಣಿಬೆನ್ನೂರಿನ ದಿವಂಗತ ಸಮ್ಮದಸಾಬ ಹೆಚ್ಚು ಪ್ರಸಿದ್ಧಿ ಪಡೆದಿದ್ದು.



### ೨. ಮೇಳ ಲಾವಣಿ

ಲೋಕೋಭಿನ್ನ ರುಚಿಯೆಂಬಂತೆ ಕಾಲಾನುಕ್ರಮದಲ್ಲಿ ಚಿಟಕಿಯೊಂದೇ ಲಾವಣಿಗೆ ಸಾಕಾಗದೆನಿಸಿತು. ಚಿಟಕಿಯ ಬದಲು ಹಲವು ವಾದ್ಯಗಳನ್ನು ನುಡಿಸಬೇಕಾಯಿತು. ಲಾವಣಿ ಸಾಹಿತ್ಯದಲ್ಲಿ ಕಾಣಿಸಿಕೊಂಡ ಈ ಬದಲಾವಣೆ ಜನಮನವನ್ನು ಮತ್ತಷ್ಟು ಆಕರ್ಷಿಸಿತು. ಏಕವ್ಯಕ್ತಿಗೆ ಬದಲಾಗಿ ಹಲವು ವ್ಯಕ್ತಿಗಳು ವಿಶಿಷ್ಟ ವಾದ್ಯಗಳನ್ನು ನುಡಿಸುತ್ತ ಹಾಡುವ ಸಂಪ್ರದಾಯ 'ಮೇಳಲಾವಣಿ' ಹುಟ್ಟಿಗೆ ಕಾರಣವಾಯಿತು. ಮೇಳಲಾವಣಿಯಲ್ಲಿ ಕನಿಷ್ಟ ಮೂವರಿದ್ದು ಅವರೆಲ್ಲರು ದಿನನಿತ್ಯದ ಉಡುಪಿನಲ್ಲಿರುತ್ತಾರೆ. ಮುಮ್ಮೇಳದಲ್ಲಿಯ ಮುಖ್ಯ ಹಾಡುಗಾರ ವಿಶೇಷ ಗತ್ತುಗಾರಿಕೆಯಿಂದ ದಪ್ಪು ಬಡಿಯುವದರಲ್ಲಿ ತನ್ನ ಕೈಚಳಕ ತೋರಿಸಿ ಶ್ರೋತ್ರುಗಳನ್ನು ತನ್ನಡೆಗೆ ಆಕರ್ಷಿಸಿಕೊಳ್ಳುತ್ತಲೇ 'ಹರೆಗೀಯ ಗಾ ಗೀಯ ಗಾ... ಎಂದು ಸೊಲ್ಲು ಹೊರಡಿಸುವದರೊಂದಿಗೆ

ಹಾಡಿಗೆ ಹೊಳಹು ಹಾಕುತ್ತಾನೆ. ತುಂತುಣಿ ಹಾಗೂ ತಾಳ ಬಾರಿಸುವ ಹಿಮ್ಮೇಳದವರು ಮುಖ್ಯ ಹಾಡುಗಾರನ ಹಾಡಿಗೆ ದನಿಗೂಡಿಸುತ್ತ ಹಾಡಿನ ಮಧ್ಯ ಆತನಿಗೆ ಮನೋರಂಜಕ ಪ್ರಶ್ನೆ ಕೇಳಿ ಆತನಿಂದ ಹಾಡಿನ ರೂಪದಲ್ಲಿ ಉತ್ತರ ಪಡೆಯುವ ಮೂಲಕ ಹಾಡಿಗೆ ಮೆರಗುಂಟುಮಾಡುವದಲ್ಲದೆ ಹಾಡಿನ ನುಡಿ ಮುಗಿಯುತ್ತಲೇ ಜೀ...ಜೀ ಇಲ್ಲವೆ ಗೀ...ಗೀ ಎನ್ನುವ ಸೊಲ್ಲು ಹೊರಡಿಸುತ್ತಾರೆ. ಹೀಗೆ ಹಾಡಿನ ಆರಂಭ, ಮಧ್ಯ ಮಧ್ಯ ಮತ್ತು ಅಂತಿಮವಾಗಿ ಬರುವ ಗೀಗೀ ಸೊಲ್ಲಿನಿಂದಾಗಿ 'ಮೇಳ ಲಾವಣಿ'ಗಳಿಗೆ 'ಗೀಗೀ ಮೇಳ'ಗಳೆಂದು ಕರೆಯುವ ರೂಢಿ ಆರಂಭಗೊಂಡಿತು. ಕಾನುಕ್ರಮದಲ್ಲಿ 'ಗೀಗೀ ಮೇಳ' ಸ್ಪರ್ಧೆ ಏರ್ಪಡಿಸುವ ಹಾಗೂ ಇಂಥ ಮೇಳಗಳಲ್ಲಿ ಹೆಣ್ಣು ಭಾಗವಹಿಸುವ ಮೂಲಕ ಹರದೇಶಿ–ನಾಗೇಶಿ ಲಾವಣಿಗಳು ಹೆಚ್ಚು ಜನಪ್ರಿಯವಾಗತೊಡಗಿದವು. ಇಂತಹ ಗೀಗೀ ಮೇಳಗಳನ್ನು ಹಬ್ಬ ಹರಿದಿದನಗಳಲ್ಲಿ ಇಲ್ಲವೆ ಜಾತ್ರೆ ಉತ್ಸವಗಳ ಸಂದರ್ಭಗಳಲ್ಲಿ ವಿಶೇಷವಾಗಿ ಆಮಂತ್ರಿಸಿ ಹಾಡು ಕೇಳುವ ಮೂಲಕ ಜನ ಹರ್ಷಪಟ್ಟರು, ಮನರಂಜನೆಯ ಸಾಧನಗಳಾದ ನಾಟಕ, ಸಿನಿಮಾಗಳು ಗ್ರಾಮಾಂತರ ಪ್ರದೇಶಗಳಿಗೆ ಪರಿಚಿತವಿಲ್ಲದಿದ್ದಾಗ ಗೀಗೀ ಮೇಳಗಳೇ ಜನರಿಗೆ ಮನರಂಜನೆ ನೀಡುವ ಪ್ರಮುಖ ಸಾಧನಗಳಾಗಿದದವು. ಈಚೆಗೆ, ನಾಟಕ ಸಿನೇಮಾಗಳು ಗ್ರಾಮಾಂತರ ಪ್ರದೇಶಗಳಿಗೆ ವಿಸ್ತಾರಗೊಂಡರೂ, ಉತ್ತರ ಕರ್ನಾಟಕದ ಬಹುಪಾಲು ಹಳ್ಳಿಗಳಲ್ಲಿ ಹಬ್ಬ–ಹರಿದಿನ ಜಾತ್ರೆ–ರಥೋತ್ಸವ ಸಂದರ್ಭಗಳಂದು ಗೀಗೀ ಮೇಳಗಳನ್ನು ಆ ಮಂತ್ರಿಸಿ ಹಾಡುಕೇಳಿ ಸಂತೋಷಪಡುವ ಪರಂಪರೆ ಈಗಲೂ ಮುಂದುವರಿದುಕೊಂಡೂ ಬಂದಿರುವದೊಂದು ವಿಶೇಷ.

ಹಾಡಿಗೆ ಪ್ರತಿಯಾಗಿ ಆಮಂತ್ರಿತದಿಂದ ನಿರ್ದಿಷ್ಟ ಸಂಭಾವನೆ ಪಡೆಯುವದರಿಂದ ಲಾವಣಿಕಾರರನ್ನು ವೃತ್ತಿಗಾಯಕರ ಮಾಲೆಯಲ್ಲಿ ಸೇರಿಸಿರುವದು ಕಂಡುಬರುತ್ತದೆ. ಆದರೆ ಅದು ಸಮಂಜಸವಲ್ಲ. ಗೊಂದಲಿಗರು ಹಾಗೂ ಇತರೇ ವೃತ್ತಿಗಾಯಕರಂತೆ ಲಾವಣಿಕಾರರು ಹಾಡಿಯೇ ಉಪಜೀವನ ಸಾಗಿಸುವದು ಸಾಧ್ಯವಿಲ್ಲ ಕಾರಣ, ಹಾಡು ಹೇಳಿಸುವರು ವಿಶೇಷ ಸಂದರ್ಭಗಳಲ್ಲಿ ಮಾತ್ರ, ಅಲ್ಲದೆ. ಹಾಡುವವರ ಸಂಖ್ಯೆ ಹೆಚ್ಚಿ ಅವರಲ್ಲಿ ಸ್ಪರ್ಧಾಮನೋಭಾವ ಪ್ರಕಟಗೊಳ್ಳುವುದು ಸ್ವಾಭಾವಿಕ, ಹಾಡು ಕೇಳುವವರಾದರೋ ಒಳ್ಳೆ ಹಾಡುಗಾರರನ್ನು ಇಷ್ಟಪಡುವರು ಹಾಗೂ ಹಾಡು ಕೇಳೀ ಖುಷಿಪಟ್ಟು ಸಂಭಾವನೆ, ಕೊಡುವದು ಸಮಹ, ಸಂಭಾವನೆ ಮೊತ್ತ ಹಾಡುಗಾರಿಕೆಯ ಗುಣಮಟ್ಟದಿಂದಲ್ಲದೆ ಆತನ ಉಪಜೀವನದ ದೃಷ್ಟಿಯಿಂದ ಕೊಡುತ್ತಿಲ್ಲ, ಅಂತೆಯೇ ಲಾವಣಿಕಾರ ಹಾಡುಗಾರಿಕೆಯ ಸಂದರ್ಭಗಳನ್ನು ಹೊರತುಪಡಿಸಿ ಮಿಕ್ಕಂತೆ ತನ್ನ ದೈನಂದಿನ ಕಸಬು(ಕೃಷಿ, ನೇಕಾರಿಕೆ ಇತ್ಯಾದಿ)ಗಳಿಂದಲೇ ಉಪಜೀವನ ಸಾಗಿಸುತ್ತಿದ್ದಾನೆ, ಈಚೆಗೆ ಜನಪದ ಕಲೆಯನ್ನು ಪೋಷಿಸುವ ದೃಷ್ಟಿಯಿಂದ ಕರ್ನಾಟಕ ಸರಕಾರ ಲಾವಣಿಕಾರರು ಸಹಿತ ಜನಪದ ಕಲಾವಿದರಿಗೆ ಮಾಶಾಸನ ನೀಡುವ ಸತ್‌ಸಂಪ್ರದಾಯ ಆರಂಭಿಸುವ ಮೂಲಕ ಕಲಾವಿದರ ಉಪಜೀವನಕ್ಕೆ ನೆರವಾಗಿರುವುದು ಸಮಾಧಾನ ಸಂತೋಷದ ಸಂಗತಿ ಇಲ್ಲಿಯ ವರೆಗಿನ 'ಲಾವಣಿ' ಪದದ ಉತ್ಪತ್ತಿ ಅರ್ಥ ವಿವರಣೆ, ಇತಿಹಾಸ, ಲಕ್ಷಣ, ಪ್ರಕಾರ,

ಗೀತಗೋಷ್ಠಿಯಲ್ಲಿ ಪಾಲ್ಗೊಳ್ಳುವ ಕಲಾವಿಧರ ವೃತ್ತಿ-ಪ್ರವೃತ್ತಿಯ ಒಟ್ಟು ಅಧ್ಯಯನದಿಂದ ಕಂಡು ಬರುವ ಪ್ರಮುಖ ಸಂಗತಿಗಳು ಎರಡು ೧. ಕನ್ನಡ ಲಾವಣಿ ರಚನೆಗೆ ಮರಾಠಿಯ ಪೋವಾಡ ಲಾವಣಿಗಳು ಪ್ರೇರಣೆ ನೀಡಿದರೂ ಅವೆರಡರಲ್ಲಿಯ ಪ್ರಬೇಧಗಳು ಗಮನಾರ್ಹ, ೨. ಕನ್ನಡ ಲಾವಣಿಗಳು ಮೂಲದಲ್ಲಿ ಹೆಣ್ಣಿನ ಲಾವಣ್ಯ ವರ್ಣಿಸುವ ಸಾಧನಗಳಾಗಿದ್ದರೂ ಕಾಲಾಂತರ ಗಂಡಿನ ಶೌರ್ಯ ಸಾಹಸಗಳು ಅದಕ್ಕೆ ವಸ್ತುವಾಗಬಲ್ಲವೆಂಬುದಕ್ಕೆ ಬ್ರಿಟಿಷರ ಸಾಮ್ರಾಜ್ಯಶಾಹಿ ಧೋರಣೆಯನ್ನು ವೀರತನದಿಂದ ಪ್ರತಿಭಟಿಸಿ ಅಮರವಾದ ಕಿತ್ತೂರ ಚನ್ನಮ್ಮ ನರಗುಂದ ಬಾಬಾಸಾಹೇಬ ಮುಂಡರಗಿ ಭೀಮರಾಯ, ಹಲಗಲಿ ಬೇಡರು ಮುಂತಾದವರ ಕುರಿತು ರಚಿತಗೊಂಡ ಲಾವಣಿಗಳು, ಸ್ವಾರಾಜ್ಯ ಬೇಡಿಕೆ ಮಂಡಿಸಿ ಬ್ರಿಟೀಶರ ವಿರುದ್ಧ ಕನ್ನಡಿಗರು ಕೈಕೊಡ ರಾಷ್ಟ್ರೀಯ ಚಳವಳಿ ಮುನ್ನಡೆಸಲು ಸ್ಫೂರ್ತಿ ನೀಡಿದ ಹಾಗೂ ಗ್ರಾಮಾಂತರ ಪ್ರದೇಶದ ಜನತೆಗೆ ರಾಷ್ಟ್ರೀಯ ಚಳವಳಿಯ ಮಾಹಿತಿ ಮಹತ್ವ ವಿವರಿಸಿ ಅವರು ರಾಷ್ಟ್ರೀಯ ಚಳುವಳಿಯಲ್ಲಿ ಪಾಲ್ಗೊಳ್ಳುವಂತೆ ಉತ್ತೇಜಿಸಿದ ರಾಷ್ಟ್ರೀಯ ಲಾವಣಿಗಳು ಲಾವಣಿ ಸಾಹಿತ್ಯಕ್ಕೆ ಹೊಸ ತಿರುವು ನೀಡಲು ಕಾರಣವಾಗಿ ಪ್ರಸ್ತುತ ಅಧ್ಯಯನಕ್ಕೆ ಅಡಿಪಾಯ ಒದಗಿಸುತ್ತವೆ.

**ಕೊನೆ ಟಿಪ್ಪಣಿಗಳು**

೧. ಹಾ.ಮಾ. ನಾಯಕ, **ಜಾನಪದ ಸ್ವರೂಪ,** ಪು. ೨೮.

೨. ಕ್ಯಾತನಹಳ್ಳಿ ರಾಮಣ್ಣ(ಸಂ), **ಪ್ಲೇಟರು ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು,** ಪು. ೩೭, ೯೫.

೩. ಶ್ರೀಕಂಠ ಕೂಡಿಗೆ, **ಕನ್ನಡ ಲಾವಣಿಗಳು,** ಪು. ೭.

೪. ಶ್ರೀಕಂಠ ಕೂಡಿಗೆ, **ಕನ್ನಡ ಲಾವಣಿಗಳು,** ಪು. ೯.

೫. ಶ್ರೀಕಂಠ ಕೂಡಿಗೆ, **ಕನ್ನಡ ಲಾವಣಿಗಳು,** ಪು. ೧೦.



ಅಧ್ಯಾಯ : ಐದು

# ಲಾವಣಿ ಸಾಹಿತ್ಯ : ಪ್ರತಿರೋಧದ ನೆಲೆಗಳು


೫.೧. ಸ್ವಾತಂತ್ರ್ಯದ ನೆಲೆ

೫.೨. ರಾಜಕೀಯ ನೆಲೆ

೫.೨.೧. ನಿಶ್ಯಸ್ತ್ರೀಕರಣ ಕಾಯಿದೆ ಹಾಗೂ ಸ್ಥಳೀಯ ಪ್ರತಿರೋಧಗಳು

೫.೨.೨. ದತ್ತು ಪದ್ಧತಿಯ ನೆಲೆಯ ಪ್ರತಿರೋಧಗಳು

೫.೩.೩. ಸಹಾಯಕ ಸೈನ್ಯ ಪದ್ಧತಿಯ ನೆಲೆಯ ಪ್ರತಿರೋಧಗಳು

೫.೩. ರಾಷ್ಟ್ರೀಯತೆಯ ನೆಲೆ

೫.೩.೧. ರಾಷ್ಟ್ರೀಯತೆಯ ಅರ್ಥ

೫.೩.೨. ರಾಷ್ಟ್ರೀಯತೆಯ ಉಗಮ

೫.೩.೩. ರಾಷ್ಟ್ರೀಯತೆಯ ಪರಿಕಲ್ಪನೆ

೫.೩.೪. ರಾಷ್ಟ್ರೀಯತೆಯ ಸ್ವರೂಪ

೫.೩.೫. ಲಾವಣಿಯಲ್ಲಿ ರಾಷ್ಟ್ರೀಯತೆಯ ನೆಲೆಯ ಪ್ರತಿರೋಧ

೫.೪. ಸಾಮಾಜಿಕ ನೆಲೆ

೫.೪.೧. ದಾರ್ಶನಿಕ ಮತ್ತು ಪರೋಪಕಾರಿ ನೆಲೆಯ ಪ್ರತಿರೋಧಗಳು

೫.೪.೨. ಜಾತಿ ಅಸಮಾನತೆಯ ನೆಲೆಯ ಪ್ರತಿರೋಧಗಳು

೫.೫. ಆರ್ಥಿಕ ನೆಲೆ

೫.೫.೧. ವ್ಯವಹಾರದ ನೆಲೆಯ ಪ್ರತಿರೋಧಗಳು

೫.೫.೨. ಆದಾಯ ತೆರಿಗೆ ನೆಲೆಯ ಪ್ರತಿರೋಧಗಳು

ಅಧ್ಯಾಯ : ಐದು

# ಲಾವಣಿ ಸಾಹಿತ್ಯ : ಪ್ರತಿರೋಧದ ನೆಲೆಗಳು

## ಪ್ರಸ್ತಾವನೆ

'ವಸಾಹತುಕಾಲೀನ' ಎಂಬುದನ್ನು ಸರಳವಾಗಿ ಅರ್ಥೈಸುವುದಾದರೆ ಬ್ರಿಟಿಷರ ಆಳ್ವಿಕೆ ಅಥವಾ ಕಲೆಕ್ಟರ್‌ಗಳ ಆಡಳಿತ ಎಂದರ್ಥ. ಭಾರತಕ್ಕೆ ಯುರೋಪಿಯನ್ನರ ಆಗಮನವು ವ್ಯಾಪಾರಕ್ಕೆ ನಾಂದಿಯಾಗುವುದರ ಮೂಲಕ ಇಲ್ಲಿನ ಸಂಪರ್ಕ ಬೆಳೆಯಲು ಕಾರಣವಾಯಿತು. ಇಂಗ್ಲೀಷರು ಮತ್ತು ಫ್ರೆಂಚರು ಈ ನೆಲದಲ್ಲಿ ಕಾಲಿಟ್ಟಾಗಲೇ ಆಂತರಿಕ ಸಂಘರ್ಷ, ಆಳ್ವಿಕೆ, ಶೋಷಣೆ ಹೀಗೆ ನಾನಾ ಮುಖಗಳು ಸಾರ್ವತ್ರಿಕವಾಗಿ ಅನಾವರಣಗೊಂಡವು. ಅದರಲ್ಲೂ ಬ್ರಿಟೀಷರು ಭಾರತಕ್ಕೆ ವ್ಯಾಪಾರಕ್ಕೆಂದು ಆಗಮಿಸಿ ಭಾರತದ ಎಲ್ಲ ಕ್ಷೇತ್ರಗಳಲ್ಲಿಯೂ ತಮ್ಮ ಕಬಂಧಬಾಹುವನ್ನು ಚಾಚಿಕೊಂಡರು ನಂತರ ಅವರ ಕಬಂಧಬಾಹು ಇಡೀ ಭಾರತದ ಜನತೆಯನ್ನು ಶೋಷಣೆಗೆ ಒಳಪಡಿಸಿತು. ಆವಾಗ ಸ್ಥಳೀಯ ವಿದ್ಯಾವಂತರು ಬ್ರಿಟೀಷರ ಶೋಷಣೆಯಿಂದ ಮುಕ್ತಗೊಳ್ಳಲು ಸಂಘಟಿತರಾದರು. ಬ್ರಿಟೀಷರ ಹಲವಾರು ಆಡಳಿತ ಪದ್ಧತಿಗಳನ್ನು ವಿರೋಧಿಸಿ ಭಾರತದಲ್ಲಿ ಸ್ವಾತಂತ್ರ್ಯ, ರಾಜಕೀಯ, ರಾಷ್ಟ್ರೀಯ, ಸಾಮಾಜಿಕ, ಆರ್ಥಿಕವಾದ ಪ್ರತಿಭಟನೆಗಳನ್ನು ಕೈಗೊಳ್ಳುತ್ತಾರೆ. ಇಂತಹ ಪ್ರತಿಭಟನೆಗಳನ್ನು ಜನಸಾಮಾನ್ಯರ ಮುಖ್ಯ ಅಭಿವ್ಯಕ್ತಿ ಮಾಧ್ಯಮವಾದ ಲಾವಣಿಗಳಲ್ಲಿ ನಾವು ಗುರುತಿಸಬಹುದು.

## ೫.೧. ಸ್ವಾತಂತ್ರ್ಯದ ನೆಲೆ

ಸುಲಭವಾಗಿ ನಮ್ಮ ಕೈಗೆ ದೊರೆತದ್ದಲ್ಲ ರಾಷ್ಟ್ರದ ಸ್ವಾತಂತ್ರ್ಯ. ಗಾಂಧಿ ನೆಹರುಗಳಂಥ ನಾಯಕರಲ್ಲದೆ ಇಂದು ಹೆಸರಿನ ದಾಖಲೆಯೂ ಉಳಿಯದ ಅಸಂಖ್ಯ ಮಂದಿ ಮನೆಮಾರು ಆಸ್ತಿ ಪ್ರಾಣ ಕಳೆದುಕೊಂಡರು ರಾಷ್ಟ್ರಕ್ಕಾಗಿ. ಇತಿಹಾಸದ ಆ ಪರ್ವದ ಸಜೀವ ದಾಖಲೆಗಳೆಂದರೆ ಆಗ ಜನದ ನಾಲಿಗೆಯಲ್ಲಿ ಲಾಸ್ಯ ನಡೆಸಿದ ಹಾಡುಗಬ್ಬಗಳು ಲಾವಣಿಗಳು, ಗೀಗೀ ಪದಗಳು.

ದೈನಂದಿನ ಬದುಕೇ ದಾರುಣವಾದ ಗ್ರಾಮಾಂತರದ ಜನಸಾಮಾನ್ಯರಿಗೆ ದೇಶ, ದೇಶಾಭಿಮಾನ, ಸ್ವಾತಂತ್ರ್ಯಗಳ ಕಲ್ಪನೆಕೊಟ್ಟು, ಆಂಗ್ಲರ ಅತ್ಯಾಚಾರ. ಅದನ್ನು ಎದುರಿಸುವ ನಾಯಕರ ಸಾಹಸ ಸಂಕಷ್ಟಗಳ ಅರಿವು ಮೂಡಿಸುವುದು. ಆ ದಿಸೆಯಲ್ಲಿ ಅವರು

ಕರ್ತವ್ಯನಿಷ್ಠರಾಗುವಂತೆ ಮಾಡುವುದು ಮೊದಲಾದ ಪ್ರಮುಖ ಸಮಸ್ಯೆಗಳ ಪರಿಹಾರಕ್ಕೆ ಲಾವಣಿ ಸಾಹಿತ್ಯ ನೀಡಿದ ನೆರವು ಅಪಾರ. ಸ್ವಾತಂತ್ರ್ಯವನ್ನು ತಂದು ಕೊಡುವಲ್ಲಿ ಜನರಲ್ಲಿ ಭಾವೈಕ್ಯ ಬೆಳೆಸುವ ಮಹತ್ಸಾಧನೆಯಲ್ಲಿ ಲಾವಣಿ ಸಾಹಿತ್ಯ ಪ್ರಮುಖವಾಗಿದೆ.

ನಡುರಾತ್ರಿಯಲ್ಲಿ ಅಡ್ಡಹಾದಿಗುಂಟ ಕಾಲ್ನಡಿಗೆಯಲ್ಲೆ ನಡೆದು, ಹಳ್ಳಿಗಳನ್ನು ಹೊಕ್ಕು ಜನರನ್ನೆಬ್ಬಿಸಿ ಡಪ್ಪು ಬಡಿದು ತಾಳಕುಟ್ಟಿ ಲಾವಣಿ, ಗೀಗೀ ಹಾಡಿದರು ಜನಪದ ಕವಿಗಳು. ಆಂಗ್ಲ ಸರಕಾರದ ಕ್ರೌರ್ಯ ಗಾಂಧಿ, ನೆಹರು ಮೊದಲಾದವರ ನಿಃಸ್ವಾರ್ಥ ರಾಷ್ಟ್ರಪ್ರೇಮ ಸಾಹಸಗಳನ್ನು ಕುರಿತು ಕೇಳುಗರ ಕಣ್ಣು ಕಿವಿಗಳ ಪರೆಹರಿವಂತೆ ಹಾಡಿದರು. ಅವರ ಭಾಷೆಯಲ್ಲೇ ಹಾಡಿದ ಆ ಹಾಡುಗಳನ್ನು ಸ್ಮರಣೆಯಲ್ಲಿಟ್ಟುಕೊಂಡು ಜನವೂ ಹುಚ್ಚೆದ್ದು ಹಾಡಿತು.

ಬಾವಿಯ ಕಪ್ಪೆಗೆ ಮಳೆಯ ಮೂಲವಾದ ಸಮುದ್ರದ ಕಲ್ಪನೆ ತಂದು ಕೊಡುವುದು ಕಷ್ಟ, ಹೊಟ್ಟೆ ಬಟ್ಟೆಯ ಬದುಕಿನಾಚೆಯದನ್ನರಿಯದ ಜನಪದರಿಗೆ ದೇಶಾಭಿಮಾನದ ಕಲ್ಪನೆಕೊಟ್ಟು, ಅವರಲ್ಲಿ ನಿಷ್ಠೆ ಮೂಡಿಸಲು ಎಂಥ ಮೇಲ್ಮಟ್ಟದ ಲಿಖಿತ ಸಾಹಿತ್ಯ ಎಷ್ಟು ಬಂದರೂ ಏನು ಪ್ರಯೋಜನ? ಆದರೆ ತಮ್ಮವರೇ ತಮ್ಮ ಭಾಷೆಯಲ್ಲಿ ತಮ್ಮ ವಾದ್ಯಗಳನ್ನು ನುಡಿಸಿ ಹಾಡಿದಾಗ ಕೇಳಿದ ಜನರ ಅಭಿಮಾನ ಕೆರಳಿತು.

ಆದರೆ ತಮ್ಮವರೇ ತಮ್ಮ ಭಾಷೆಯಲ್ಲಿ ತಮ್ಮ ವಾದ್ಯಗಳನ್ನು ನುಡಿಸಿ ಹಾಡಿದಾಗ ಕೇಳಿದ ಜನರ ಅಭಿಮಾನ ಕೆರಳಿತು.

ಮರೆತೆಯಾತಕಯ್ಯ ನಿನ್ನ ಮಾತೃಭೂಮಿಯ
ನಿರುತ ನಿನ್ನ ಹೊರೆಯ ಹೊತ್ತ ಪೊರೆವ ತಾಯಿಯ
...............................
ಸತ್ತು ಬಿದ್ದರೆ ಹೆತ್ತ ತಾಯಿ ಅತ್ತು ದೂರ ಸರಿವಳು
ಮತ್ತೆ ನಿನ್ನ ಭೂಮಿತಾಯಿ ಎತ್ತಿಕೊಳುವಳೊ ಮನುಜಾ
ಗೇಣು ಭೂಮಿಗಾಗಿ ನಿನ್ನ ಪ್ರಾಣ ಹೋಗಲೆನ್ನುವಿ
ಕಾಣದೇನೋ ದೇಶ ಪರರಾಧೀನವಾಗಿಹುದೊ ಮನುಜಾ

ಭೂಮಿತಾಯಿಯ ಬಗ್ಗೆ ಜನಪದರಿಗೆ ಇರುವ ಗೌರವ ಪವಿತ್ರ ಅಪಾರ. ಅವಳ ಋಣಕ್ಕಾಗಿ ಪ್ರಾಣವನ್ನು ಪಣಕ್ಕೊಡ್ಡದಿದ್ದರೆ ಬದುಕಿನ ಸಾರ್ಥಕತೆ. ಏನು? ಅವರ ಭದುಕೇ ಅವಳಿಗೆ ಮೀಸಲು. ಈ ಅಭಿಮಾನವನ್ನು ಪ್ರಚೋದಿಸಿ, ಭೂಮಿತಾಯಿಯೇ ದೇಶ ಎಂದು ಹೇಳಿದರೆ, ಅಲ್ಲದೆ ಈ ಮಣ್ಣಿನಲ್ಲಿ ವೀರರನೇಕರು. ಹುಟ್ಟಿ ಹೋರಾಡಿ ಮುಕ್ತಿ ಹೊಂದಿರುವ ಸ್ಮರಣೆಯನ್ನು ತಂದುಕೊಟ್ಟರು.

ಹಿಂದುಸ್ತಾನ ಎಲ್ಲಾ ದೇಶದ ಜೀವ ಜೀವಾಳ
ಬೆಳ್ಳಿ ಬಂಗಾರ ಗುಡಿಗೋಪುರ ಸುವರ್ಣಾಲಂಕಾರ
ಇಟ್ಟು ಪ್ರೇಮ ಭರತ ಭೂಮಿಯ ಶಕ್ತಿ ಬೆಳಸಿರೋ ಮುಕ್ತಿ ಹೊಂದಿರೊ

ಶೂರ ಶಿವಾಜಿ ವೀರ ಪ್ರತಾಪರಿಲ್ಲಿ ಬೆಳದಾರೋ
ಕಿತ್ತೂರ ಚೆನ್ನಮ್ಮ ಝೂನ್ಸಿ ಲಕ್ಷ್ಮೀ ಸಂಗೊಳ್ಳಿರಾಯಣ್ಣ
ಕಮಲಾ ನೆಹರು ಕಸ್ತೂರಿಬಾಯಿ ದೇವಿಟ
ಸರೋಜಿ ನಾಯ್ಡು ಕಮಲಾ ಚಟ್ಟೋಪಾಧ್ಯಾಯ

ಹೀಗೆ ಹಿಂದುಸ್ತಾನದ ಹಿರಿಮೆ, ಮಾತೃಭೂಮಿಯ ಮಹತ್ವವನ್ನು ಸಾರುವ ಹಲವಾರು ತೆರನಾದ ಹಾಡುಗಳು ದೊರೆಯುತ್ತವೆ.

ಭಾರತ ಸ್ವಾತಂತ್ರ್ಯದ ಪೂರ್ವಕಾಲದವು ಮಹಾನ ಮಾಹಾನ ಮಹಾತ್ಮರು, ದಾರ್ಶನಿಕರ, ನಾಯಕರ, ವೀರರ, ವೀರಶ್ರೀಗಳ, ಭಗವದ್ ಮಾನ್ಯರೆ ಮುಂತಾದವರ ಕಾರ್ಯಗಳು ಅಲ್ಲಲ್ಲಿ ರಾಷ್ಟ್ರ ಬಿಡುಗಡೆಗೆ ಸಜ್ಜಾಗಿ ನಿಂತವು. ಕ್ರಿ.ಶ. ೧೮೦೦ ಪ್ರಾರಂಭದಲ್ಲಿಯೇ ಬ್ರಿಟಿಷರಿಗೆ ವಿರೋಧಭಾಸಗಳು ಎದುರಾಗಿ ನಿಂತವು.

ಕನ್ನಡ ನೆಲೆ(ಕರ್ನಾಟಕ)ದಲ್ಲಿ ಬ್ರಿಟಿಷರಿಗೆ ಅರಸನಾಗಿ ಎದುರು ನಿಂತವರಲ್ಲಿ ಹೈದರಾಲಿಯ ಮಗ ವೀರ ಟೀಪುಸುಲ್ತಾನ ಮಾತ್ರ ಎದ್ದು ....

**ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ**

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿಗರೀಯಸಿ" ಎಂದು ಹೇಳಿದ "ಆದಿಕವಿ ವಾಲ್ಮೀಕಿಯ ಮಾತು ತುಂಬಾ ಅರ್ಥಪೂರ್ಣವಾಗಿದೆ".[೧] ಹೆತ್ತತಾಯಿ ಮತ್ತು ಜನ್ಮಭೂಮಿ ಇವೆರಡು ಸ್ವರ್ಗಕ್ಕಿಂತ, ಮಿಗಿಲಾದವುಗಳು, ಹೆತ್ತ ತಾಯಿಯನ್ನು ನಾವು ಹೇಗೆ ಭಕ್ತಿಯಿಂದ ಕಾಣುತ್ತಿವೆಯೋ ಅದೇ ರೀತಿ ನಮಗೆ ಆಸರೆಯಾಗಿ ನಿಲ್ಲುವುದಕ್ಕೆ ಅನುವು ಮಾಡಿಕೊಟ್ಟ ಜನ್ಮಭೂಮಿಯನ್ನಾದರೂ ಮರೆಯುವುದು ಹೇಗೆ ಎರಡು ಒಂದೇ ನಾಣ್ಯದ ಎರಡು ಮುಖಗಳಿದ್ದ ಹಾಗೆ. ಇವೆರಡನ್ನೂ ರಕ್ಷಿಸಬೇಕಾಗಿರುವ ಮಗನನ್ನೇ ಬಂಧನದಲ್ಲಿಟ್ಟರೆ ಇವರ ಪಾಡೇನು? ಹಾಗೆಯೇ ಅದಕ್ಕೆ ಅವಶ್ಯವಾಗಿ ಬೇಕೆ ಬೇಕು ಸ್ವಾತಂತ್ರ್ಯ. ಸ್ವಾತಂತ್ರ್ಯ ಎಂದೊಡನೆ ಕೇವಲ ಸ್ವೇಚ್ಛಾಚಾರದಿಂದ ತಿರುಗುವುದಲ್ಲ. ಅದರ ಜೊತೆಗೆ ಜನ್ಮ ಕೊಟ್ಟ ತಾಯಿ ಮತ್ತು ಜನ್ಮಭೂಮಿಯನ್ನು ಕೀರ್ತಿಸುವುದಕ್ಕೆ ಸ್ವಾತಂತ್ರ್ಯ ಬೇಕೇ ಬೇಕು. ಅದಕ್ಕಾಗಿ ಭಾರತದ ಪ್ರತಿಯೊಬ್ಬ ಪ್ರಜೆಯೂ ಕೂಡ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಬ್ರಿಟಿಷರ ದಾಸ್ಯದಲ್ಲಿ ನಮ್ಮ ಪೂರ್ವಜರ ದಮನಿ ದಮನಿಯ ಹನಿ ಹನಿ ರಕ್ತಗಳು ಈ ಭಾರತಾಂಬೆ ಸಂರಕ್ಷಣೆಗಾಗಿ ಬ್ರಿಟಿಷ ವಿರುದ್ಧ ಬಿದ್ದಿವೆ. ಅದಕ್ಕಾಗಿ "ವ್ಯಕ್ತಿಯ ಉಳಿವಿಗೆ, ಬದುಕಿಗೆ ಶ್ವಾಸೋಚ್ಛಾಸ ಎಷ್ಟು ಮುಖ್ಯವೋ, ಪ್ರತಿಯೊಂದು ರಾಷ್ಟ್ರಕ್ಕೂ ಅಷ್ಟೇ ಮುಖ್ಯವಾದುದು. ಸ್ವಾತಂತ್ರ್ಯವೇ ರಾಷ್ಟ್ರದ ಜೀವನಾಡ, ದೇಶದ ಸುಗಮ ಪ್ರಗತಿಗೆ ಉದ್ದೇಶಪೂರಿತ ಗುರಿಸಾಧಿಸಲು ತವಕಿಸುತ್ತಿರುವ ಜನತೆಗೆ ಇದು ಆಧಾರಸ್ತಂಭ. ಈ ಮೂಲ ಅರ್ಥವನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ "ಸ್ವರಾಜ್ಯವು ನಮ್ಮ ಜನ್ಮ ಸಿದ್ಧಹಕ್ಕು"[೨] ಎಂಬ ಲೋಕಮಾನ್ಯ ತಿಲಕರು ಸಾರಿದರು. ಇದನ್ನು ನಾವು ಗಳಿಸಿಯೇ ಗಳಿಸುತ್ತೇನೆ ಎಂದು ಪಣತೊಟ್ಟರು. ಗಾಂಧೀಜಿಯವರು

ಕಡೆಗೆ ಈ ಗುರಿ ನಾವು ಸಾಧಿಸಿಯೇ ಸಾಧಿಸಿದೆವು. ಅದಕ್ಕಾಗಿ ಏನನ್ನಾದರೂ ಸಾಧಿಸಲು "ಮುಖ್ಯವಾಗಿ ಸ್ವಾತಂತ್ರ್ಯ ಅನ್ನುವುದು ಬೇಕೇ ಬೇಕು. ವ್ಯಕ್ತಿಗತವಾಗಿ ಇದನ್ನು ಅರ್ಥೈಸಿ ಕೊಂಡಾಗಲೂ ಅದು ಇಬ್ಬಗೆಯ ಅರ್ಥವನ್ನು ಸೂಚಿಸುತ್ತದೆ".[೩] ಇಮ್ಯಾನುಯಲ್, ಕ್ಯಾಂಟ್ ಎಂಬಾತನು ತನ್ನ ರಾಸನತತ್ವ ಎಂಬ ಕೃತಿಯಲ್ಲಿ "ಸ್ವಾತಂತ್ರ್ಯ ಎಂದರೆ ಇನ್ನೊಬ್ಬ ಒತ್ತಾಯಕ್ಕೆ ಸಿಲುಕದೆ ಸಾಮಾನ್ಯವಾದ ತನ್ನ ನಿತ್ಯ ವ್ಯವಹಾರವನ್ನು ಹತ್ತು ಸಮಸ್ತರ ಸಾಮಾನ್ಯವಾದ ಸ್ವತಂತ್ರ ಅನುಭವಕ್ಕೆ ಅಡ್ಡಿಯಾಗದ ರೀತಿಯಲ್ಲಿ ನಿರಾತಂಕವಾಗಿ ನಡೆಸಿಕೊಂಡು ಹೋಗುವುದು ಅದಕ್ಕಾಗಿ ಹತ್ತು ಜನ ಸಮಸ್ತರ ಅನುಭವಕ್ಕೆ ಅಡ್ಡಿಯಾಗದೆ ಇರುವುದು".[೪]

ಇಲ್ಲಿ ಅಡ್ಡಿ ಎನ್ನುವುದೊಂದು ದ್ವಂದ್ವಾರ್ಥದಲ್ಲಿ ನಾವು ಅರ್ಥೈಸಿಕೊಳ್ಳಬೇಕು. ಬೇರೆಯವರಿಗೆ ಯಾವುದೇ ಕಾರಣದಿಂದ ತೊಂದರೆಯಾಗಬಾರದು, ಅವರನ್ನು ನಮ್ಮಂತೆ ಸ್ವಾತಂತ್ರ್ಯವನ್ನು ಹೊಂದಬೇಕು. ಅಂದರೆ ಸಮಸ್ತ ಭಾರತೀಯರೆಲ್ಲರೂ ಅವರವರ ವಿಷಯದಲ್ಲಿ ಒಂದುಗೂಡಿ ಸ್ವಾತಂತ್ರ್ಯ ಎನ್ನುವ ಪದಕ್ಕೆ ನಾವು ಇಡೀ ಸಮಗ್ರ ದೇಶವನ್ನೇ ಅರ್ಥೈಸಿಕೊಂಡಲ್ಲಿ ಸಂಪೂರ್ಣ ಅರ್ಥ ಸ್ವಾತಂತ್ರ್ಯಕ್ಕೆ ಬರುತ್ತದೆ. ಹಾಗೆಯೇ ನಾವು ನಮ್ಮ ಜನರೆಲ್ಲರೂ ಸಮಸ್ತವಾಗಿ, ಸ್ವತಂತ್ರವಾಗಿ ಅಡ್ಡಾಡಬೇಕು, ತಿರುಗಾಡಬೇಕು. ಬಾಯಿಯಿಲ್ಲದ ಪಶುಪಕ್ಷಿಗಳಿಗೂ ಕೂಡ ಸ್ವಾತಂತ್ರ್ಯ ಎಂಬುದು ಅತ್ಯವಶ್ಯ. ಅದು ಇದ್ದರೆನೇ ಅವು ಇಂದು ಸ್ವತಂತ್ರವಾಗಿ ತಿರುಗಾಡುತ್ತೇವೆ. ಅದಕ್ಕಾಗಿ ಈ ಸ್ವಾತಂತ್ರ್ಯಕ್ಕಾಗಿ ನಮ್ಮ ಪೂರ್ವಜರು ಜನತೆಯನ್ನು ಬಡಿದೆಬ್ಬಿಸಿ ಅವರಲ್ಲಿ ಅಸಾಧಾರಣವಾದ ಉತ್ಸಾಹವನ್ನು ತುಂಬಿ ಜನರನ್ನು ನಾನಾ ರೀತಿಯ ಸಾಧನೆಗಳ ಮೂಲಕ ಬ್ರಿಟಿಷರ ಕಪಿಮುಷ್ಠಿಯಿಂದ ಬಿಡಿಸಿ ನಮ್ಮನ್ನು ಸ್ವತಂತ್ರರಾಗಿ ಪರಿಣಮಿಸಿದ ಗಾಂಧೀಜಿಯ ಮತ್ತು ಹಿರಿಯ ಮುಖಂಡರುಗಳ ಹೋರಾಟದ ಪರಿಣಾಮವಾಗಿ ಸಮಸ್ತ ಪ್ರಜೆಗಳು ಅವರಿಗೆ ಸಹಾಯ ಸಹಕಾರ ನೀಡಿ ಸ್ವರಾಜ್ಯ ಸಾಧಿಸಲು ಅನುಕೂಲವಾಯಿತು.

ಈ ಸ್ವಾತಂತ್ರ್ಯವನ್ನು ಗಳಿಸಲು ನಮ್ಮ ಹಿರಿಯರು ಯಾವ ರೀತಿಯಾಗಿ ಬ್ರಿಟಿಷರ ಜೊತೆ ಪ್ರತಿಭಟಿಸಿದರು ಎಂಬುದನ್ನು ನೋಡೋಣ.

ಭಾರತದಂತಹ ಈ ಬೃಹತ್ ದೇಶವನ್ನು ಬ್ರಿಟಿಷರು ಹಂತ ಹಂತವಾಗಿ ಆಕ್ರಮಿಸುತ್ತಾ ಸಮಗ್ರ ದೇಶವನ್ನು ಹೇಗೆ ವಶಪಡಿಸಿಕೊಂಡರೆಂಬುದನ್ನು ಸಂಕ್ಷಿಪ್ತವಾಗಿ ವಿವರಿಸಿದೆ.

"ಪ್ರಾಚೀನ ಕಾಲದಿಂದಲೂ ಭಾರತದೊಡನೆ ಪರದೇಶಿಯರು ವ್ಯಾಪಾರ ಮಾಡುತ್ತಿದ್ದರು. ನಮ್ಮಲ್ಲಿಯ ಸಂಪತ್ತುಗಳಾದ ಆರೋಗ್ಯವರ್ಧಕ ವಸ್ತುಗಳು ಕಲಾಪೂರಿತ ಸಾಮಾನುಗಳು ಇಟಲಿಯ ಮುಖ್ಯ ಪಟ್ಟಣಗಳಾದ ಜಿನೇವಾ, ವೆನಿಸ್ ನಗರಗಳ ಮುಖಾಂತರವಾಗಿ ಯುರೋಪಿಗೆ ಹೋಗುತ್ತಿದ್ದವು.[೫] "ಈ ನಗರಗಳು ಭಾರತದ ಮಾಲನ್ನು ಕಾನ್‌ಸ್ಟಾಂಟಿನೋಪಲಿನಲ್ಲಿ ಕೊಳ್ಳುತ್ತಿದ್ದವು. ಭಾರತೀಯ ವ್ಯಾಪಾರದಿಂದ ಧನಸಂಪತ್ತು ಗಳಿಸಿ ಬೊಕ್ಕಸು ತುಂಬಿದ್ದನು ನೋಡಿ ಯುರೋಪಿನ ಸರ್ವ ರಾಷ್ಟ್ರಗಳು ಭರತ ಖಂಡದೊಡನೆ ವ್ಯಾಪಾರ ಮಾಡಲಾರಂಭಿಸಿದವು. ಮೊದಮೊದಲು

ಮುಸಲ್ಮಾನರು ಬಂದರು. ಅವರಿಗೆ ಅಷ್ಟು ಫಲ ಕಾಣಲಿಲ್ಲವೇನೋ "ಪೋರ್ತುಗಾಲದ ವಾಸ್ಕೋಡಿಗಾಮಾ ಎಂಬುವನು ಆಫ್ರಿಕಾದ ಮುಖಾಂತರವಾಗಿ ಸನ್ ೧೪೯೮ರಲ್ಲಿ ಭಾರತಕ್ಕೆ ಬಂದು ಮುಟ್ಟಿದ್ದನು. ಮೆಲ್ಲ ಮೆಲ್ಲನೇ ಪೋರ್ತುಗೀಜರು ಅರಬ್ಬರಿಂದ ಭಾರತದ ವ್ಯಾಪಾರವನ್ನು ಕಸಿದುಕೊಂಡರು. ಪೋರ್ಚುಗೀಸರು ಶ್ರೀಮಂತವಾದರು".[೬] ನೋಡು ನೋಡುವಷ್ಟರಲ್ಲಿ ಡಚ್ಚರು, ಇಂಗ್ಲೀಷರು, ಫ್ರಾನ್ಸಿನವರು ಭಾರತದೊಡನೆ ವ್ಯಾಪಾರವನ್ನು ಮಾಡಲು ಆರಂಭಿಸಿದರು. ಮುಂದೆ ಅನೇಕ ವರ್ಷಗಳವರೆಗೆ ಸಂಘರ್ಷ ನಡೆದು ಇಂಗ್ಲೀಷರೇ ಜಯ ಪಡೆದರು. ವ್ಯಾಪಾರದ ಮುಖಾಂತರವಾಗಿ ಅವರು ರಾಜಕೀಯವನ್ನು ಸೇರಿ ನಮ್ಮ ಪ್ರಾಂತಗಳನ್ನು ಒಂದೊಂದಾಗಿ ಕಬಳಿಸುತ್ತಾ ವಶಪಡಿಸುತ್ತ ಹೋದರು. ಆಂಗ್ಲರು ಬಂದು ರಾಜ್ಯವನ್ನು ವಶಪಡಿಸಿಕೊಳ್ಳುವಾಗ ಭಾರತೀಯರು ಪ್ರತಿಭಟಿಸುತ್ತಲೇ ಇದ್ದರು. "೧೭೫೭ರ ಪ್ಲಾಸಿ ಕದನದಿಂದ ಆರಂಭವಾದ ಈ ಪ್ರತಿಭಟನೆ ೧೮೪೯ರ ಆಂಗ್ಲೋ ಶಿಖ್‌ರವರೇ, ಅವರು ಭಾರತದ ಮೇಲೆ ತಮ್ಮ ಹಿಡಿತವನ್ನು ಸಾಧಿಸಿದರು. "ಬನಾರಸಿನ ರಾಜ ಚೈತನ್‌ಸಿಂಗ್‌ನ ಉತ್ಥಾನ(೧೭೮೦) ಬಿಹಾರದ ಜಮೀನದಾರರ ಬಂಡಾಯ ೧೮೮೧. ಅವಧಿ(ಅಯೋಧ್ಯೆ) ವರ್ಜಿರ್ ಅಲ್ಲಿಯ ಪ್ರತಿಭಟನೆ ೧೭೮೮ ಕರ್ನಾಟಕ, ತಮಿಳುನಾಡು, ಕೇರಳ ಒಳಗೊಂಡ ದಕ್ಷಿಣ ಭಾರತದ ಬಂಡಾಯ(೧೮೦೦ ರಿಂದ ೧೮೦೧) ಇವೆಲ್ಲ ಮುಖ್ಯವಾದವುಗಳು".[೭]

"ಟಿಪ್ಪುವಿನ ಮರಣಾನಂತರ ೧೭೯೯ರಲ್ಲಿ ಕರ್ನಾಟಕವು ಬ್ರಿಟಿಷರ ವಶವಾಯಿತು. ಬ್ರಿಟೀಶರ ದಬ್ಬಾಳಿಕೆಯನ್ನು ನೋಡುತ್ತ ಕಣ್ಮುಚ್ಚಿ ಹಾಗೆ ಕೂಡ್ರಲಿಲ್ಲ. ಕರ್ನಾಟಕದ ವಿವಿಧ ಭಾಗಗಳಲ್ಲಿ ಬ್ರಿಟಿಷರ ವಿರುದ್ಧ ನಡೆದದ್ದು ಅವರ ಆಡಳಿತಕ್ಕೆ ತೀವ್ರತರವಾದ ಧಕ್ಕೆ ಬಂದಿತಲ್ಲದೆ ನಮ್ಮ ಜನರಿಂದ ಪ್ರತಿಭಟನೆ ಆರಂಭವಾಯಿತು".[೮] ೧೮೦೦ರಲ್ಲಿ ಸಶಸ್ತ್ರ ಪ್ರತಿಭಟನೆಯಲ್ಲಿ ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯಲ್ಲಿ ಜನ್ಮ ತಾಳಿದ ದೋಂಡಿಯಾ, ಮೊದಲು ಟಿಪ್ಪುವಿನ ಸೈನ್ಯದಲ್ಲಿದ್ದನು. ನಂತರ ಏನೊ ವೈಷಮ್ಯ ಬಂದು ಹೊರಗೆ ಬಂದು ಕೆಲವು ಪಾಳೆಯಗಾರರನ್ನು ಕೂಡಿ ಹಾಕಿ ಫ್ರೆಂಚರನ್ನು ಒಲಿಸಿಕೊಂಡು ಉತ್ತರ ಕರ್ನಾಟಕದಲ್ಲಿಯೂ ತನ್ನ ಪ್ರಭುತ್ವವನ್ನು ಸಾಧಿಸಿ ಬ್ರಿಟಿಷರ ವಿರುದ್ಧ ಒಂಬತ್ತು ಸಾವಿರ ರಾವುತರು ಮತ್ತು ಇಪ್ಪತ್ತು ಸಾವಿರ ಕಾಲ್ದಳವನ್ನು ಹೊಂದಿದ ಈತನು ಆಂಗ್ಲರ ವಿರುದ್ಧ ಹೋರಾಡುತ್ತ ೧೮೦೦ರಲ್ಲಿ ಯುದ್ಧ ಭೂಮಿಯಲ್ಲಿ ಮಡಿದನು. "ಈತನ ಅನುಯಾಯಿಗಳು ಈತನನ್ನು "ಹುಲಿ" ಎಂದೇ ಕರೆಯುತ್ತಿದ್ದರು. ೧೮೦೨ರಲ್ಲಿ ಮೈಸೂರಿನಲ್ಲಿ ಬ್ರಿಟಿಷರ ಸತ್ತೆಯನ್ನು ಪ್ರತಿಭಟಿಸಿ ಐನೂರ ಪಾಳೆಯಗಾರರ ವೆಂಕಟಾದ್ರಿ ಪ್ರಬಲನಾಗಿ ಹೋರಾಡಿದನು.[೯] ಕ್ರಿ.ಶ. ೧೮೧೯ರಲ್ಲಿ ಕೊಪ್ಪಳದಲ್ಲಿ ವೀರಪ್ಪ ಎಂಬ ಕ್ರಾಂತಿಕಾರಿಯು ಕೊಪ್ಪಳ ಕೋಟೆಯನ್ನು ವಶಪಡಿಸಿಕೊಂಡು ಬ್ರಿಟಿಷ ಸತ್ತೆಯ ವಿರುದ್ಧ ಬಂಡಾಯ ಹೂಡಿದನು. ಇದಾದ ನಂತರ ಬೀದರದಲ್ಲಿ ದೇಶಮುಖಿ(ದೇಶಮುಖಂಡರು) ಬಂಡೆದ್ದರು. ಸುಳಿಯಲ್ಲಿಯ ಶಿವಲಿಂಗಯ್ಯ ಕೃಷ್ಣಾಪುರದ ತಿರುಮಲ ರಾಮ ಇವರು ಕೂಡ ಬಂಡಾಯದಲ್ಲಿ ಭಾಗವಹಿಸಿ ೧೮೨೧ರಲ್ಲಿ ಒಟ್ಟಿ ಕುರ್ ಸದ್ದಿನಿಂದ ಅಡಗಿದನು. ೧೮೨೪ರಲ್ಲಿ ಕಿತ್ತೂರಿನ ಚೆನ್ನಮ್ಮಳು ಧೀರ

ಹೋರಾಟದಿಂದ ತೀರಿಕೊಂಡಳು. ನಂತರ ಸಂಗೊಳ್ಳಿರಾಯಣ್ಣನು ಬಂಡೆದ್ದು ಅವನನ್ನು ಗಲ್ಲಿಗೇರಿಸಲಾಯಿತು. "ದಕ್ಷಿಣ ಕನ್ನಡ, ಕೊಡಗು, ಶಿವಮೊಗ್ಗ ಜಿಲ್ಲೆಯ ಕೆಲವು ಸ್ಥಳಗಳು ಇಲ್ಲೆಲ್ಲ ಬ್ರಿಟಿಷ ವಿರುದ್ಧ ಬಾರಿ ಪ್ರತಿಭಟನೆಗಳು ಜರುಗಿದವು. ಕೊಡಗಿನ ಅರಸು ಚಿಕ್ಕವೀರ ರಾಜನನ್ನು ಬ್ರಿಟಿಷರು ೧೮೩೪ರಲ್ಲಿ ಪದಚ್ಯುತಗೊಳಿಸಿ, ಕೊಡಗನ್ನು ವಶಪಡಿಸಿಕೊಂಡರು. ಸಂಪೂರ್ಣವಾಗಿ ಕರ್ನಾಟಕವನ್ನು ತಮ್ಮ ಬಿಗಿ ಮುಷ್ಠಿಯಲ್ಲಿ ಹಿಡಿದುಕೊಂಡರು.

ಭಾರತದಲ್ಲಿ ಬ್ರಿಟಿಷ ಪ್ರಭುತ್ವದ ವಿರುದ್ಧ ೧೮೫೭ರಲ್ಲಿ ಕ್ರಾಂತಿ ಉಂಟಾಯಿತು. ಆದರೆ ಇದಕ್ಕೆ ಇಂಗ್ಲಿಷ ಇತಿಹಾಸಕಾರರು "ಇದು ಸೈನಿಕ ವಿದ್ರೋಹ ಮಾತ್ರ" ಎಂದು ಬರೆದಿದ್ದಾರೆ.[೧೦] ಆದರೆ ಇದನ್ನು ಆಳವಾಗಿ ನೋಡಿದಾಗ ಈ ಕದನಕ್ಕೆ ಕಾರಣಗಳೇನು ಎನ್ನುವುದು ಗೊತ್ತಾಗುತ್ತದೆ.

"ಡಾಲ್ ಹೌಸಿಯು ಯುದ್ಧ ನೀತಿ, ದತ್ತುಪುತ್ರ ರಾಜಾಧಿಕಾರ ರದ್ಧತಿಯ ನಿಯಮ ಮತ್ತು ದುರಾಡಳಿತದ ನೆಪದ ಮೇಲೆ ದೇಶಿಯ ಸಂಸ್ಥಾನಗಳನ್ನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿಸುವ ಕುಟಿಲ ನೀತಿ ಅನುಸರಿಸಿದ್ದನು. ಮರಾಠದ ಸಾತಾರ ಮತ್ತು ನಾಗಪುರ ಬ್ರಿಟಿಷರ ವಶವಾದವು. ನಮ್ಮ ಸೈನಿಕರಿಗೆ ಸಂಬಳವನ್ನು ಬ್ರಿಟಿಷರಿಗಿಂತ ಕಡಿಮೆ ಕೊಡುತ್ತಿದ್ದರು".[೧೧] ಹೀಗಾಗಿ ಇದಕ್ಕೆ ರೊಚ್ಚಿಗೆದ್ದ ಜನ ಬ್ರಿಟಿಷರ ವಿರುದ್ಧ ದಂಗೆ ಎದ್ದರು.

ನಮ್ಮ ಕರ್ನಾಟಕವು ಕೂಡ ಭಾಗವಹಿಸಿ ಸುರಪುರ, ನರಗುಂದದ ದೇಸಾಯಿ ಹಲಗಲಿಯ ವೀರಬೇಡರು, ಮುಂಡರಗಿ ಭೀಮರಾಯ ಇವರೆಲ್ಲರೂ ಬ್ರಿಟಿಷರ ವಿರುದ್ಧ ಬಂಡೆದದ್ದು ಹೋರಾಡಿದ ಮಹಾವೀರರು ಉಳಿದ ಕಡೆಯು ಈ ೧೮೮೪ರಲ್ಲಿಯ ದಂಗೆಗೆ ಬಾರಿ ಪ್ರಮಾಣದಲ್ಲಿ ಹೋರಾಡಿದರು. "ಇದಕ್ಕೆ ಭಾರತೀಯ ಪ್ರಥಮ ಸ್ವಾತಂತ್ರ್ಯ ಯುದ್ಧವೆಂತಲೂ ಕರೆಯುತ್ತಾರೆ"[೧೨] ಇಲ್ಲಿ " 'ಮಾರೋ ಪಿರಂಗಿಕೋ' ಎಂದರೆ ಯುರೋಪಿಯನ್‌ರನ್ನು ಕೊಲ್ಲಿ ಎಂದು ಕೂಗುತ್ತಿದ್ದರು".[೧೩] ಅವರು ಈ ಯುದ್ಧದಲ್ಲಿ ಅವರೇ ಸಾಧಿಸಿದಂತಾಯಿತು. "ಆಗಲೇ ಇವರು ಎಚ್ಚರಗೊಂಡು ಅವರು ಶಿಕ್ಷಣವನ್ನು ಆರಂಭಿಸಿದರು. ಉಚ್ಚಮಟ್ಟದ ಶಿಕ್ಷಣವನ್ನು ಜಾರಿಗೆ ತಂದ ಅವರು ಕ್ರೈಸ್ತ ಮಿಶನರಿಯಿಂದ ನಮ್ಮ ಜನಕ್ಕೆ ತಿಳಿವಳಿಕೆ ಹೇಳುತ್ತಿದ್ದರು".[೧೪] ಆಂಗ್ಲ ಶಿಕ್ಷಣದಿಂದ ನಮ್ಮ ಜನಾಂಗದಲ್ಲಿ ಹೊಸದೊಂದು ಬಿರುಗಾಳಿ ಎದ್ದು ಭಾರತೀಯ ಸಾಹಿತ್ಯದಲ್ಲಿ ಆಂಗ್ಲ ಭಾಷೆಯಲ್ಲಿ ಭಾಷೆಯು ಬೆಳೆದು ಜನರ ಬುದ್ಧಿಯು ತಿಳುವಳಿಕೆ ಮಟ್ಟದಲ್ಲಿ ಬರತೊಡಗಿತು. ಬಂಕಿಂಚಂದ್ರ, ಹರೀನಾರಾಯಣ ಅಪ್ಟೆ, ಸುಬ್ರಹ್ಮಣ್ಯ ಭಾರತಿ, ಗಳಗನಾಥ ಮುಂತಾದವರ ಬರಹಗಳು ಸುಧಾರಿಸಿದವು. ಅಲ್ಲದೆ "ಮುದ್ರಣ ತಂತ್ರ ವ್ಯಾಪಕವಾಗಿ ಪತ್ರಿಕೆಗಳ ಪ್ರಕಟಣೆಯಲ್ಲಿ ಪ್ರಾರಂಭವಾಗಿ ಸಂವಾದ ಕೌಮುದಿ(ಬಂಗಾಲಿ ೧೮೨೧), ಕ್ರಿಸೆಂಟ್(ಇಂಗ್ಲಿಷ್ ೧೮೪೩), ಪೆಟ್ರಿಯಟ(೧೮೫೩), ರಾಸ್‌ಗೋಪ್ತಾರ್(ಗುಜರಾತಿ ೧೮೫೪), ಕೇಸರಿ(ಮರಾಠಿ ೧೮೮೦) ದಿ ಹಿಂದು(ಇಂಗ್ಲಿಷ್ ೧೮೭೮) ಅಮೃತ್ ಭಟಾರ ಪತ್ರಿಕೆದಂತಹ ಪ್ರಕಟಣೆಗಳು "ಬ್ರಿಟಿಷ್ ಆಡಳಿತದ ವಿರುದ್ಧ ಭಾರತೀಯರಲ್ಲಿ ಜಾಗ್ರತಿ ಮೂಡಿಸಿದವು. ಇದೇ ಕಾಲದಲ್ಲಿ ಬ್ರಹ್ಮ ಸಮಾಜ, ಆರ್ಯಸಮಾಜ, ರಾಮಕೃಷ್ಣ ಮಿಶನ್ ಮುಂತಾದವುಗಳು ಹುಟ್ಟಿಕೊಂಡು ಬ್ರಿಟಿಷರ

ವಿರುದ್ಧ ಬಂಡೇಳುವುದು ಮತ್ತು ಅವರ ವಿರುದ್ಧ ಹೋರಾಡುವಂತೆ ಹೃದಯ ಸ್ಪರ್ಶಿಸುವಂತೆ ಲೇಖನಗಳನ್ನು ಬರೆಯುತ್ತಿದ್ದರು".[೧೫] ರಾಮಕೃಷ್ಣ ಮಿಶನರಿ ಮುಂತಾದವುಗಳಲ್ಲಿ ಸಂಘವನ್ನು ಸ್ಥಾಪಿಸಿ ಬಾಹ್ಯವಾಗಿ ಬ್ರಿಟಿಷರಿಗೆ ಹೊಂದಿಕೊಂಡೇ ಇರುವವರು ಎಂಬಂತೆ ಕಾಣುತ್ತಿದ್ದರು".[೧೬] ಆದರೆ ಅದರೊಳಗೆ ಬ್ರಿಟಿಷರ ವಿರುದ್ಧವಾದ ಕಾರ್ಯಾಚರಣೆಗಳನ್ನು ನಡೆಸುತ್ತಿದ್ದರು. ಅಲ್ಲದೆ "ಭಾರತದ ಇತಿಹಾಸವನ್ನು ವೈಜ್ಞಾನಿಕ ವಿಧಾನಗಳಿಂದ ಪ್ರಸಾರ ಮಾಡಿದ ಜೊನ್ಸ್ ಪ್ರೆನ್ಸಿಸ್ ಕನ್ನಿಂಗ್‌ಹ್ಯಾಂ, ರೈಸ್ ಪ್ಲೆಟಿಜರುನಾದ ಸರ್ಕಾರ ಭಗವಾನ್‌ಲಾಲ್ ಇಂದ್ರಜಿ ಸಾವರ್ಕರ್ ಭಗವಾನ್ ಇಂದ್ರಜಿ, ಸಾರ್ವಕರ್ ಭಾವುಬಾಜಿ ಭಂಡಾರ್ಕರ್ ಮುಂತಾದವರ ಯತ್ನಗಳಿಂದ ಗತವೈಭವವನ್ನು ತಿಳಿದು ಸ್ಫೂರ್ತಿ ಪಡೆಯುವ ಅವಕಾಶ ಭಾರತೀಯರಿಗಾಯಿತು".[೧೭] ಆಲೂರು ವೆಂಕಟರಾಯರ ಗತವೈಭವ ೧೯೧೭ ಕೃತಿಯನ್ನು ಇಲ್ಲಿ ಸ್ಮರಿಸಬೇಕಾದ ಸಾಧನ. ಅನೇಕ ವರ್ತಮಾನ ಪತ್ರಿಕೆಗಳು ಇತಿಹಾಸವನ್ನು ಕುರಿತ ಅನೇಕ ಗ್ರಂಥಗಳು ದೊರೆತವು. ಇದೇ ಕಾಲದಲ್ಲಿ ಸಂಚಾರಿ ಸೌಲಭ್ಯವು ಹೆಚ್ಚಿದವು. ಭಾರತದಲ್ಲಿಯ ಸಂಪತ್ತುಗಳಾದ ಅಡವಿಗಳು, ಗಣಗಳು ಹಾಗೂ ನೈಸರ್ಗಿಕ ಸಂಪತ್ತು ಇತ್ಯಾದಿಗಳನ್ನು ಅವರು ತಮ್ಮ ಕೈಗಾರಿಕೆಗೆ ಉಪಯೋಗಿಸಿಕೊಂಡರು. ಅಲ್ಲದೇ ನಮ್ಮಲ್ಲಿಯ ಕಂಬಳಿ ನೇಯ್ಗೆ ಇಲ್ಲಿಯ ನೂಲು, ಉಕ್ಕು ಹಾಗೂ ಉಪ್ಪಿನ ಕೈಗಾರಿಕೆಯನ್ನು ನಾಶ ಮಾಡಿದರು".[೧೮] ಸೆಣಬು, ಅರಳೆ ಮುಂತಾದವುಗಳನ್ನು ನಾಶ ಪಡಿಸಿದರಲ್ಲದೇ ಅನೇಕ ತೆರನಾಗಿ ನಮ್ಮ ಉಪ್ಪಾರರಿಗೆ ಕೂಲಿ ಕೆಲಸವಿಲ್ಲದಂತೆ ಮಾಡಿ ಅವರನ್ನು ಕೃಷಿಗೆ ಅವಲಂಬಿಸುವಂತೆ ಮಾಡಿದರು".[೧೯] ತಮ್ಮ ಕೈಕೆಳಗೆ ಕೆಲಸ ಮಾಡುವ ಭಾರತೀಯರಿಗೆ ಇಂಗ್ಲಿಷರಿಗೆ ಕೊಡುತ್ತಿದ್ದ ಸಂಬಳಕ್ಕಿಂತ ಅತಿ ಕಡಿಮೆಯಾಗಿತ್ತು. ಐ.ಎ.ಎಸ್. ಪರೀಕ್ಷೆಗಳ ವಯಸ್ಸನ್ನು ೨೧ ರಿಂದ ೧೮ಕ್ಕೆ ಇಳಿಸಿದರು. ಇದಕ್ಕೂ ಮೊದಲು ನೀಲಿ ಭಂಡಾಯ ೧೮೬೦ರಲ್ಲಿ ಒತ್ತಾಯದಿಂದ ನೀಲಿ ಬೆಳೆಯನ್ನು ಬೆಳೆಯಲು ತಿಳಿಸಿದರು. ಇದರಿಂದ ಒಗ್ಗದ ನಮ್ಮ ರೈತರು ಬಂಡಾಯ ಹೂಡಿ ಯಶಸ್ವಿಯಾದರು. ಬ್ರಿಟಿಷರು ಏನೇ ಕಷ್ಟ ಬಂದರೂ ಎದೆಗುಂದದೆ ಮುಂದಿನ ದಿನಕ್ಕಾಗಿ ರಕ್ತವನ್ನು ಶ್ರಮಿಸುತ್ತಾ ನಡೆದರು. ೧೮೭೬ರಲ್ಲಿ ವೈಸರಾಯರಾಗಿ ಲಾಡರ ಲಿಟನ್ ಸಾಹೇಬರ ದರ್ಬಾರ ಭೀಕರ ಪಾತ್ರವನ್ನೇ ಆರಂಭಿಸಿ ೧೮೭೭ರಲ್ಲಿ ದಿಲ್ಲಿಯಲ್ಲಿ ವೈಭವದಿಂದ ದರ್ಬಾರು ಸೇರಿಸಿ ವಿಕ್ಟೋರಿಯಾ ಮಹಾರಾಣಿಗೆ ಹಿಂದುಸ್ತಾನಿ ಚಕ್ರವರ್ತಿನಿ ಎಂದು ಸಾರಿ ಭಾರತದ ಮೇಲಿನ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸಿದರು. ಹೊಸ ಹೊಸ ಪತ್ರಿಕೆಗಳಲ್ಲಿ ಬರುವ ಸುದ್ದಿಗಳು ದೇಶದ ಜಾಗ್ರತಿ ಮೂಡಿಸುತ್ತವೆ ಎಂದು ಅವನ್ನು ಕಟ್ಟುನಿಟ್ಟಾಗಿ ಪ್ರತಿಬಂಧಕಗೊಳಿಸಿದರು.

"೧೮೯೫ರಲ್ಲಿ ಕಾಂಗ್ರೆಸ್ಸಿನ ಸ್ಥಾಪಕ ಎ.ಓ. ಹ್ಯೂಮ್ ಧಾರವಾಡ ಮತ್ತು ಬೆಳಗಾವಿಗಳಿಗೆ ಭೇಟಿ ನೀಡಿ ಕಾಂಗ್ರೆಸ್ಸಿನ ಉದ್ದೇಶವನ್ನು ಜನರಲ್ಲಿ ಪ್ರಚಾರ ಮಾಡಿದರು. ಈ ಅವಧಿಯಲ್ಲಿ ಬಳ್ಳಾರಿಯ ಕೋಲಾಚಲಂ ವೆಂಕಟರಾವ್ ಎಂಬುವರು ಕರ್ನಾಟಕದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಉತ್ತರ ಕರ್ನಾಟಕದಲ್ಲಿಯೇ ಲೋಕಮಾನ್ಯ ತಿಲಕರು ಮಹಾರಾಷ್ಟ್ರದಲ್ಲಿ ಗುಡುಗಿದ "ಸ್ವರಾಜ್ಯವು ನನ್ನ ಜನ್ಮಸಿದ್ಧಹಕ್ಕು"[೨೦] ಎಂದು ಘೋಷಿಸಿದ್ದು ಆಗಿನ ಮುಂಬೈ

ಕರ್ನಾಟಕದ ಪ್ರಾಂತಗಳಾದ ಬೆಳಗಾವಿ, ಕಾರವಾರ, ಬಿಜಾಪುರ, ಧಾರವಾಡ ಜಿಲ್ಲೆಗಳಲ್ಲಿ ತಿಲಕರೇ ಸ್ವತಃ ಭೇಟಿ ನೀಡಿ ತಮ್ಮ ಸಿಂಹವಾಣಿಯಿಂದ ಕನ್ನಡಿಗರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸುವಂತೆ ಪ್ರೇರಣೆ ನೀಡಿದರು. ಇಂತಹ ಸಂದರ್ಭದಲ್ಲಿ ಎಲ್ಲೆಲ್ಲೂ ದೇಶಿಯ ವಿದ್ಯಾಲಯಗಳು ಸ್ಥಾಪಿತಗೊಂಡವು. 'ಬೆಳಗಾಂವಿಯ ಗಂಗಾಧರರಾವ್ ದೇಶಪಾಂಡೆ' ಧಾರವಾಡದ ಆಲೂರ ವೆಂಕಟರಾಯರು, ಬಿಜಾಪುರದ ಶ್ರೀನಿವಾಸ ಕೌಜಲಗಿ ಮುಂತಾದವರು ಸ್ವದೇಶಿ ಚಳುವಳಿಯಲ್ಲಿ ಭಾಗವಹಿಸಿದರು. ೧೯೧೬ರಲ್ಲಿ ಗಾಂಧೀಜಿಯವರು ಬೆಳಗಾವಿಗೆ ಭೇಟಿ ನೀಡಿದರು. ಕರ್ನಾಟಕಕ್ಕೆ ಇದು ಅವರ ಮೊದಲ ಭೇಟಿ ೧೯೨೦ರಲ್ಲಿ ಗಾಂಧಿಜಿಯವರು ಮಂಗಳೂರು ಮತ್ತು ಬೆಂಗಳೂರಿಗೆ ಭೇಟಿ ನೀಡಿ ರಾಜಕೀಯ ಸಮ್ಮೇಳನಗಳಲ್ಲಿ ಪಾಲ್ಗೊಂಡರು. ರಾಷ್ಟ್ರೀಯ ಮುಖಂಡರ ಈ ಭೇಟಿ ಕರ್ನಾಟಕದ ಜನತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಹೆಚ್ಚು ಹೆಚ್ಚು ಭಾಗವಹಿಸಲು ಪ್ರೇರಣೆ ನೀಡಿತು".[೨]

"ಉಪ್ಪಿನ ಮೇಲೆ ಬ್ರಿಟಿಷರು ತೆರಿಗೆ ವಿಧಿಸಿದ್ದರಿಂದ ಮಹಾತ್ಮಗಾಂಧಿ ಮತ್ತು ಸಾಬರಮತಿ ಆಶ್ರಮವಾಗಿ ೭೯ ಸದಸ್ಯರನ್ನಷ್ಟೆ ಕರೆದುಕೊಂಡು ಸಬರ್ಮತೆ ಆಶ್ರಮದಿಂದ ೨೦೦ ಮೈಲು ದೂರದಲ್ಲಿ ಸಮುದ್ರ ತೀರದಲ್ಲಿರುವ ದಂಡಿ ಎಂಬ ಹಳ್ಳಿಗೆ ಕಾಲುನಡಿಗೆಯಲ್ಲಿ ೨೪ ದಿನಗಳೇ ಬೇಕಾದವು. "ಕರ್ನಾಟಕದಲ್ಲಿ ಈ ಸತ್ಯಾಗ್ರಹ ತೀವ್ರ ಸ್ವರೂಪವನ್ನು ತಾಳಿತು. ಅಂಕೋಲ ಮಂಗಳೂರು, ಮಲ್ಪೆ; ಉಡುಪಿ, ಕುಂದಾಪುರ ಇವೆ ಮೊದಲಾದ ಸ್ಥಳಗಳಲ್ಲಿ ಬೃಹತ್ ಹತ್ತು ಸಾವಿರ ಜನರ ಸಮ್ಮುಖದಲ್ಲಿ ಎಂ.ಪಿ. ನಾಡಕರ್ಣಿ ಹಾಗೂ ಇತರ ಮುಂದಾಳುಗಳಿಂದ ಉಪ್ಪಿನ ಸತ್ಯಾಗ್ರಹ ಪ್ರಾರಂಭವಾಯಿತು. ಇದರಿಂದ ೬೦ ಸಾವಿರ ಜನರು ಸೆರಮನೆಯನ್ನು ಸೇರಿದರು. ದೇಶದ ನಾನಾ ಭಾಗಗಳಿಂದ ಈ ಚಳುವಳಿ ನಿಲ್ಲಕೂಡದೆಂದು ಪ್ರತಿಭಟಿಸಿದರು. ಈ ಮಧ್ಯೆ ಕಾಂಗ್ರೆಸ್ ಕಾರ್ಯಸಮಿತಿಯು ಸಭೆ ಸೇರಿ ಬ್ರಿಟಿಷ ಸರಕಾರವು ಗಾಂಧಿ ಆರ್ಯವಿನ ಒಪ್ಪದಂತೆ ನಡೆಯದಿದ್ದರೆ ಕೂಡಲೆ ಕಾಯ್ದೆ ಭಂಗ ಮತ್ತು ಕರನಿರಾಕರಣೆ ಚಳವಳಿಯನ್ನು ಆರಂಭಿಸಿದರು. ರಾಷ್ಟ್ರದಲ್ಲಿ ೧೯೩೦ರಲ್ಲಿ ಪುನಃ ಪ್ರಚಂಡ ಆಂದೋಲನ ಪ್ರಾರಂಭವಾಯಿತು. ಉತ್ತರ ಕನ್ನಡದ ನಾನಾ ಸ್ಥಳಗಳಲ್ಲಿ ರೈತರು ಕಂದಾಯ ಕೊಡದೇ 'ಕರನಿರಾಕರಣೆ' ಚಳುವಳಿಯನ್ನು ನಡೆಸಿದರು. ಅನೇಕ ಮಂದಿ ಗ್ರಾಮಾಧಿಕಾರಿಗಳು ತಮ್ಮ ಪದವಿಗೆ ರಾಜೀನಾಮೆ ಕೊಟ್ಟು ಪ್ರತಿಭಟನೆಗಳಲ್ಲಿ ಭಾಗಿಯಾದರು".[೩]

"ದಿನದಿಂದ ದಿನಕ್ಕೆ ನಿಲ್ಲದ ಹರತಾಳ, ಲಾಠಿ ಪ್ರವಾಹಗಳು ಇತ್ಯಾದಿ ಒಂದಿಲ್ಲೊಂದು ನಡೆದೇ ಇದ್ದವು. ಇದರಿಂದ ಚಿಂತಾಕ್ರಾಂತರಾದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ತುರ್ತು ಅಧಿವೇಶನವನ್ನು ೧೯೪೨ ಆಗಸ್ಟ್ ೮ ರಂದು ಮುಂಬಯಿಯಲ್ಲಿ ಸಭೆ ಸೇರಿ ಇತಿಹಾಸ ಪ್ರಸಿದ್ಧವಾದ "ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಗೊತ್ತುವಳಿಯನ್ನು ಅಂಗೀಕರಿಸಿತು. 'ಮಾಡು ಇಲ್ಲವೇ ಮಡಿ' ಎಂಬ ಸ್ಫೂರ್ತಿದಾಯಕ ಸಂದೇಶವನ್ನು ಗಾಂಧೀಜಿ ಭಾರತದ ಜನತೆಗೆ ನೀಡಿದರು. ಕರ್ನಾಟಕದ ಜನತೆ ಈ ಚಳುವಳಿಯಲ್ಲಿ ಆ ಮೋಕ್ಷ ಪಾತ್ರ ವಹಿಸಿತು.

ವಿದ್ಯಾರ್ಥಿಗಳು ಸಾವಿರಾರು ಸಂಖ್ಯೆಯಲ್ಲಿ ಶಾಲಾ ಕಾಲೇಜುಗಳನ್ನು ತೊರೆದು ಈ ಚಳುವಳಿಯನ್ನು ಪಾಲ್ಗೊಂಡರು. ನಮ್ಮ ಸ್ವಾತಂತ್ರ್ಯ ಹೋರಾಟದ ಪಥದಲ್ಲಿ ಕೊನೆಯ ಮಟ್ಟ ಚಲೇಜಾವ್ ಚಳುವಳಿ "ಗಾಂಧೀಜಿ ಅಗಸ್ಟ್ ೮ (೧೯೪೨)ರ ರಾತ್ರಿ ಚಲೇಜಾವಗೆ ಕರೆಕೊಟ್ಟು ಆಗಸ್ಟ್ ೯ ರಿಂದ ದೇಶದ ಮುಂಬೈ, ದಿಲ್ಲಿ, ಕಲ್ಕತ್ತಾ, ಅಹಮ್ಮಬಾದ್, ಬೆಂಗಳೂರು, ಹುಬ್ಬಳ್ಳಿ, ಬೆಳಗಾವಿ, ಪುಣೆ, ವಾರಣಾಸಿ, ಪಾಟ್ನಾ ಜನ ಉಗ್ರವಾಗಿ ಪ್ರತಿಭಟನೆ ಮಾಡಿದರು".[೨೩]

ಸರಕಾರ ನಡೆಯದಂತೆ ಮಾಡಲು ಬುಡಮೇಲು, ತಂತಿ ಸಂಪರ್ಕ, ರೈಲು ಸಂಪರ್ಕ ಭಂಗ, ರೈಲು ನಿಲ್ದಾಣ, ಸರಕಾರಿ ಕಛೇರಿಗಳ ಭಸ್ಮ ಆರಂಭಿಸಿದರು.

ಕರ್ನಾಟಕದ ಅನೇಕ ಭಾಗಗಳಲ್ಲಿ ಸಭೆ, ಮೆರವಣಿಗೆಗಳ ಮೇಲೆ ಪೋಲೀಸರು ಗುಂಡು ಹಾರಿಸಿದರು. ಗ್ರಾಮಾಂತರ ಪ್ರದೇಶದಲ್ಲಿ ಈ ಅಗಸ್ಟ್ ಕ್ರಾಂತಿ ತೀವ್ರ ಸ್ವರೂಪ ತಾಳಿತು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಈ ಸೂರಗ್ರಾಮದ ಜನರು ಈ ಚಳುವಳಿಯಲ್ಲಿ ಪ್ರದರ್ಶಿಸಿದ ತ್ಯಾಗ, ಸಾಹಸ, ದೇಶಾಭಿಮಾನ ಕರ್ನಾಟಕದ ಇತಿಹಾಸದಲ್ಲಿಯೇ ಚಿರಸ್ಮರಣೀಯವಾಗಿದೆ. ಈ ಗ್ರಾಮದ ಜನರು ಸರಕಾರದ ವಿರುದ್ಧ ಬಂಡಾಯವೆದ್ದು ತಾವು ಸ್ವಾತಂತ್ರ್ಯರಾದವೆಂದು ಘೋಷಿಸಿಕೊಂಡರು. ಜಯಪ್ರಕಾಶ ನಾರಾಯಣ, ಅಚ್ಯುತ ಪಟವರ್ಧನ, ಸುಚೇತಾ ಕೃಪಲಾನಿ ಲೋಹಿಯಾ ಅರುಣಾ ಅಸಫ್, ಅಲಿ, ದಿವಾಕರ ಮುಂತಾದ ನಾಯಕರು ಭೂಗತರಾಗಿ ಚಳುವಳಿ ನಡೆಸಿದರು.

"ಕೊನೆಗೂ ಕಾಂಗ್ರೆಸ್ಸಿನ ಭಾರತೀಯರ ಕನಸು ನನಸಾಯಿತು. ೧೯೪೭ ಆಗಸ್ಟ್ ೧೪-೧೫ರ ಮಧ್ಯರಾತ್ರಿ ಸ್ವತಂತ್ರ ಭಾರತದ ತ್ರಿವರ್ಣ ಧ್ವಜ ಕೆಂಪುಕೋಟೆಯ ಮೇಲೆ ಹಾರಾಡಿತು. ಶತಮಾನಗಳ ಶೋಷಣೆಗೆ ಪೂರ್ಣ ವಿರಾಮ ಬಿದ್ದಿತು. ಸ್ವತಂತ್ರ ಸಾರ್ವಭೌಮ ಪ್ರಜಾಸತ್ತಾತ್ಮಕ ಭಾರತ ರಾಷ್ಟ್ರ ತಲೆಎತ್ತಿ ನಿಂತಿತು".[೨೪]

ಹೀಗೆ ಕಳೆದುಕೊಂಡ ಸ್ವಾತಂತ್ರ್ಯವನ್ನು ಪುನಃ ಪಡೆಯಬೇಕಾದರೆ ಎರಡೂವರೆ ಶತಮಾನಗಳಿಗೂ ಮಿಕ್ಕಿದವು. ೧೮೮೫ರಿಂದ ೧೯೪೭ರವರೆಗೆ ಸುದೀರ್ಘದ ಹೋರಾಟಕ್ಕೆ ರಾಷ್ಟ್ರಪ್ರೇಮಿಗಳ ಸ್ವಾತಂತ್ರ್ಯ ವೀರರ ರಾಷ್ಟ್ರದ ಪ್ರತಿಯೊಬ್ಬ ನಾಗರಿಕನ ಅಳಿಲು ಸೇವೆಯು ನಿಸ್ವಾರ್ಥ ಪರಸೇವೆ, ತ್ಯಾಗ, ಬಲಿದಾನಗಳ ಪ್ರತೀಕವಾಗಿ ಶ್ರೀ ಸಾಮಾನ್ಯನ ಹೋರಾಟ ಅವನ ಬೆವರಿನ ಕಣ್ಣೀರು, ದಮನಿ ದಮನಿಯಲ್ಲಿ ಪುಟಿದ ಕಾರಂಜಿಯಂತೆ ನಭಕ್ಕೆ ಹಾರಿದ ರಕ್ತದಿಂದ ಧಾರೆ ಹರಿದ ತ್ಯಾಗದ ಹೋರಾಟ ಮಹಿಳೆಯರ ಪಾತ್ರ ಅಗ್ರಮಾನ್ಯವಾಗಿದೆ. ಪ್ರತಿಯೊಬ್ಬ ವ್ಯಕ್ತಿಯು ತನಗಾಗಿ ತನ್ನ ನಾಡಿಗಾಗಿ ಶ್ರಮಿಸಲೇಬೇಕಾದಂತಹ ರೀತಿಯಿದು. ಇದಕ್ಕಾಗಿ ನಮ್ಮ ಪ್ರಾಣವನ್ನೇ ಕೊಟ್ಟರೂ ದೇಶದ ಪ್ರೇಮ ಅಳಿಸಲಾಗದು.

ನಮ್ಮ ಜನಪದರಿಗೆ ಓದು ಬರಹ ಗೊತ್ತಿರದೇ ಇದ್ದರೂ ಅವರು ಕಸದಿಂದ ರಸವನ್ನು ತೆಗೆಯುವಂತಹ ಬುದ್ಧಿಜೀವಿಗಳು ತಮ್ಮ ಜೀವನದಲ್ಲಾದ ಘಟನೆಗಳನ್ನು ಮುಚ್ಚಿಡದೇ ಅದನ್ನು

ಇತರರ ಮುಂದೆ ಹೇಳಿ ತಾವುಗಳು ಹಂಚಿಕೊಳ್ಳುವ ಸ್ವಭಾವ ಅವರದು, ಅಂತೆಯೇ ನಮ್ಮ ದೇಶ ಪರಕೀಯರ ಸ್ವತ್ತಿನಲ್ಲಿದ್ದಾಗ ಅವರು ಅದನ್ನು ಕಣ್ಣಿನಿಂದ ನೋಡಿ ಅದನ್ನು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಬಿಡಲಿಲ್ಲ. ಅದನ್ನು ಅಲ್ಲಿಯೇ ಹಿಡಿದಿಟ್ಟುಕೊಂಡು ತಮ್ಮದೇ ವಿವೇಕದಿಂದ ಅವರು ಸ್ವಾತಂತ್ರ್ಯವೀರರು ಯಾವ ರೀತಿ ಯುದ್ಧ ಮಾಡುವರು. ಅವರ ಗುಣ ಸ್ವಭಾವ ಎಲ್ಲವನ್ನು ನವಿರಾಗಿ ಚಿತ್ರಿಸುತ್ತಾ ತಮ್ಮದೇ ಆದ ಕಂಠದಲ್ಲಿ ಅದನ್ನು ಹಾಡುತ್ತ ಹೋಗುವರು. ಅದೇ ಒಂದು ಮಹಾಕವಿ ಹಾಡಿನಲ್ಲಿ ಉದಯವಾದಂತೆ ಇವರಲ್ಲಿಯೂ ಕೂಡ ಅವರನ್ನು ಮೀರಿಸುವಂತಹ ಕಥೆಯನ್ನು ಬರೆಯುತ್ತಿದ್ದರು. ಅಂಥ ಹಾಡುಗಳೇ ಈಗ ನಮಗೆ ಸಿಕ್ಕುತ್ತವೆ. ಅವರಲ್ಲಿಯ ದೇಶಾಭಿಮಾನ, ರಾಷ್ಟ್ರೀಯತೆ, ದೇಶದ ಬಗ್ಗೆ ಅವರ ಕಲ್ಪನೆ, ಅಭಿಮಾನ ಎಷ್ಟಿತ್ತೆಂಬುದು ಈ ಹಾಡುಗಳನ್ನು ನೋಡಿ ವಿಶ್ಲೇಷಿಸಿದಾಗ ಅದು ನಮಗೆ ಅರಿವಾಗುತ್ತದೆ. ರಾಷ್ಟ್ರೀಯ ಭಾವೈಕ್ಯವನ್ನು ಸಾರುವ ಮಹತ್ಸಾಧನೆಯನ್ನು ಜನಪದ ಕವಿಗಳ ಹಿರಿಪಾಲು ಸಲ್ಲುತ್ತದೆ.

ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ನರಗುಂದ ಬಾಬಾಸಾಹೇಬ, ಮುಂಡರಗಿ ಭೀಮರಾಯ, ಸುರಪುರದ ರಾಜ ವೆಂಕಟಪ್ಪನಾಯಕ, ಹಲಗಲಿಬೇಡರು ಮುಂತಾದವರು ಕಿತ್ತೂರು ಚೆನ್ನಮ್ಮಳಿಗೆ 'ಸ್ವಾತಂತ್ರ್ಯದ ಬೆಳ್ಳಿ ಚುಕ್ಕಿ' ಎಂದು ಲಾವಣಿಕಾರರು ಗುರುತಿಸುತ್ತಾರೆ. ಅಷ್ಟೇ ಅಲ್ಲದೇ ಬಹುಪಾಲು ಇತಿಹಾಸಕಾರರು ಅವಳನ್ನು ಸ್ವಾತಂತ್ರ್ಯ ವೀರವನಿತೆ ಎಂದೆಲ್ಲ ಘೋಷಿಸಿ ಸ್ವಾತಂತ್ರ್ಯ ವೀರಗೀತೆಗಳಲ್ಲಿಯೇ ಸೇರಿಸಿಕೊಂಡಿದ್ದಾರೆ. ಎಲ್ಲೋ ಒಬ್ಬರು ಇಲ್ಲೊಬ್ಬರು ಐತಿಹಾಸಿಕ ವೀರಗೀತೆಗಳಲ್ಲಿಯೂ ಬರೆದು ಒಳಗಿನ ಅದರ ವಿಷಯವು ಸ್ವಾತಂತ್ರ್ಯದಂಥ ವಿಷಯಕ್ಕೆ ಬಂದು ನಿಲ್ಲುತ್ತದೆ. ಅದಕ್ಕಾಗಿ ನಾನು ಅವರನ್ನು ಸ್ವಾತಂತ್ರ್ಯ ವೀರಗೀತೆಗಳಲ್ಲಿಯೇ ಸೇರಿಸಿದ್ದೇನೆ. ಈಗಾಗಲೇ ನಾನು ಈ ರಾಜಮನೆತನದ ಚರಿತ್ರೆಯನ್ನು ಗುರುತಿಸಿರುವುದರಿಂದ ನಾನು ಸಂಗ್ರಹಿಸಿದ ಮತ್ತು ಕೆಲವು ಪುಸ್ತಕಗಳಿಂದ ತೆಗೆದುಕೊಂಡ ಹಾಡುಗಳನ್ನು ಇಲ್ಲಿ ಸ್ವಾತಂತ್ರ್ಯದ ನೆಲೆಯ ಅಡಿಯಲ್ಲಿ ವಿವರಿಸಿದ್ದೇನೆ.

## ಲಾವಣಿಯಲ್ಲಿ ಸ್ವಾತಂತ್ರ್ಯದ ನೆಲೆಯ ಪ್ರತಿಭಟನೆಗಳು

### ೧. ವೀರರಾಣಿ ಕಿತ್ತೂರು ಚೆನ್ನಮ್ಮ (ಕ್ರಿಶ. ೧೮೨೪)

ಜಾನಪದ ಸಾಹಿತ್ಯದಲ್ಲಿ ಚೆನ್ನಮ್ಮಳನ್ನು ಕುರಿತು ಹಾಡುಗಳು ಸಾಕಷ್ಟು ಇವೆ. ಅವುಗಳಲ್ಲಿ ನಾನು ಮೂರು ಹಾಡುಗಳನ್ನು ತೆಗೆದುಕೊಳ್ಳಲಾಗಿದೆ.

ಮಲ್ಲಸರ್ಜನು ಸುಖ ಸಂತೋಷದಿಂದ ರಾಜ್ಯವನ್ನು ಆಳುವಾಗ ಅದನ್ನು ಸಹಿಸದ ಬ್ರಿಟಿಷರು ಅವನನ್ನು ಪುಣೆಯ ಜೈಲಿನಲ್ಲಿ ಹಾಕುತ್ತಾರೆ. ಆತ ಕಿತ್ತೂರನ್ನು ನೆನೆದು ರೋಗ ಉಂಟಾಗುತ್ತದೆ. ಆಗ ಕ್ಷಯರೋಗ ಪೀಡಿತನಾಗಿ ಕಿತ್ತೂರನ್ನು ಕಾಣದೇ ನಡುವಿನ ಹಾದಿಯಲ್ಲಿ ಮರಣ ಹೊಂದುತ್ತಾನೆ. ಆತನು ತೀರಿಕೊಂಡ ನಂತರ ತನ್ನ ದೇಶ ಮುಂದುವರಿಯಲೆಂದು

ಚೆನ್ನಮ್ಮನು ಒಬ್ಬ ಮಗನನ್ನು ದತ್ತಕ್ಕೆ ತೆಗೆದುಕೊಳ್ಳುತ್ತಾಳೆ. ತಾನೇ, ಚೆನ್ನಮ್ಮನು ರಾಜ್ಯಭಾರವನ್ನು ವಹಿಸಿಕೊಂಡಳು. ಇದು ಬ್ರಿಟಿಷರಿಗೆ ಮನಸ್ಸಿಗೆ ಬರಲಿಲ್ಲ. ಕಿತ್ತೂರಿನವರೇ ಥ್ಯಾಕರೆಗೆ ಪಿತೂರಿ ಮಾಡಿ ಒಳಸಂಚು ನಡೆಸುತ್ತಾರೆ. ಆಗ ಥ್ಯಾಕರೆ ಕಿತ್ತೂರಿಗೆ ಬಂದು -

"ಅದ ಕಂಡು ಸಾಯ್ಬ ಕೋಪವ ತಾಳುತೈದಾನು
ಆದಕ್ಕಾರಪ್ಪಣೆ ಕೊಟ್ಟರೆಂದು | ಮಾ
ಇದಿರೋಳಿರುವಂಥ ಬಲ್ಲಾಳು ಮುರಿದಾವು
ಸದರ ಬಿಟ್ಟಳಿಯೆಂದು ಸಾಯ್ಬ ನುಡಿದ"

ದತ್ತಕ್ಕೆ ತೆಗೆದುಕೊಳ್ಳಲಿಕ್ಕೆ ನಿನಗೆ ಯಾರು ಅಪ್ಪಣೆ ಕೊಟ್ಟರು. ನಿನ್ನ ರಾಜ್ಯವನ್ನೇ ಹಾಳು ಮಾಡುತ್ತೇನೆ. ಸುಮ್ಮನೆ ಎಲ್ಲ ಸಂಪತ್ತನ್ನು ಬಿಟ್ಟು ಕೊಡು ಎನ್ನುತ್ತ ನಿನ್ನ ಗಂಡನೂ ಹೀಗೆ ಅಂದನು. ಅವನನ್ನು ಕೈಲಾಸಕ್ಕೆ ಕಳಿಸಿದೆವು ಎಂದಾಗ, ಇದು ನಮ್ಮ ರಾಜ್ಯ, ನಮ್ಮ ರಾಜ್ಯಕ್ಕೆ ನೀನೆ ಇಲ್ಲಿ ಕಾಲಿಟ್ಟು ನಮಗೆ ಎದುರು ಮಾತಾಡುತ್ತಿಯಾ ಧಕ್ಕೆಯನ್ನು ತಿನ್ನಬೇಡ ಹೊರಡು ಎನ್ನುತ್ತಾಳೆ. ಆಗ ಚೆನ್ನಮ್ಮನಿಗೂ ಥ್ಯಾಕರೆಗೂ ಯುದ್ಧ ನಡೆಯುತ್ತದೆ. ಒಳಬಾಗಿಲನ್ನು ಹಾಕಿ ಸೆಟೆದುತ್ತಾಳೆ. ಹೊರಗಡೆ ಅವನು ಸೈನ್ಯವನ್ನು ಬಿಟ್ಟಿರುತ್ತಾನೆ. ಒಮ್ಮಿಂದೊಮ್ಮೆಲೆ ಚೆನ್ನಮ್ಮನ ಸೈನ್ಯವು "ಮಗಿ ಮಳೆಯಂತ ಗುಂಡು ಹಾರುತ್ತಿರೆ ಮದ್ದಿನ ಹೊಗೆ ಮುಸುಕಿ ಕಣ್ಣ ಮುಂದೆ" ಎಂದು ಮಳೆಯ ಬಗ್ಗೆ ಉದಾಹರಣೆಯನ್ನು ಕವಿ ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ. ಕಿತ್ತೂರಿನ ಸೈನಿಕರು ಬಂಧೂಕದ ಗುಂಡುಗಳು ಬ್ರಿಟಿಷ್ ಸೈನ್ಯಕ್ಕೆ ತಾಗಿ ಕಣ್ಣು ಕಾಣದಂತೆ ಒಗೆ ಆವರಿಸಿತು. ಆಗ ಥ್ಯಾಕರೆ ಸಾಹೇಬ -

"ಮಿಗಿಲಾದ ಥ್ಯಾಕರೆ ಸಾಯ್ಬತಾ ಮಡಿದಾನು
ಸಿಗಿಲಾಗಿ ಉಳಿದವರು ಕೈಸೆರೆಯಃ ಮಾ
ನಗೆಯಲ್ಲಿ ನಾಲ್ಕು ದಿಕ್ಕಿನ ದಂಡು ಮುರಿದು
ಹೆಗಲ ಮ್ಯಾಲಿನ ಕೋವಿ ಒಗೆದೋಡಿತು"

ಥ್ಯಾಕರೆಗೆ ಗುಂಡು ತಾಗಿ ಸತ್ತು ಬೀಳುತ್ತಾನೆ. ಉಳಿದವರೆಲ್ಲರೂ ದಿಕ್ಕುಪಾಲಾಗಿ ಓಡಿ ಹೋಗುವರು. ಥ್ಯಾಕರೆ ಸಾಹೇಬ ಸತ್ತ ಸುದ್ದಿ ಧಾರವಾಡಕ್ಕೆ ಮುಟ್ಟಿತು. ಅವರು ನಮ್ಮದು ಎಲ್ಲ ವ್ಯರ್ಥವಾಯಿತೆಂದು ವಿಲಾಯ್ತಿಗೆ ಉತ್ತರವನ್ನು ಬರೆಯುತ್ತಾರೆ.

ಇತ್ತ ಕಡೆ ಚೆನ್ನಮ್ಮ ಬ್ರಿಟಿಷರ ಸೈನ್ಯವು ಮುತ್ತಿಗೆ ಹಾಕುತ್ತದೆ. ಎಲ್ಲರೂ ಯುದ್ಧಕ್ಕೆ ಸಿದ್ಧರಾಗಿರೆಂದು ಹೇಳುತ್ತಾ ಇದರಲ್ಲಿ ನಾನು ಉಳಿಯುವುದಿಲ್ಲ. ಮದ್ದಿನ ಕೋಣೆಗೆ ಹೋಗಿ ನಾನೇ ಸತ್ತು ಬಿಡುತ್ತೇನೆ ಎಂದು ದುಃಖ ಮಾಡಿಕೊಂಡಾಗ ಈ ಮಾತನ್ನು ಕೇಳಿ ಸೈನಿಕರು ನಮ್ಮೆಲ್ಲರ ತಲೆಗಳು ರಣರಂಗದಲ್ಲಿ ಬೀಳಲಿ, ಆದರೆ ನಿನ್ನನ್ನು ಮಾತ್ರ ನಾವು ಕಾಪಾಡುತ್ತೇವೆ. ಅದಕ್ಕಾಗಿ ಚಿಂತೆಯನ್ನು ಮಾಡಿದಿರಿ ಎನ್ನುತ್ತ ಸೈನಿಕರು -

"ಕಡೆಗೂ ನಿಮ್ಮನ್ನವನುಂಡು ಇಂದಿಗೆ ನಾವು
ಬಿಡಬಲ್ಲವೇ ಸುಮ್ಮನಿರು ಎಂದು | ಮಾ
ತೊಡೆಯ ಚಪ್ಪರಿಸಿ ಮೀಸೆಯ ತಿದ್ದಿ ಮುಂಗೈಯ
ಕಡಿವ್ರತ ಮಾತನಾಡಿದರಿನ್ನು"

ಎನ್ನುತ್ತ ನಮಗೆ ಮಡದಿ ಮಕ್ಕಳ ಮೇಲೆ ಆಸೆಯಿಲ್ಲ ಎಂದು ಹೇಳುತ್ತಾರೆ. ಅವರ ಈ ದಿಟ್ಟವಾದ ಮಾತನ್ನು ಕೇಳಿ ಮನದಲ್ಲಿ ಸಂತೋಷದಿಂದ ಹಿಗ್ಗುತ್ತಾಗಾಡಿ, ಕುದುರೆ, ಜನ, ಸೈನ್ಯ ಇರುವಂಥದ್ದನ್ನು ನೋಡಬೇಕು. ಅವರೆಲ್ಲರನ್ನು ಕರೆಸಿರಿ ಎಂದು ಹೇಳಿದಾಗ ಹದಿನಾರು ಸಾವಿರದಂಡು ಕಾಳಿ, ಕಣಿಯು ನಗಾರಿ ನಿಸ್ಸಾಳ, ಎತ್ತರದ ಧ್ವನಿಯಲ್ಲಿ ಬ್ರಿಟಿಷರಿಗೆ ಆರ್ಭಟಿಸುತ್ತಾ ನಾಳೆ ಬರುವ ಮರಣವು ನಮಗೆ ಈಗಾಗಲೇ ಬರಲಿ ಎನ್ನುತ್ತ ಪೋಳ ಸಾಸಿರ ದಂಡುಪುರದಲ್ಲಿ ತಿರುಗುತ್ತಿರಲು ವೈರಿಗಳ ಬರವನ್ನೇ ಕಾಯುತ್ತಿದ್ದರು.

ಆಗ ಬ್ರಿಟಿಷ ಸೈನ್ಯವು ಕುಣಿಯುತ್ತಾ ಜಗಳ ತೆಗೆಯಬೇಕೆಂದು ಧಾರವಾಡಕ್ಕೆ ಬರುತ್ತದೆ. ಅವರೆಲ್ಲರಿಗೂ ದಂಡಿಗೆ ಹೋಗಿರಿ ಎಂದು ಗುಂಡಿಗೆ ಮದ್ದಿಗೆ ತೋಪಿಗೆ ಯಾವುದಕ್ಕೂ ಕಡಿಮೆ ಇಲ್ಲ. ನಾಳೆ ಝಂಡಾವನ್ನು ತೆಗೆದುಕೊಂಡು ಹೋಗಿ ನಿಲ್ಲಬೇಕು ಎನ್ನುತ್ತ ಮುಂಗಾರಿ ಸಿಡಿಲಿನ ಹಾಗೆ ೨೦೦ ಫಿರಂಗಿ ಚಕ್ಕಡಿಗಳನ್ನು ಇನ್ನೂರು ಆನೆ ನಡುವೆ ಕುದುರೆಯನ್ನು ಏರಿ ಯುದ್ಧವನ್ನು ಮಾಡುವರು. ಹಿಂದುಗಡೆಯಲ್ಲಿ ಪಾರಂಗೇರ ಹಾಗೆ ಚಾಪೌನ್ ಸಾಹೇಬ ದಂಡನ್ನು ಶೃಂಗರಿಸುತ್ತ ಮಂಗಳವಾರ ಸಾಯಂಕಾಲದ ವೇಳೆಯಲ್ಲಿ ಬೆಳದಿಂಗಳ ಬೆಳಕಿನಲ್ಲಿ ಹೋಗಿ ತಮ್ಮ ಸೈನ್ಯವನ್ನು ತಡೆದರು. ಒಂಬತ್ತು ಬಂಡೆಯ ಮೇಲೆ ನಗಾರಿಯನ್ನು ಹೇರಿ ಆನೆಗೆ ಅಂಬಾರಿಯನ್ನೇ ತಯಾರಿಸಿಕೊಂಡು ಯುದ್ಧಕ್ಕೆ ಬರುವನು. ಧಾರವಾಡದಿಂದ ಕಿತ್ತೂರಿಗೆ ಬರುವ ಸೈನ್ಯವನ್ನು ದೂರದಿಂದಲೇ ನೋಡಿ ಅವರು ಶಸ್ತ್ರಾಸ್ತ್ರಗಳನ್ನು ಹಿಡಿದು ಸಜ್ಜಾಗಿ ನಿಂತರು. ಆದರೆ ಇಲ್ಲಿಯು ದಂಡನ್ನು ತರಿಸುತ್ತಾನೆ. ಒಮ್ಮಲೇ ಎರಡು ನೂರು ತೋಪನ್ನು ಹೂಡುತ್ತಾನೆ. ಕೋಟೆಯನ್ನು ನೋಡಿ ಹೆದರಿ ಬಾರಿ ಶಸ್ತ್ರಗಳನ್ನು ತರಿಸಿ ರಾತ್ರಿ ಹಗಲೆನ್ನದೇ ಯುದ್ಧ ಮಾಡುತ್ತಿರುವಾಗ ಭೂಮಿಯೇ ನಡುಗ ಹತ್ತಿತು. ತೋಪಿನ ಅಬ್ಬರಕ್ಕೆ ಒತ್ತಡದಿಂದ ಗುಂಡು ಮದ್ದು ಒಮ್ಮೆಲೇ ಹಾರಲು ಕತ್ತರಿಸಿ ಹೊಡೇವು ಬೀಳುತ್ತಾ ಇರುವಾಗ ಒಳಗಿನ ದಂಡು ನಡುಗಲಾರಂಭಿಸಿತು. ಸೂತ್ರವೇ ಹರಿದ ಮೇಲೆ ದೊರೆದು ಯುದ್ಧವನ್ನು ಮಾಡಿದರು. ಬ್ರಿಟಿಷರ ವಿರುದ್ಧ ಹೋರಾಡದಾಗದೇ ಕೈಯಲ್ಲಿ ಹಿಡಿದಂತ ಕತ್ತಿಯನ್ನು ನೆಲಕ್ಕೊಗೆದು ತಡವ್ಯಾಕೆ ಠಾಣೇವು ಬೀಳುತ್ತದೆ. ಹೊಡೆಯುವ ಫಿರಂಗಿಯಿಂದ, ಅದು ರಭಸದಿಂದ ಬಂದು ಗೋಡೆಗೆ ಹಾಯ್ದರೆ ಅದು ಸಡಿಲಾದಂತೆ ಜನರು ಕಾಣದೇ ಇಂಗ್ರೇಜಿ ದಳ ಮುಂದಕ್ಕೆ ಹೋಯಿತು. ಆಗ -

"ತೆಕ್ಕೆ ಹೊಳವಚಿ ಕೊಂದನು ನೂರು ಮಂದಿಯ
ಮಿಕ್ಕಿ ಬಂದವರನ್ನು ಕಡಿವುತ | ಮಾ

ಜಕ್ಕನ ಜರಿದು ಚಾಪಾಲಿ ಸಾಯ್ಬ ಮುಂದೆ
ಇಕ್ಕದೆ ಹೆಜ್ಜೆಯ ನಿಂತು ನೋಡಿದ"

ಹೀಗೆ ನೋಡುತ್ತಲೇ ವೈರಿಬಲವನ್ನು ಮುರಿಯಬೇಕೆಂದು ದಂಡನ್ನು ಸುತ್ತುಗಟ್ಟಿ ನಾಲ್ಕು ದಿಕ್ಕಿನಿಂದ ಗುಂಡು ಬೀಳಲು ತಲ್ಲಿಣಿಸುತ್ತ ನಡೆಯುತ್ತಾರೆ. ಮುನ್ನುಗ್ಗಿ ಕಿತ್ತೂರಿನ ಸೈನ್ಯವನ್ನೆಲ್ಲಾ ನಾಶ ಮಾಡಿ ಬಿಡುತ್ತಾರೆ.

ದೇವಸ್ಥಾನದಲ್ಲಿರುವ ಚನ್ನಮ್ಮನನ್ನು ಮುಂದಕ್ಕೆ ಬಾ ಎಂದು ಕರೆದಾಗ ಅವಳು -

"ಎಂದ ಮಾತನು ಕೇಳಿ ಆ ಜಾಣಾ ಪೌರುಷದಿಂದ
ಛಂದಿ ಸಾಯ್ಬನ ಇದರೀಗೆ | ಮಾ
ನಂದಂಥ ಕಾಂತನ ಕರುಣದಿ ನೀ ಎನ್ನ
ತಂದೆಯ ಸರಿ ಎಂದು ಶಿರಬಾಗಲು"

"ಸೀಮೆಯ ಎಲ್ಲವ ಜಾಣಿ ಎಂಭೋಗ ಬರಕೊಟ್ಟ
ನೇಮದಿ ಅಪ್ಪಣಿಗೊಂಡಾಳು | ಮಾ
ಗ್ರಾಮದೊಳಿರುವಂಥ ಬದುಕೆಲ್ಲ ಒಪ್ಪಿಸಿ
ತಾ ಮಾತ್ರ ಹೊಂಗಲಕೆ ನಡೆದಾಳು"

ಸರ್ವ ಆಸ್ತಿಪಾಸ್ತಿ ಒಡೆವೆಗಿಡವೇ ಧನಧಾನ್ಯಗಳೆಲ್ಲವನ್ನು ಚಾಪ್ಲೆನ್ ಸಾಹೇಬನಿಗೆ ಒಪ್ಪಿಸಿ ತಾನು ಬೈಲ ಹೊಂಗಲಿಗೆ ಹೋಗುತ್ತಾಳೆ. ಜೈಲಿನಲ್ಲಿದ್ದಾಗ ತಾನು ಮಾತ್ರ ಧೃತಗೆಡದೇ ಕಿತ್ತೂರನಾಡಿಗಾಗಿ ದೇವರಲ್ಲಿ ಪ್ರಾರ್ಥಿಸುತ್ತಾ ಸದಾ ಧ್ಯಾನಾಸಕ್ತಳಾಗಿ ಚೆನ್ನಮ್ಮಳು ತನ್ನ ೧೫೫ನೇ ವಯಸ್ಸಿನಲ್ಲಿ ೧೮೨೯ರಂದು ಶನಿವಾರ ಫೆಬ್ರವರಿ ತಿಂಗಳಲ್ಲಿ ೨ನೇ ತಾರೀಖಿನ ದಿನದಂದು ಲಿಂಗೈಕ್ಯಳಾದಳು.

ಹೀಗೆ ವೀರವನಿತೆಯಾಗಿ ದಿಟ್ಟತನದ ವೀರತನವನ್ನು ತೋರಿಸುತ್ತಾಳೆ ಎಂಬ ಅಂಶವನ್ನು ವೀರಗೀತೆಯನ್ನಾಗಿಸಿ ಜನಪದ ಕವಿಗಳು ಚೆನ್ನಮ್ಮನ ಶೌರ್ಯವನ್ನು ಅಮರಗೊಳಿಸಿದ್ದಾರೆ.

**೨. ಸಂಗೊಳ್ಳಿ ರಾಯಣ್ಣನ ದಂಗೆ (ಕ್ರಿ.ಶ. ೧೮೨೯)**

ದೇಶಕ್ಕಾಗಿ ತನ್ನ ಜೀವನವನ್ನೇ ಬಲಿಯಾಗಿ ಕೊಟ್ಟ ಮಹಾಮಹಾವೀರರಲ್ಲಿ ಸಂಗೊಳ್ಳಿ ರಾಯಣ್ಣನು ಕೂಡ ಒಬ್ಬ. ಬ್ರಿಟಿಷರಿಂದ ಪದೇ ಪದೇ ಸುಲಿದು ತಿನ್ನುವಂತಹ ತೆರಿಗೆಗಳು ಬರಬರುತ್ತಾ ಹೆಚ್ಚಾಗುತ್ತ ಬಂದವು. ಜೀವನ ನಡೆಸುವುದೇ ದುಷ್ಕರವಾದಾಗ ತೆರಿಗೆಯನ್ನು ವಸೂಲಿ ಮಾಡುವುದೇ ಇವನ ಕೆಲಸವು. ಆದ್ದರಿಂದ ಜನರಲ್ಲಿ ಧಾರಾಕಾರವಾಗಿ ಹರಿಯುವ ಕಣ್ಣೀರನ್ನು ನೋಡಿ ಅಲ್ಲದೇ ಕುಲಕರ್ಣಿಯು ಹಳೆಯ ಸೇಡನ್ನು ತೆಗೆದುಕೊಂಡು ಇವರ ತಂದೆಯವರು ತೆರಿಗೆ ಕೊಡದಿದ್ದಕ್ಕೆ ಎಳೆದುಕೊಂಡು ಹೋಗಿ ಅವನನ್ನು ಬಗ್ಗಿ ನಿಲ್ಲಿಸಿ ತಲೆಯ ಮೇಲೊಂದು ರಜ ಗಾತ್ರದ ಕಲ್ಲನ್ನು ಹೇರಿ ನಿಲ್ಲಿಸಿದಾಗ ಯಾವ ಮನುಷ್ಯಗಾದರೂ ಅದನ್ನು

ನೋಡಿ ಹೇಗೆ ತಡೆದಾನು? ಹಾಗೆಯೇ ಇಲ್ಲಿ ರಾಯಣ್ಣನು ಕೂಡ ಅಂದಿನಿಂದ ಬ್ರಿಟಿಷರ ವಿರುದ್ಧ ಹೋರಾಡುತ್ತ ಐದು ವರ್ಷಗಳವರೆಗೆ ಸತತವಾಗಿ ಈತನನ್ನು ಕಣ್ಣು ರೆಪ್ಪೆ ಮುಚ್ಚದೇ ಹಗಲು ರಾತ್ರಿ ಹುಡುಕಿ ಹುಡುಕಿ ಬೇಸತ್ತು ಹೋದರು. ನಮ್ಮವರು ನಮಗೆ ಮುಳು ಎನ್ನುವ ಹಾಗೆ ನೇಗಿನಹಾಳದ ಯಂಕನಗೌಡರು, ಬೋದಾನಪುರದ ಲಿಂಗನಗೌಡರು ಬೂದಿ ಮುಚ್ಚಿದ ಕೆಂಡದ ಹಾಗೆ ಅವರು ತಮ್ಮ ಮಾತಿನ ಚಕಮಕಿಯಲ್ಲಿ ನಂಬಿಸಿ ಕಡೆಗೂ ಬ್ರಿಟಿಷರ ವಶ ಮಾಡಿ ಬಿಡುತ್ತಾರೆ. ನಂತರ ನಂದಗಡದಲ್ಲಿ ಗಲ್ಲಿಗೇರಿಸುತ್ತಾರೆ. ಐದು ವರ್ಷದಲ್ಲಿಯೇ ಇವೆಲ್ಲವು ಮುಗಿದು ಹೋಗಿ ಬಿಡುತ್ತವೆ. ಕೇವಲ ೩೫ ವರ್ಷ ವಯಸ್ಸಿನ ಈ ಯುವಕ ಅಂದು ಒಬ್ಬಂಟಿಗನಾಗಿ ಬ್ರಿಟಿಷರ ವಿರುದ್ಧ ವೈರುತ್ವವನ್ನು ಕಟ್ಟಿಕೊಂಡು ದೊಡ್ಡ ದಂಗೆ ಮಾಡಿ ತಾಯ್ನಾಡಿಗೆ ಆಗುತ್ತಿದ್ದ ಅನ್ಯಾಯವನ್ನು ಎಂದೂ ಯಾರೂ ತೀರಿಸಲಾಗದ ಋಣವನ್ನು ಈತ ತೀರಿಸಿ ಬಿಟ್ಟ. ಈತನು ಕಿತ್ತೂರ ಸಂಸ್ಥಾನದ ಮೊಮ್ಮಗನಲ್ಲ. ಒಬ್ಬ ದೊಡ್ಡ ಶ್ರೀಮಂತ ಮನೆತನದ ವ್ಯಕ್ತಿಯೂ ಅಲ್ಲ. ಊರಿನ ಓಲೇಕಾರಿಕೆಯನ್ನು ಮಾಡುತ್ತಾ ಕುಲಕರ್ಣಿ ಹೇಳಿದ ಕೆಲಸ ಮಾಡುವ ವೃತ್ತಿ ಇವನದು. ಇಂಥಾ ಒಬ್ಬ ವ್ಯಕ್ತಿ ಇಡೀ ದೇಶಕ್ಕೆನೇ ಹೆಸರುವಾಸಿಯಾದ ಜನರ ಮನದಲ್ಲಿ ಇನ್ನು ಅಚ್ಚಳಿಯದೆ ಉಳಿದು ನಿತ್ಯವೂ ಮನನ ಮಾಡಿಕೊಳ್ಳುವ ಹಾಗೆ ಮಾಡಿದ್ದಾನೆ.

ರಾಯಣ್ಣನ ಪೂರ್ಣ ಹೆಸರು ರಾಯಣ್ಣ ಭರಮಪ್ಪ ರೋಗಣ್ಣನವರ ಇವನು ಸಂಗೊಳ್ಳಿಯವನೇ ಆಗಿದ್ದು ಕಿತ್ತೂರ ದೇಸಾಯಿಯರ ಒಲೇಕಾರನಾಗಿದ್ದನು. ಈತ ವೃತ್ತಿಯಿಂದ ಓಲೇಕಾರನಾಗಿದ್ದಾನೋ ಅಥವಾ ಇವನ ಜಾತಿಯೇ ಓಲೇಕಾರವಾಗಿತ್ತೊ ಎಂಬುದರ ಬಗ್ಗೆ ಸಾಕಷ್ಟು ಗೊಂದಲವಿದೆ. ಸಂಗೊಳ್ಳಿ ರಾಯಣ್ಣ ಒಬ್ಬ ಕಿತ್ತೂರಿನ ಒಬ್ಬ ಬಡಪ್ರಜೆ. ಸಂಗೊಳ್ಳಿ ಗ್ರಾಮದ ತಳವಾರನಾಗುತ್ತಾನೆ. ರಾಯಣ್ಣನ ಪೂರ್ಣ ಹೆಸರು ರಾಯಪ್ಪ ರೋಗಣ್ಣವರ ಇವನು ಸಂಗೊಳ್ಳಿಯವನೇ ಆಗಿದ್ದು ಕಿತ್ತೂರ ದೇಸಾಯರ ಓಲೇಕಾರನಾಗಿದ್ದನು. ರಾಯಣ್ಣನು ರಾಜವಂಶಕ್ಕೆ ಸೇರಿದವನಲ್ಲ. ಶ್ರೀಮಂತವರ್ಗದವನು ಅಲ್ಲ. ಸಾಮಾನ್ಯ ಪ್ರಜೆ, ವಂಶಪಾರಂಪರ್ಯವಾಗಿ ಗ್ರಾಮದ ತಳವಾರಿಕೆ ಅವನ ವೃತ್ತಿಯಾಗಿತ್ತು.

ಇಲ್ಲಿ ಫ್ಲೀಟರು ಸಂಗ್ರಹಿಸಿದ ಲಾವಣಿಗಳು ಎಂಬಲ್ಲಿ ಸಂಗೊಳ್ಳಿ ರಾಯಣ್ಣನ ದಂಗೆ ಎಂಬ ಹಾಡನ್ನು ತೆಗೆದುಕೊಂಡು ವಿಶ್ಲೇಷಿಸಿದ್ದೇನೆ.

ಸಂಗೊಳ್ಳಿ ರಾಯಣ್ಣ ಒಬ್ಬ ಸಾಮಾನ್ಯ ಓಲೇಕಾರ ತೆರಿಗೆ ಅಧಿಕಾರಿಯಾಗಿ ಕಿತ್ತೂರ ದೇಸಾಯಿಯರ ಚಾರರರಲ್ಲೊಬ್ಬನಾಗಿದ್ದ. ಅವನ ಸಹೋದ್ಯೋಗಿಯಾಗಿದ ಕುಲಕರ್ಣಿ ಬಾಳಪ್ಪ ಸ್ವಭಾವತಃ ಮೃದು ಮನುಷ್ಯನಾದರೂ ಕೊನೆಗೆ ಒಬ್ಬ ಸೊಕ್ಕಿದ ಮನುಷನಾಗಿ ಪರಿಣಮಿಸಿದನು. ಆದರೂ ಕೂಡ ಅವನಿಗೆ ಏನೂ ಅನ್ನಲಾರದೇ ರಾಯಣ್ಣ ಹೊಂದಿಕೊಂಡಿದ್ದನು. ಆದರೆ ಸ್ವಭಾವತಃ ರಾಯಣ್ಣ ಸ್ವಾಭಿಮಾನದ ಮನುಷ್ಯ, ತನಗೇನಾದರೂ ತನ್ನ ವ್ಯಕ್ತಿತ್ವಕ್ಕೆ ಕುಂದು

ಬಂದರೆ ಅದನ್ನು ಸಹಿಸುವ ಪ್ರವೃತ್ತಿ ಆತನಲ್ಲಿರಲಿಲ್ಲ. ಹಾಗೊಂದು ಘಟನೆ ಕುಲಕರ್ಣಿ ಬಾಳಪ್ಪನ ಕೂಡ ನಡೆದು ಹೋಗುತ್ತದೆ. ಒಂದು ದಿನ ಇಬ್ಬರು ಕೂಡಿ ಸ್ನಾನಕ್ಕೆ ಹೋಗಿರುತ್ತಾರೆ. ಆಗ ಕುಲಕರ್ಣಿ ಬಾಳಪ್ಪ ರಾಯಣ್ಣನಿಗೆ "ಧೋತರ ಕಳತಾ ಅಂತ ಕೊಟ್ಟನವರ ಕೈಗಿ" ಎಂದು ಧೋತರ ತೊಳೆದುಕೊಡು ಎಂದು ರಾಯಣ್ಣನಿಗೆ ಹೇಳುತ್ತಾನೆ. ಮೊದಲೇ ಸ್ವಾಭಿಮಾನಿಯಾದ ರಾಯಣ್ಣ ಕೋಪವೇರಿ ಅದನ್ನು ಮುಟ್ಟುವುದಿಲ್ಲ ಎಂದು ದಿಬ್ಬವಾಣಿಯಿಂದ ಉತ್ತರಕೊಟ್ಟ, ಆಗ ಕುಲಕರ್ಣಿ ಬಾಳಪ್ಪ ಏನೊ ಎಷ್ಟು ನಿಗರಾಡಿತಿದಿ ಎಂದು ಬೈದನು. ಆಗ ರಾಯಣ್ಣ ಉರಿಯುವ ಕೆಂಡದಂತಾಗಿ ನಿನ್ನನ್ನು ಹೋಳಿ ಆಡುತ್ತೇನೆ ಎಂದು ತಿರುಗಿ ಹೊರಟುಹೋದ.

೧೮೨೯ರಲ್ಲಿ ಭೀಡಿಯಲ್ಲಿದ್ದ ಕಛೇರಿಯೊಂದನ್ನು ಸುಡುವುದರೊಂದಿಗೆ ತನ್ನ ಬಂಡಾಯವನ್ನು ಪ್ರಾರಂಭಿಸಿದನು. ಆಗ ಅವನ ಹತ್ತಿರ ಕೇವಲ ನೂರು ಜನ ಮಾತ್ರ ಅವನ ಅನುಯಾಯಿಗಳು ಇದ್ದರು. ತಾನು ಬ್ರಿಟಿಷ ದಾಖಲಾತಿ ಕಾಗದ ಪತ್ರಗಳನ್ನು ಲೂಟಿ ಮಾಡಲು ಇಲ್ಲವೇ ಸುಡಲು ಪಣ ತೊಟ್ಟಿದ್ದ. ಅದಕ್ಕಾಗಿ ಆತನಲ್ಲಿರುವ ಸೈನ್ಯ ಇದ್ದು ಕೇವಲ ಅಲ್ಪವೆಂದು ತಿಳಿದು ಅವನು ಸುರಪುರದ ರಾಜ ವೆಂಕಟಪ್ಪನಾಯಕನ ಹತ್ತಿರ ಸೈನ್ಯಕ್ಕಾಗಿ ಮೊರೆ ಹೊಕ್ಕ ಆಗ ತನ್ನ ಪೌರುಷವೆಲ್ಲವನ್ನು ಅವನೆದುರಿಗೆ ಹೇಳುತ್ತಾನೆ. ಕೂಡಲೇ ಸುರಪುರದ ರಾಜವೆಂಕಟಪ್ಪನಾಯಕ ಅವರಿಗೆ-

"ಧೀರ ಹೌದೊ ರಾಯನಾಯಿಕಾ
ಹಾರಿ ಹನ್ನೆರಡಕ್ಕಡಿ ಜಿಗದಾ
ಅರಸ ನೋಡಿದವರ ಕಣ್ಣಾರೆ
ಅರಸು ಮೆಚ್ಚಿ ಹರುಷವಾಗಿ
ಸರ್ಜ್ಯಾ ನಿನಗೆ ಸರಿಯಲ್ಲೆಂದು
ಯೇನ ನಿನಗೆ ಸರಿಯಲ್ಲೆಂದು
ಯೇನ ಬೇಡ್ತಿ ಬೇಡೆಂದ ರಣಸೂ"

ಸುರಪುರ ರಾಜ ವೆಂಕಟಪ್ಪ ನಾಯಕ ಸ್ವತಃ ತನ್ನ ಎದುರಿಗೇನೆ ಅವನ ಪೌರುಷವನ್ನು ನೋಡಿ ನಿನಗೇನು ಬೇಕು ಅದನ್ನು ಕೇಳೋ ಅನ್ನುತ್ತಾನೆ. ಆಗ ರಾಯಣ್ಣನು ಮುನ್ನೂರ ಜನ ಬ್ಯಾಡರ ಶೂರರನ್ನು ಕೊಡು ಎಂದಾಗ ಅವನು ಕೊಟ್ಟು ಕಳಿಸುತ್ತಾರೆ. ಆಗ ರಾಯಣ್ಣ ಅವರಿಗೆ ಹೊಂದಿಕೊಂಡು ಹೋಗಿರಿ. ಎಚ್ಚರದಿಂದಿರಿ ಎಂದು ಹೇಳುತ್ತಾನೆ. ಅವರೆಲ್ಲರನ್ನು ಕರೆದುಕೊಂಡು ಹೋಗಿ ಅರಣ್ಯದಲ್ಲಿಡುತ್ತಾನೆ. ಅವರಿಗೆ ಸೊಗಸಾದ ಊಟ ಮಾಡಿಸಿ ಅವರೆಲ್ಲರನ್ನು ತಯಾರು ಮಾಡಿಸಿ ಕಡವು, ಕತ್ತಿ, ಕೈಚೂರಿಗಳು ಇರವು, ಚಾಕು, ಕಠಾರಿ, ಬಿಲ್ಲು, ಇಟಿ ಬಾಣ, ಡಾಲು ಎಲ್ಲವನ್ನು ತೆಗೆದುಕೊಂಡು ರಣರಂಗಕ್ಕೆ ಯಾವಾಗ ಹೋಗೋಣ ನಡಿರಿ ಎಂದು ಬಿಚ್ಚುಗತ್ತಿ ಬಸವಣ್ಣ ಹೇಳಿದರೆ ಇವತ್ತು ಬಹಳ ಗದ್ದಲ್ಲ ಮಾಡಬೇಕು ಎಂದು

ಗಜಧೀರ ಹೇಳುತ್ತಾನೆ. ಸತ್ಯುಳ್ಳ ಕಾಳಮ್ಮನನ್ನು ಕಕ್ಕೇರಿ ಕರಿಯಪ್ಪನನ್ನು ಪ್ರಾರ್ಥಿಸಿ ಶತಸರಗಡವನ್ನು ಮುತ್ತಿದ್ದರು.

ಹಠಾತ್ತನೆ ನಡೆಸಿದ ದಾಳಿಯಲ್ಲಿ ಬಹಳ ಗದ್ದಲ ಮಾಡಿ

ಸಿಕ್ಕಿ ಮಂದಿ ಚಂಡ ಕೋದರಲ್ಲೊ
ಹಿಡಿದು ಹೊಡೆವು
ಕಡದು ಬಡದು
ದಾಂದಲಿ ಮಾಡ್ತ್ಯಾರಗ
ಗಡಾದೊಳು ಮಂದ್ಯಾರು ಉಳಿಲಿಲ್ಲ.

ಎಲ್ಲರೂ ಓಡಿಹೋಗಿ ಬಿಡುತ್ತಾರೆ. ಗಡಾದ ಒಳಗೆ ಗದ್ದಲ್ಲ ಆದ ಸುದ್ದಿ ಕೇಳಿ ಸುಬೇದಾರ ಗಾಬರಿಯಾಗಿ ಬಂದಿದ್ದಿಲ್ಲ. ಲೂಟಿ ಮಾಡಿ ಎಲ್ಲವನ್ನು ಬೆಳಗು ಹರಿಯುವುದರೊಳಗಾಗಿ ಒಯ್ದು ಬಿಟ್ಟಿರುತ್ತಾರೆ. ಮಂದಿ ಯಾರೂ ಕಾಣದೇ ಬರಿ ಕತ್ತಲು ಕವಿದು ಹಾಕಿತ್ತು ಎಂದು ಅಲ್ಲಿ ನಡೆದದ್ದೆಲ್ಲವನ್ನು ಧಾರವಾಡಕ್ಕೆ ಬರೆದ ಸುಬೇದಾರ.

ಬರೆದ ಪತ್ರವನ್ನು ಓಲೇಕಾರ ತೆಗೆದುಕೊಂಡು ಧಾರವಾಡಕ್ಕೆ ಹೋದರು. ಆಗ ಓಲೇಕಾರ ಕೊಟ್ಟ ಪತ್ರವನ್ನು ನೋಡುತ್ತಾ,

"ನಾದಿ ಬಿಟ್ಟ ಯುದ್ದನಾಕ್ಷಣಕಾ
ಬೊಪ್ಪೆಗಿವೊಗಿದು
ಮುಂಗೈ ಕಡಿದು
ಸಿಟ್ಟಿಲಿಂದ ಹಲ್ಲ ತಿಂದ
ಕುಂತ ಪತ್ರ ಬರೆದ ಮುಂಬಿಯಕ"

ಆಗ ವಿಕ್ಟೋಬರಿಯಾ ರಾಣಿ ತಾನೇ ಸ್ವತಃ ಬಂದು ನೋಡಿತಮ್ಮ ಮನಸ್ಸಿನಲ್ಲಿ ಐದು ನೂರ ಸೋದರ ಮಂದಿಯನ್ನು, ಎರಡು ನೂರ ಕರಿಯ ಮಂದಿಯನ್ನು ಟಾಕೋಬಾಕಾಗಿ ಕಳಿಸಿಕೊಟ್ಟರು, ಎಲ್ಲ ದಂಡು ಬಂದು ಬೆಳಗಾವಿಗೆ, ಧಾರವಾಡಕ್ಕೆ ಬಂದರು. ಆಗ ಸುಬೇದಾರ ಸಿಟ್ಟಿನಿಂದ ಎಲ್ಲರನ್ನು ಕೂಡಿಕೊಂಡು ಹಳ್ಳ, ಕೊಳ್ಳ, ಗುಡ್ಡ, ಗವಿ, ಗಿಡ, ಕಂದರ ಎಲ್ಲೋ ಹುಡುಕುತ್ತಾ ಹಳ್ಯಾಳ ಗುಡ್ಡಕ ಹೋದಾರ ಮತ್ತೆ.

ಆಗ ಇವರ ದಂಡು ಬಂತೆಂದು ಅವರ ಸುಳಿವು ರಾಯಣ್ಣ ಆಗ ಆತನ ಜನ ಫಲಹಾರ ಮಾಡುತ್ತಿದ್ದರು. ತವಕದಿಂದ ತಯಾರಾಗಿ 'ಗಿಡಕ್ಕೆ ಜ್ಯಾಂವಿಗಿ ಕಟ್ಟಿ' ದೂರ ಹೋಗಿ ನಿಂತರು. ಆಗ ಅವರು ಇಲ್ಲೇ ಇದ್ದಾರೆ ರಾಯಣ್ಣ ಎಂದು ತಿಳಿದು ಗುಂಡು, ಮದ್ದು ಅವಟಗುಂಡು, ಗರನಾಲು ತುಬಾಕಿ ಕರುಲಿ ಹಿಡಿದು ಅವಿರತವಾಗಿ ಒಂದರ ಮೇಲೊಂದು ಹೊಡೆಯುತ್ತಾರೆ. ಹೀಗೆ ಸತತವಾಗಿ ಮೂರು ತಾಸು ಹೊಡೆದರು. ಮದ್ದು ಗುಂಡು ತೀರಿ ಹೋಯಿತು.

ಆಗ ಮರೆಯಲ್ಲಿ ನಿಂತು ನೋಡಿದ ರಾಯಣ್ಣ ಗುಂಡಿನ ಸಪ್ಪಳ ಇಲ್ಲವಾದಾಗ ಕೂಡಲೇ ಅವರ ಬೆನ್ನ ಮೇಲೆ ಬಂದು -

ಕುರಿವೊಳಗೆ ತೋಳ ಹೊಕ್ಕ ಮುರ ಮರದ
ವೊಗ ವೊಗದ ಹಿರಿಹಿರಿದ ಕಡದಾರ ಕತ್ತೀಲಿ
ಸುತ್ತಗಟ್ಟಿ ಕತ್ತಿ ಮಂದಿ ಯತ್ತೈತ್ಗೋಗೊಡದ ಕಡದಾರ
ಮುತ್ತಿಗಿ ಹಾಕ್ಯಾರೋ ದಂಡಿನ ಮ್ಯಾಲ
ಪಿಸ್ತೂಲ ಫಿರಂಗಿ ಹಿರದು
ಬಾಕ ಬಿಲ್ಲು ಬಲೆಲೊಗದು
ನಾಕನೂರ ಮಂದಿ ಕೊಂದರಲ್ಲಿ
ಕಂಡ ಮಂದಿ ಚಂಡ ಕೋದಾರ
ರುಂಡ ಬಿದ್ದವು ಗೊತ್ತ ಇಲ್ಲದ
ತುಂಡ ತುಂಡ ಮಾಡ್ಯಾರೊಂದಟೋಲಿ
ಕೊಳ್ಳದೊಳಗೆ ಕುತಂತ್ರ ಆಗಿ ನೆತ್ತರಕಾವಲಿ
ಹರಯೀತಣ್ಣಾ ಹಿಂತಾ ಶರಿಸೂರಿ ಆಗದಲ್ಲೊಯಲ್ಲಿ

ಹೀಗೆ ಎಲ್ಲರನ್ನು ಕೊಂದು ನೀರಿನ ಕಾಲುವೆ ಹರಿದಂಗ ಅವರ ರಕ್ತದ ಕಾಲುವೆ ಹರಿಯುತ್ತಿತ್ತು. ಉಳಿದ ಜನ ತೆಳಗೆ ಬಿದ್ದು ಕತ್ತಿ ಚೆಲ್ಲಿ ಹುಲ್ಲಕಚ್ಚಿ ಕಲ್ಲನ್ನು ತೆಲಿಮ್ಯಾಗೆ ಹೊತ್ತರು. ಕೂಡಲೇ ರಾಯಣ್ಣನ ದಂಡು ಕಿತ್ತೂರ ಕಡೆಗೆ ಹೊರಟಿತು. ಅಲ್ಲಿ ತೇಟ ಫಿರಂಗೇರ ದಂಡಿತ್ತು ಮುಂದೆ ಇನ್ನಾರು ರಾಜ್ಯವನ್ನು ಆಳಿರಬಾರದು ಹಾಗೆ ಎಲ್ಲವನ್ನು ಸೂರೆ ಮಾಡಿ ಲೋಕದಲ್ಲಿ ನಾವೇ ಮೀರಿ ಇರಬೇಕು ಎಂದು ಕೊಂಡರು ರಾಯಣ್ಣನ ದಂಡಿನ ಅನುಯಾಯಿಗಳು.

ರಾಯಣ್ಣನು ಮಾಡಿದ ದಾಂದಲೆಯನ್ನು ನೋಡಿ ಕೋಪಗೊಂಡ ಸಾಹೇಬ ಯಾರು ರಾಯಣ್ಣನನ್ನು ಹಿಡಿದು ಕೊಡುವರೋ ಅವರಿಗೆ ಇನಾಮು ಕೊಡುತ್ತೇನೆಂದು ಡಂಗುರ ಸಾರಿದ. ಈ ಸುದ್ದಿ ಕೇಳಿ ಸರೋವರದಂತಹ ಹಳ್ಳದ ಪ್ರದೇಶದಲ್ಲಿ ಅವಿತು ಕುಳಿತು. ಆಗ ಸಾಹೇಬನ ಹತ್ತಿರ ಯಂಕನಗೌಡ, ಲಿಂಗನಗೌಡ್ರ ಮತ್ತು ಬಾಳನಾಯಕ ಈ ಮೂರು ಜನರು ನಾವು ಹಿಡಿದು ಕೊಡುತ್ತೇವೆ ಎಂದು ಬರೆದುಕೊಟ್ಟರು. ಸಾಹೇಬನಿಗೆ ನೀವು ಯಾವುದಕ್ಕೂ ಚಿಂತೆ ಮಾಡಬ್ಯಾಡರಿ ಎಂದು ಹೇಳಿ ರಾಯಣ್ಣನ ದಂಡನ್ನು ಸೇರಿಕೊಂಡರು. ಆದರೆ ಇವರು ಮೂರು ಜನ ಮೋಸ ಮಾಡುವವರೆಂದು ತಿಳಿಯಲಿಲ್ಲ ರಾಯಣ್ಣನಿಗೆ.

ನಾಡೆಲ್ಲ ಅಗೆದು ತರೋಣ ನಡಿಯೋ ರಾಯಣ್ಣ ಎಂದು ಮೂವರು ರಾಯಣ್ಣನನ್ನು ಹುರಿದುಂಬಿಸಿದರು. ಹುಬ್ಬಳ್ಳಿಗೆ ಬಂದು ಕೊಡು ಮಾಡಿ ಹೋದರು. ಆಗ ಅವರು ರಾಯಣ್ಣನಿಗೆ ಕೊಲ್ಲಬೇಕೆಂದು ಅಕಲು ಹಾಕಿ -

"ಮಂದಿನಿಲ್ಲಾ ಮುಂದ ಕಳುಹಿ
ಹೊಂದಿಕ್ಕಿಂದ ನಾಲ್ವರ ನಾವು
ಹಿಂದ ಹೋಗು ನಂತರ ಅತಿ ನಿವಳಾ"

ಎಂದು ಹೇಳಿದಾಗ ರಾಯಣ್ಣ ಮರುಳಾಗಿ ಅವರ ಬೆನ್ನು ಬಿದ್ದ ಹಳ್ಳಕ್ಕೆ ಹೋಗಿ ಜಳಕ ಮಾಡಿ ಊಟ ಮಾಡುವ ವೇಳೆಗೆ ಹೋಗೋಣ ಎಂದು ಹೇಳಿದಾಗ ಇವರ ಮಾತಿಗೆ ಮರುಳಾದ ರಾಯಣ್ಣ ಹುಚ್ಚನಾದ, ರಾಯಣ್ಣ ಕತ್ತಿ ಇಟ್ಟು ಒಬ್ಬರಗೆಟ್ಟ ತೊಟ್ಟಿದ್ದ ಚೆಡ್ಡಿಯನ್ನು ತೆಗಿಯಾಕ ಹತ್ತಿದಾಗ ಮೇಲೆ ಬಿದ್ದ ಒತ್ತಿ ಹಿಡಿದರು.

"ಮಂದಿ ಕೂಡಿ ಹೊರಸಿನ ಮೇಲೆ ತಂದು ಹಾಕಿ
ಬಿಕ್ಕೊಂಡ ಹೋದಾರ
ಅವಗೆ ವೊದಗಿತ್ತಣ್ಣ ಮಾಯಾಕಳಾ"

ಕಛೇರಿ ಒಳಗೆ ಒಯ್ದು ಇಳುವುತ್ತಾರೆ. ಆಗ ಸುಬೇದಾರ ಈತನನ್ನು ಹೊಗಳುತ್ತಾ ರಾಯಣ್ಣ ಹೆಚ್ಚಿನ ಶೂರ, ಎಲ್ಲರಿಗೂ ಮಿಕ್ಕಿದ ಮನುಷ್ಯ ಎಂದು ಹೇಳುತ್ತಾ ಮನಸ್ಸಿನಲ್ಲಿ ಇವನನ್ನು ಕೊಲ್ಲಬಾರದೆಂದು ತಿಳಿದ ಆದರೆ ಆ ಮೂರು ಜನ ಸೇರಿ ಸಾಹೇಬನಿಗೆ ದುಃಖಿಸುತ್ತಾ ಈ ರೀತಿ ಹೇಳುತ್ತಾರೆ.

"ರಾಯ ನಾಯಕನ ಬಿಟ್ಟರೆ ನೀವು
ನಾವು ಮಾತ್ರ ನಾಡಾಗಿರುವುದಿಲ್ಲ
ನಮ್ಮನ್ನು ಕಡದ ಹಾಕತಾನ ಪೂರ್ತಿ
ನಮಗೆ ಮುಂಚೆ ಗಲ್ಲಿಗೆ ಹಾಕಿ
ಸುಮ್ಮನ ಬಿಡಿರಿ ನೀವು ಇವನ
ಅಂತಾರಿವರು ಸಾಹೇಬನ ಮುಂದ ನಿಂತಾ"

ಈ ರೀತಿ ಸಾಹೇಬನ ಮುಂದೆ ಹೇಳುತ್ತಾರೆ. ಅದನ್ನು ಕೇಳಿ ಸಾಹೇಬ ಮೇಲೆ ಬರೆದು ಕಳಿಸುತ್ತಾನೆ. ಆದರೆ ಅವರು ಅವನನ್ನು ಕೊಲ್ಲಬೇಡಿರೆಂದು ಉತ್ತರ ಬಂದಿತು. ಅಲ್ಲಿಂದ ಉತ್ತರ ಬಂದು ಸೇರುವಷ್ಟರಲ್ಲಿ ಇವರು ಒತ್ತಾಯ ಮಾಡಿ ರಾಯಣ್ಣನನ್ನು ಗಲ್ಲಿಗೆ ಹಾಕಿಸಿ ಬಿಟ್ಟರು. ಧೀರನಾದ ರಾಯಣ್ಣನ ಕೊರಳಿಗೆ ನೇಣು ಹಗ್ಗ ಹಾಕಿ ತೂಗು ಬಿಟ್ಟರು.

ಗಲ್ಲಿಗೆ ಹಾಕಲು ಅಪ್ಪಣೆ ಕೊಟ್ಟು ಸರದಾರ ಆತನ ಮೇಲೆ ಕರುಣೆ ಹುಟ್ಟಿ ಅವನನ್ನು ಕೊಲ್ಲಬಾರದಿತ್ತು ಎಂದು ಮರುಗುತ್ತ ಪಶ್ಚಾತ್ತಾಪ ಪಡುತ್ತಾನೆ. ಕೈಮೀರಿದ್ದರಿಂದ ಇವನಿಗೆ ಅಂತ್ಯಕ್ರಿಯೆ ಮಾಡಿರಿ ಎಂದು ಹೇಳಿ ಹತ್ತು ರೂಪಾಯಿಗಳನ್ನು ಕೊಡುತ್ತಾನೆ. ಎಲ್ಲ ಮಂದಿ ಕೂಡಿ ರಾಯಣ್ಣನಿಗೆ ಚಂದದಿಂದ ಮಣ್ಣು ಕೊಟ್ಟರು. ಇಂದಿಗೆ ಸಂಗೊಳ್ಳಿಯ ಸೂರ್ಯ ಮುಳುಗಿದ ಎಂದು ಎಲ್ಲರೂ ದುಃಖದಲ್ಲಿ ಮುಳುಗಿದರು. ಆದರೆ ವೆಂಕನಗೌಡ, ನಿಂಗನಗೌಡ, ಬಾಳನಾಯಕ ಮೂವರು ಕೂಡಿ ಹರ್ಷದಿಂದ ನಗುತ್ತಾ ಬಂದರು.

ರಾಯಣ್ಣನ ಮಣ್ಣು ಮಾಡಿದ ಸ್ಥಳದಲ್ಲಿ ಗಿಡವೊಂದನ್ನು ನೆಟ್ಟರು. ಬೆಳೆದು ದೊಡ್ಡದಾದ ಮೇಲೆ ಮಕ್ಕಳಾಗದವರಿಗೆ ಮಕ್ಕಳು ಆಗುವುದಕ ತೊಟ್ಟಿಲ ಕಟ್ಟಿದರು. ಸತ್ಯವಂತ ನಾಯಕನಿಗೆ ಭಕ್ತಿಯಿಂದ ಬೇಡಿಕೊಂಡರೆ ಪುತ್ರಸಂತಾನವನ್ನು ಕೊಡುತ್ತಾನೆ.

ಬಿಚ್ಚುಗುತ್ತಿ, ಚೆನ್ನಬಸವಣ್ಣ, ಹೆಚ್ಚಿನ ಬಂಟನೆನಿಸಿಕೊಂಡ ಗಜವೀರ ಇಬ್ಬರು ಕುಳಿತು ಮಸಲತ್ತು ಮಾಡುತ್ತಾರೆ. ಕಡ್ಲಿಗುದ್ದಿ ಬಾಲಣ್ಣಾ ಕಿಲ್ಲೇದ ಭೀಮಣ್ಣಾ, ಬೆಳವಡಿ ವಡ್ಡರ ಯಲ್ಲಣ್ಣಾ ಮತ್ತು ಊರ ಜನ ಕೂಡಿ ಕಛೇರಿಗೆ ಹೋಯಿತು. ಆಗ ಸರದಾರನಿಗೆ ಹೋಗಿ ಈ ರೀತಿ ಹೇಳುವರು. "ಸರದಾರಗ ಹೋಗಿ ಅಂತರೇನಿ ಬರದ ಕಳೆದ ನಮದು ಹೋತೆ ನಮ್ಮ ಜೀವಂದ ಕಡಿಸುತ್ತ.

ಈ ರೀತಿ ರಾಯಣ್ಣನು ಬ್ರಿಟಿಷರ ಕೂಡ ಬಂಡಾಯ ಹೂಡಿ ಸ್ವಾಭಿಮಾನದಿಂದ ಆತ ಮಾಡಬಾರದೆಲ್ಲವನ್ನು ಮಾಡಿ ನಾಡಿಗೋಸ್ಕರ ಆತನು ಮಾಡಿದ ಕಾರ್ಯ, ತ್ಯಾಗ, ಬಲಿದಾನ ಇವೆಲ್ಲವು ನಮಗೆ ಆದರ್ಶವಾಗಿ ನಿಲ್ಲುತ್ತವೆ.

**೩. ಸುರಪುರದ ರಾಜವೆಂಕಟಪ್ಪನಾಯಕ (ಕ್ರಿ.ಶ. ೧೮೫೭-೫೮)**

ಸುರಪುರ ಸಂಸ್ಥಾನ ಹತ್ತೊಂಬತ್ತನೆಯ ಶತಮಾನದ ಇತಿಹಾಸ ಪ್ರಸಿದ್ಧ ಸ್ಥಳ ನೂರು ವರ್ಷಗಳ ಹಿಂದೆ ಸಂಪದ್ಭರಿತ ಪ್ರದೇಶವಾಗಿತ್ತು. ಈ ಸಂಸ್ಥಾನದ ಜನರು ಸ್ವಾತಂತ್ರ್ಯವೊಂದನ್ನು ಅಲ್ಲದೆ ಮತ್ತೇನನ್ನೂ ಬೇಡರು ಸ್ವಾತಂತ್ರ್ಯ ಜೀವನಕ್ಕೆ ಸಂಚಾರ ಬಂದ ಅನೇಕ ಸಂಕಟ, ಸಂದಿಗ್ಧ ಸಮಯಗಳಲ್ಲಿ ಸತ್ರುಗಳನ್ನೆದುರಿಸಿ ರಾಜ್ಯದ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ. ಒಂದು ಕಡೆ ಹೈದಾರಾಬಾದಿನ ನಿಜಾಮ, ಇನ್ನೊಂದು ಕಡೆ ಬಿಜಾಪುರದ ಆದಿಲ್‌ಶಾಹಿ ಇವರಿಬ್ಬರು ಸೆಣಸಾಡುತ್ತಿರುವಾಗ, ಸುರುಪುರದವರು ಯಾರದೇ ಪಕ್ಷ ವಹಿಸದೆ ಯಾರಿಗೂ ತಲೆಬಾಗದೆ ಭದ್ರ ಸ್ವತಂತ್ರ ಜೀವನ ನಡೆಸಿಕೊಂಡು ಬಂದಿದ್ದಾರೆ.

ವೆಂಕಟಪ್ಪ ನಾಯಕನ ತಂದೆ ತೀರಿ ಹೋಗಿ ಇವನು ಸುರಪುರದ ಸಂಸ್ಥಾನದ ಅಧಿಕಾರ ವಹಿಸಿಕೊಳ್ಳುವಾಗ ವಯಸ್ಸಿನಲ್ಲಿ ಚಿಕ್ಕವನಾಗಿದ್ದ ಅದಕ್ಕಾಗಿ ಬ್ರಿಟಿಷ ಸರಕಾರ ಮೆಡೋಸ್ ಟೈಲರ್ ಎಂಬ ಅಧಿಕಾರ ವಹಿಸಿಕೊಂಡಿದ್ದನು. ಆತ ಇವನಿಗೆ ಶಿಕ್ಷಣ ನೀಡಿ ಆಡಳಿತ ನಡೆಸುವ ವಿಧಾನವನ್ನು ಕಲಿಸಿದ್ದ. ಹೀಗಾಗಿ ಆತನನ್ನು ತಂದೆಯ ಸ್ಥಾನದಲ್ಲಿಟ್ಟುಕೊಂಡು ಸಂರಕ್ಷಿಸುತ್ತಿದ್ದರು.

ವೆಂಕಟಪ್ಪ ವಯಸ್ಕನಾಗಿ ಅಧಿಕಾರಕ್ಕೆ ಬಂದಾಗ ರಾಜ್ಯದ ಬೊಕ್ಕಸವೆಲ್ಲ ಬರಿದಾಗಿತ್ತು. ರಾಜ್ಯದ ಬಹುಭಾಗ ಬ್ರಿಟೀಶ ವಶದಲ್ಲಿತ್ತು. ಹೀಗಾಗಿ ಏನಾದರೂ ಮಾಡಿ ಬಿಡಿಸಿಕೊಂಡು ಸ್ವತಂತ್ರವಾಗಿರಬೇಕೆಂದು ಆಲೋಚಿಸುತ್ತಿದ್ದಾಗ ಆಗಿನ ಗವರ್ನರ್ ಜನರಲ್ ಆಗಿದ್ದ ಡಾಲ್‌ಹೌಸಿಯು ನಿನ್ನ ರಾಜ್ಯಕ್ಕೆ ಒಬ್ಬ ಸಲಹೆಗಾರರನಿರಬೇಕೆಂದು ಮತ್ತು ಅವನಿಗೆ ಅತ್ಯಧಿಕ ಮೊತ್ತದ ಸಂಬಳ ಕೊಡಬೇಕೆಂದು ಕೇಳಿದ. ಇದನ್ನು ಭರಿಸಲು ಕಷ್ಟವಾದ ವೆಂಕಟಪ್ಪ ನಾಯಕನು ಇದನ್ನು

ವಿರೋಧಿಸಿದ, ಇದರಿಂದ ಕೋಪಗೊಂಡ ಬ್ರಿಟಿಷರು ವೆಂಕಟಪ್ಪನಾಯಕನ ಮೇಲೆ ಯುದ್ಧ ಸಾರಿದರು.

ಆಗಲೇ ಸ್ವಾತಂತ್ರ್ಯ ಸಂಗ್ರಾಮ ಆರಂಭವಾಗಿತ್ತು. ಬ್ರಿಟಿಷರು ಇವರ ಮೇಲೆ ಕೆಂಡ ಕಾರುತ್ತಿದ್ದರು. ಬ್ರಿಟಿಷರ ಸೈನ್ಯಕ್ಕೆ ಒಳಗಿಂದೊಳಗೆ ಹೋಗಿ ಅವರಿಗೆ ರಾಷ್ಟ್ರಪ್ರೇಮ, ದೇಶಪ್ರೇಮ ತುಂಬಿ ಬ್ರಿಟಿಷರ ವಿರುದ್ಧ ತಿರುಗಿ ಬೀಳುವ ಹಾಗೆ ಮಾಡಬೇಕೆಂದು ಸಾಕಷ್ಟು ಹೆಣಗಾಡಿದ. ಅಲ್ಲಿಯೇ ಹೆಚ್ಚಾನೆಚ್ಚು ಭಾರತೀಯ ಸೈನಿಕರೇ ಇದ್ದುದರಿಂದ ಈ ರೀತಿ ಅವರಿಗೆ ಪ್ರಚೋದನೆ ನೀಡುತ್ತಿದ್ದನು. ಆದರೆ ವೆಂಕಟಪ್ಪನ ಕೆಲಬಂಧುಗಳು ಸೈನಿಕರು ಬ್ರಿಟಿಷರಿಗೆ ಸೆರೆಸಿಕ್ಕರು. ಹೀಗಾಗಿ ಈತನ ತಂತ್ರ ಸಫಲವಾಗಿಲ್ಲ. ೭.೨.೧೮೫೮ರಂದು ನಾಯಕನ ಸೈನಿಕರು ಬ್ರಿಟಿಷರ ಬೀಡುಗಳ ಮೇಲೆ ದಾಳಿ ನಡೆಸಿದರು. ಬೇಡರ ಪಡೆಗಳು ವೀರಾವೇಶದಿಂದ ಹೋರಾಡಿದರು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಮರನಾದ ರಾಜವೆಂಕಟಪ್ಪನನ್ನು ಅವನ ಸ್ವಾತಂತ್ರ್ಯಪ್ರೇಮವನ್ನು ಮತ್ತು ಅವನ ಗಂಭೀರ ನಿರ್ಭಯವನ್ನು ಕಾಣಬಹುದು. ಆತನನ್ನು ಸ್ವಾತಂತ್ರ್ಯವೀರರಲ್ಲಿ ಗಣನೀಯವಾಗಿ ತಾಯ್ನಾಡಿನ ಮಮತೆಯ ತೊಟ್ಟಿಲಲ್ಲಿ ತೂಗಬೇಕಾಗಿದೆ.

ಈ ನಾಯಕನನ್ನು ಕುರಿತು ಲಾವಣಿಗಳು ನಮಗೆ ಸಿಗುತ್ತವೆ. ಅದಕ್ಕಾಗಿ ಅವುಗಳನ್ನು ಇಲ್ಲಿ ವಿಶ್ಲೇಷಿಸಬಹುದು.

"ಏನು ಶಿಸ್ತಿಲಿತ್ತು ಸುರಪುರ
ಇಲ್ಲೆಲ್ಲಿ ಇಲ್ಲ ದರಬಾರ
ಕ್ಯಾಮಲ್ ಸಾಯ್ಬ ಚತೂರ
ಮಾಡಿದ ಪಿತೂರ

ಎಂದು ಆರಂಭವಾಗುವ ಈ ಲಾವಣಿಯು ಮೊದಲಿನಿಂದಲೂ ಸುರಪುರ ಸಂಸ್ಥಾನ ಸಂಪದ್ಭರಿತವಾಗಿತ್ತು. ಎಲ್ಲೆಲ್ಲಿಯೂ ಅದು ಕೀರ್ತಿಯ ಪತಾಕೆಯನ್ನು ಹಾರಿಸಿತು. ಅಲ್ಲದೇ ರಾಜನಾದ ವೆಂಕಟಪ್ಪ ಪ್ರಜೆಗಳಿಗೆ ಯಾವುದೇ ಕೊರತೆಯನ್ನು ತಂದವನಲ್ಲ. ಇಂತಹ ಸಂಪದ್ಭರಿತ ರಾಷ್ಟ್ರದಲ್ಲಿ ಕ್ಯಾಮಲ್ ಸಾಹೇಬ ಕಿತಬಿ ಮಾಡಿದ್ದನ್ನು ನೇರವಾಗಿ ವಿವರಿಸುತ್ತಾರೆ. ಮುಂದಿನ ನುಡಿಯಲ್ಲಿ ವೆಂಕಟಪ್ಪನ ವ್ಯಕ್ತಿತ್ವ ಆತನ ಪರಾಕ್ರಮ, ಸಾಹಸ, ಬಲಿದಾನ ಕುರಿತು ಹೇಳುತ್ತಾನೆ.

"ಕಲ್ಲಚ್ಚ ಕಟ್ಟಿಸಿದ ಗೋಡೆ
ಮೋರೆತ್ತಿ ಮೇಲಕ್ಕೆ ನೋಡಿ
ಕಟ್ಟಿಸಿದ ದೂರೀನ ಕೊಂಡಾಡಿ
ಶಿವನ ನಲಿದಾಡಿ

"ಚಿತ್ರ ವಿಚಿತ್ರದ ಬಣ್ಣ
ಬಳಿಸಿದರು ಗೋಡೆಗೆ ಸುಣ್ಣ

ನೋಡಲಿಕ್ಕೆ ಸಾಲವೆರಡು ಕಣ್ಣು
ಸರಿಯೆತೋ ಪುಣ್ಯ"

ಇಂತಹ ಭವ್ಯವಾದ ಕೋಟೆಯನ್ನು ಕಟ್ಟಿಸಿ ಎಲ್ಲರೂ ಸಂತೋಷದಿಂದ ಇರುವಂತೆ ಮಾಡಿದ ರಾಜ್ಯದಲ್ಲಿ ದೇವೇಂದ್ರನ ಸಂಪತ್ತು ಈ ದೇಶದಲ್ಲಿ ತುಂಬಿ ತುಳಕಾಡುತ್ತಿತ್ತು. ಇಂತಹ ಸಂದರ್ಭದಲ್ಲಿ ಫಿರಂಗಿರಿಯರಾದ ಬ್ರಿಟಿಷರು ಡೇರಿ ಹಾಕಿ ಸುತ್ತಲೂ ಸೈನಿಕರನ್ನು ಕೋಟೆಯ ಸುತ್ತಲೂ ನಿಲ್ಲಿಸಿದ್ದಾರೆ. ಆಗ ದೊರೆ ಮಕ್ಕಳ ಕೂಡ ಹೊರಟು ಬರಲು ತಿಳಿಸುತ್ತಾರೆ. ಆಗ ಶೂರನಾದ ವೆಂಕಟಪ್ಪನು ಅಂಜದೇ ಧೈರ್ಯದಿಂದ ಹಣೆಯ ಮೇಲೆ ನಾಮಕಸ್ತೂರಿ ಧರಿಸಿ ಕೈಯಲ್ಲಿ ಕಠಾರಿ ಹಿಡಿದುಕೊಂಡು ಅಂಬಾರಿ ಏರಿ ಬ್ರಿಟಿಷರು ಬೀಡು ಬಿಟ್ಟ ಸ್ಥಳಕ್ಕೆ ಬಂದು ವೆಂಕಟಪ್ಪ ಬುದ್ಧಿ ಮಾತು ಹೇಳುತ್ತಾನೆ.

"ನೀ ಕೇಳು ದೊರಿ ಸಣ್ಣಾತ
ಜಗಳ್ಯಾಕ ನಮ್ಮ ಸಂಗಾತ
ಮುಂದಾದವು ನೋಡ ಘಾತ
ಮೀರಬೇಡ ಮಾತ"

"ಸಣ್ಣ ಮನುಷ್ಯರು ಲಚ್ಚರು ಕೂಡಿ
ಮಸಲತ ಮಾಡತಾರ ಬೋಡಿ
ಬಲ್ಮಂದಿ ಹೇಳತಾರ ಚಾಡಿ
ದೊರಿ ಕೇಳಬೇಡ"

ಎಂದು ನಮ್ಮ ಕೂಡ ಯಾವ ವಿಷಯಕ್ಕಾಗಿ ಜಗಳ ಮಾಡಲು ಮುಂದೆ ಆಗುವುದು. ಘಾತ, ಸಣ್ಣ ಲುಚ್ಛರು ಕೂಡಿ ಮಸ್ಲತ್ತು ಮಾಡಿದ್ದಾರೆ. ಬಾಳ ಮಂದಿ ಚಾಡಿ ಹೇಳುತ್ತಾರೆ. ಅವರ್‍ಯಾರದು ಮಾತು ಕೇಳಬೇಡ ಎಂದು ಎಷ್ಟು ಹೇಳಿದರೂ ಕೇಳಲೇ ಇಲ್ಲ.

ಆಗ ಆಂಗ್ಲರ ಮೇಲೆ ಟಪಾಲು ಬರೆದು ಸಾವಿರ ಮಂದಿ ಸೈನಿಕರನ್ನು ಮುನ್ನೂರು ಮೈಸೂರು ಕುದುರೆಗಳನ್ನು ತೋಪುಗಳನ್ನು ತರಿಸುತ್ತಾರೆ. ಆಗ ತುಬಾಕಿ ನಾಲ್ಕು ಇದ್ದವು. ಎರಡು ಸೈನ್ಯಗಳಲ್ಲಿ ಯುದ್ಧ ಪ್ರಾರಂಭವಾಗುತ್ತದೆ. ಗುಂಡು ಹಾರಿಸುತ್ತಾರೆ. ವೆಂಕಟಪ್ಪನ ಸೈನ್ಯಕ್ಕೆ ಲಡಾಯಿ ಬಾರಿ ಪ್ರಮಾಣದಲ್ಲಿ ನಡೆಯುತ್ತದೆ. ಸೈನ್ಯ ಬಂದೂಕನ್ನು ಹಾರಿಸಿದ್ದನ್ನು ನೋಡಿ ದೊರೆಗೆ ಕಣ್ಣಲ್ಲಿ ನೀರು ಬರುತ್ತದೆ. ನನಗೆ ಎರವಾಯಿತು. ಸುರಪುರ ಎನ್ನುತ್ತ ದುಃಖ ಮಾಡುತ್ತಾನೆ.

ಆಗ ವೈರಿ ಸೈನಿಕರು ಕುತ್ತಿಗೆ ಹಿಡಿದು ನೂಕಿರಿ ಹರಿಯುವ ನೀರಿನಲ್ಲಿ ಎತ್ತಿ ಹಾಕಿರಿ ಎನ್ನುತ್ತ ಮುನ್ನುಗ್ಗುತ್ತಾರೆ. ಆಗ ಈತನ ಸೈನಿಕರನ್ನು ಅವರು ಗುಂಡಿನಿಂದ ಅವರ ಸೈನಿಕರು ಇವರ ಸೈನ್ಯ ಹೀಗೆ ಗುಂಡು ಹಾರಿಸುತ್ತಾ ಯುದ್ಧ ನಡೆಯುತ್ತದೆ. ಆಗ ಬಡೇ ಸಾಹೇಬರಿಗೆ

ಈ ಸುದ್ದಿಯನ್ನು ಕಳಿಸಿ ಸೈನಿಕರನ್ನು ತರಿಸುತ್ತಾರೆ. ಬ್ರಿಟಿಷರು ಭೀಮರಾಯನೆಂಬ ವ್ಯಕ್ತಿಗೆ ಆಮಿಷ ತೋರಿಸಿ ಅವನಿಂದ ಕೋಟೆಯ ಗುಪ್ತ ಮಾರ್ಗವನ್ನು ತಿಳಿಯುತ್ತಾರೆ. ನಂತರ ಭೀಮರಾಯನು ತನ್ನ ಈ ಸ್ವಾಮಿ ದ್ರೋಹ ಕಾರ್ಯದಿಂದ ವೆಂಕಟಪ್ಪನಿಗೆ ಕೇಡಾಗುವುದೆಂದು ಅರಿತು ಅವನನ್ನು ಬ್ರಿಟಿಷರ ಹಿಡಿತಕ್ಕೆ ಸಿಗದಂತೆ ಪಾರು ಮಾಡುತ್ತಾನೆ. ಆದರೆ ಕುತಂತ್ರಿಗಳಾದ ಬ್ರಿಟಿಷರ ಬಲೆಗೆ ಬಿದ್ದ ಕೊನೆಗೂ ಮೋಸದಿಂದಲೇ ವೆಂಕಟಪ್ಪನನ್ನು ಭೀಮರಾಯನ ಬ್ರಿಟಿಷರಿಗೆ ಹಿಡಿದುಕೊಡುತ್ತಾನೆ. ಬ್ರಿಟಿಷರು ವಿಚಾರಣೆ ಮಾಡಿ ಜೀವಾವಧಿ ಶಿಕ್ಷೆಯನ್ನು ವಿಧಿಸುತ್ತಾರೆ. ಆದರೆ ದುರ್ಗದ ಕಡೆಗೆ ಕರೆದುಕೊಂಡು ಹೋಗುವಾಗ ದಾರಿಯಲ್ಲಿ ಒಬ್ಬ ಮೋಸದಿಂದ ಗುಂಡಿಕ್ಕಿ ವೆಂಕಟಪ್ಪನನ್ನು ಕೊಂದು ಬಿಡುತ್ತಾನೆ. ಅದನ್ನೇ ಇಲ್ಲಿ ಏನೇ ಆಗಲಿ ಸುರಪುರದ ರಾಜ ವೆಂಕಟಪ್ಪನಾಯಕನ ದೇಶಪ್ರೇಮ ನಾಡಿನ ಪ್ರೇಮ, ಸತ್ಯನಿಷ್ಠೆ, ತ್ಯಾಗ ಬಲಿದಾನ ಎಲ್ಲವೂ ಮೆಚ್ಚುವಂತಹವು. ಇಂತಹ ವೀರರನ್ನು ಪಡೆದ ಭಾರತ ಮಾತೆ ಧನ್ಯಳು. ಹೀಗಾಗಿ ಜನಪದರು ತಮ್ಮ ಜಾನಪದ ವಾಙ್ಮಯ ವೆಂಕಟಪ್ಪನಿಗೆ ಸ್ಥಾನ ನೀಡಿ ಒಬ್ಬ ವೀರನನ್ನು ಕೊಂಡಾಡಿರುವುದು ಹೆಮ್ಮೆಯೇ ಆಗಿದೆ.

### ೪. ಹಲಗಲಿಯ ಧೀರ ಬೇಡರು (೧೮೫೭-೫೮)

ಕ್ರಿ.ಶ. ೧೮೫೭-೫೮ರಲ್ಲಿ ಹೊತ್ತಿಕೊಂಡ ರಾಷ್ಟ್ರೀಯ ವಿಪ್ಲವದಾವಾಗ್ನಿಯಲ್ಲಿ ಭಾರತೀಯರು ಪ್ರತಿಭಟಿಸಿದ ವೀರಪರಾಕ್ರಮ, ಸಾಹಸ ತ್ಯಾಗ ಬಲಿದಾನಗಳಿಗೂ ಅಸಂಖ್ಯಾತ ನಿದರ್ಶನಗಳಿವೆ. ಇದರಲ್ಲಿ ಹಲಗಲಿ ಬೇಡರ ದಂಗೆಯು ಮುಖ್ಯವಾದದ್ದು. ಬ್ರಿಟಿಷರ ಶಸ್ತ್ರಾಸ್ತ್ರ ನಿಷೇಧ ಕಾಯಿದೆಯನ್ನು ವಿರೋಧಿಸಿ ಈ ಬೇಡರು ಬ್ರಿಟಿಷರ ಜೊತೆಗೆ ಹೋರಾಟವನ್ನು ಮಾಡಿ ಕೊನೆಗೆ ಸ್ವಾತಂತ್ರ್ಯದ ಬಿಡುಗಡೆಗೆ ಒಂದು ಮೈಲುಗಲ್ಲಾಯಿತು.

ಇದೊಂದು ಮುಖ್ಯವಾದ ಪ್ರತಿಭಟನೆಯಾಗಿರುವುದರಿಂದ ಇದನ್ನು ಕುರಿತು ಹಲವಾರು ಲಾವಣಿಗಳು ಕಾಣಿಸುತ್ತವೆ. ಅಂತಹದಲ್ಲಿ ಫ್ಲೀಟರು ಸಂಗ್ರಹಿಸಿದ ಹಾಡನ್ನು ತೆಗೆದುಕೊಂಡು ವಿಶ್ಲೇಷಿಸಿದ್ದೇನೆ.

> "ಹೊತ್ತ ಬಂದಿತು ಮತ್ತೆ ನೋಡಿರಿ ಕತ್ತಿ ಹಿಡಿಯುವ ಜನಕ
> ಶಿಸ್ತಿನ ಮಂದಿ ಬಂಟರ ಹಲಗಲಿ ಮುಟ್ಟಲಿಲ್ಲ ದಡಕ"

ಈ ಲಾವಣಿಯಲ್ಲಿ ಸಿಪಾಯಿ ಬಂಡಾಯದ ನಂತರ ಬ್ರಿಟಿಷ ಸರಕಾರವು ೧೮೫೭ರಲ್ಲಿ ನಿಶಸ್ತ್ರೀಕರಣವನ್ನೇ ಜಾರಿಗೆ ತಂದಿತು. ಆಗಿನ ಸರಕಾರ ನಿರ್ಧರಿಸಿದ್ದನ್ನು ಹೇಳುತ್ತಾ ಕತ್ತಿ, ಕಠಾರಿ, ಕೈಚೂರಿ, ಚಾಕು, ಗುಂಡಿನ ತುರಾಯಿ ಚಕ್ರವರ್ತಿ, ಬಿಚ್ಚುಗತ್ತಿ, ಬಿಲ್ಲುಬಾಣ, ಪಟಾತಪಿಸ್ತೂಲ, ಕರುಲಿ, ತೆಗಾ, ಚಾಪಗೊಡ್ಲಿ, ತೋಪು, ತುಬಾಕಿ ಹೂಡುವ ಮದ್ದುಗುಂಡು ಎಲ್ಲವನ್ನು ತಂದು ಕೊಡಬೇಕು. ಒಂದು ವೇಳೆ ಒಪ್ಪಿಸದವರಿಗೆ ಮೂರು ವರ್ಷ ಶಿಕ್ಷೆಯಾಗುವುದೆಂದು ಅದಕ್ಕೂ ಬಗ್ಗದೇ ಇದ್ದರೆ ಕಡಿದು ಹಾಕಿರೆಂದು ಹುಕುಂ ಬಂದಿತೆಂದು ಡಂಗುರ ಸಾರುತ್ತಾರೆ. ಆಗ ಶೂರ ಸಿಪಾಯಿಗಳು, ಕಣ್ಣೀರು ತಂದುಕೊಳ್ಳುತ್ತಾರೆ. ಬಹಳ

ಚಿಂತನೆಯಿಂದ ಊಟ ಮಾಡದೇ ನೆಲವನ್ನು ಕಚ್ಚಿದರಂತೆ ಒಮ್ಮಿಂದೊಮ್ಮೆಲೆ ಬಂದಂತಹ ಈ ಹುಕುಮಿನಿಂದ ಅವರು ನಿಸ್ಸಹಾಯಕರಾಗಿ ಚಿಂತಾಕ್ರಾಂತರಾದರು. ಆಗ ಏನು ಮಾಡಲಾಗುತ್ತದೆ ಎಂದು ಕೆಲವರು ತಂದುಕೊಡುತ್ತಾರೆ. ಆದರೆ ಕೊಡಲು ಒಪ್ಪದೆ ಇರುವರು ಜಾಸ್ತಿ.

"ಶೂರ ಪಟೆಗಾರರು ಜಾಯಿತ್ ಸಾಹೇಬ ಬಂದಾರ ಅವಾಗ
ಸಂದಿಯ ಗೊಂದಿವೊಂದು ಉಳಿಯದ್ ಅಂಗ್ ಹೊಕ್ಕ ಹುಡಿಕ್ಯಾರ ಮನಿಯಾಗ
ತಪ್ಪೀತು ಉಪಾಯ ಇನ್ನ ಮಾತ್ರ ಮಾಡೂನ್ ಅಂತರ್ ಹ್ಯಾಂಗ್
ದಿಬ್ಬರಕ ಒಬ್ಬರ ಚಾಡಿ ಹೇಳತಾರ ವರ್ಮ ಸಾಧಿಸಿದ್ ಹಾಂಗ್ | ಜ್ಯಾಲ
ಜ್ಯಾಡಿಸಿ ಹೋದವು ಎಲ್ಲಾ
ನಾಡ ಒಳಗೆ ಏನೂ ಉಳಿಲಿಲ್ಲಾ
ಅಜ್ಜ ಮುತ್ತೇರ ಹಿಡಿದ ಪಿಸ್ತೂಲ
ಕಾಸದ್ ಬದರ ಕತ್ತಿಯ ಡಾಲ
ಕವಚ ಬೆಳ್ಳಿಯ ಮಕಮಲ್
ರತ್ನದ ಹಿಡಿಕಿ ಹೋದವು ಎಲ್ಲ
ಹೋದ ಅತ್ಯಾರಕ ಹೊಟಬ್ಯಾನಿ ಹಚಿಕೊಂಡ ನಿಂತಾರ ಸಾವುದಕ"

ಎಂದು ಸಂಕಟಪಡುತ್ತಾ ಹಲ್ಲು ಕಿತ್ತ ಹಾವಿನಂತೆ ನಮ್ಮ ಆಯುಧಗಳನ್ನೆಲ್ಲಾ ವಯಿದಾರಲ್ಲ ನಮ್ಮ ಮಾನ ಏನು ಉಳಿಯತೆಂದು ವಿಚಾರಿಸುತ್ತ -

"ಮಗ್ಗಲದಾಗಿನ ಹೆಂಡತಿ ಕೊಟ್ಟ ಹಾಂಗ ಹೇಡಿ ಆದೇವಲ್ಲಾ
ಸತ್ ಹೆಣಕ ಶೃಂಗಾರ ಮಾಡಿದ ಪರಿ ಆದಿತಲ್"

ಎಂದು ತಮ್ಮ ಗಂಡಸನತಕ್ಕೆ ತಾವೇ ಬೈದುಕೊಳ್ಳುತ್ತಾ, ಹಲಗಲಿಯ ಮನೆ ಹೊಕ್ಕು ಒಯ್ದರೂ ಕೇಳುವವರಿಲ್ಲ. ಪುಂಡರಾದ ಪಾಳೆಗಾರ ಪಚ್ಚೆ ವಜೀರರು ಹಟವನ್ನು ಯಾಕೆ ಹಿಡಿಲಿಲ್ಲ. ಸೈನ್ಯವನ್ನು ಆಳುವ ದೊರೆ ಅಂಜಿ ಕುಳಿತಾನಲ್ಲ ಎಂದು ಚಿಂತೈಗೈದಾಗ ಹೆಂಗಸರಂತೆ ಸೀರೆ ಉಬ್ಬು ಮನೆಯಲ್ಲಿ ಉಳಿಯಬೇಕಾಯಿತಲ್ಲ. ರೆಕ್ಕೆ ಕಿತ್ತ ಹಕ್ಕಿಯಂತೆ ಆಯಿತು ಎಂದು ಚಿಂತೆ ಮಾಡುತ್ತಾರೆ.

ಮುಧೋಳ ರಾಜ್ಯದಲ್ಲಿ ಹಲಗಲಿ ಎಂಬ ಊರಿನಲ್ಲಿ ಪೂಜಾರಿ ಎಂಬ ಹನುಮ, ಬಾಲ, ಜಡಗ, ರಾಮ, ಈ ನಾಲ್ಕು ಜನ ಕೂಡಿ ಹತಾರ ಕೊಟ್ಟರ ನಮ್ಮ ಜೀವವೇ ಹೋದಂಗ ಅದರ ಸುತ್ತೂರು ಹಳ್ಳಿಗಳಿಗೆ ಹೇಳಿ ಕಳಿಸಿರೆಂದು ಅವರು ಒಂದುಗೂಡಿ ಮಾತನಾಡಿಕೊಂಡರು. ಬ್ರಿಟಿಷರು ಕಳಿಸಿದ ಕಾರಕೂನನಿಗೆ ಕಪಾಳಕ್ಕೆ ಹೊಡೆದರು. ಅವನು ನೆಲಕ್ಕೆ ಬಿದ್ದ. ಈ ಸುದ್ದಿಯನ್ನು ಸಾಹೇಬನಿಗೆ ಹೇಳಿದಾಗ ಅವನು ಕೃಷ್ಣನಾಯಕ ಗೌಡನಿಗೆ ಕರಿಸಿ ಅವನಿಗೆ ಶಸ್ತ್ರಗಳನ್ನು ಇಸಿದಕೊಂಡು ಬಾ ಎಂದು ಕಳಿಸಿದಾಗ ಅವನು ಬಂದು ಹಠ ಮಾಡದೇ ಹತ್ಯಾರ ಕೊಟ್ಟು ಬಿಡ್ರಿ ಎಂದು ಕೇಳಿದಾಗ –

"ಹತಾರ ಕೊಡಲಿಕ್ಕೆ ಹೆಂಗಸಾಗಿ ಬಳಿ ಇಟ್ಟಿಲ್ಲ ಕೈಯಾಗ
ಯಾರ ಬಂದರೂ ಜೀವ ಹೋದರು ಕೊಡುದಿಲ್ಲ
ಸುಮ್ಮನ ಹೋಗಿರಿ ಈಗ"

ಎಂದು ದಿಟ್ಟದತನದಿಂದಲೇ ಹೇಳಿ ಕಳಿಸುತ್ತಾರೆ. ಆಗ ಅಲ್ಲಿ ನಡೆದಿದ್ದೆಲ್ಲವನ್ನು ಸಾಹೇಬನಿಗೆ ತಿಳಿಸುತ್ತಾರೆ. ಸಾಹೇಬ ಗಾಬರಿಯಾಗಿ ಸಿಟ್ಟಿನಿಂದ ಮುಂಗೈ ಕಚ್ಚಿಕೊಂಡಂತೆ ಅಂದರೆ ಸಾಹೇಬನಿಗೆ ಬೇಡರು ಎಷ್ಟು ಹಟಮಾರಿ ಇರುವುರಲ್ಲ ಎಷ್ಟು ಶೂರರು ಎಂದು ತಿಳಿಯುತ್ತಾನೆ. ಆದರೂ ಧೈರ್ಯದಿಂದ ಮತ್ತೆ ಹುಕುಂ ಕೊಟ್ಟನು.

ಇವರ ಶೂರತನ ಎಷ್ಟಿದೆ ಎಂಬುದನ್ನು ಪ್ರತಿನಿಧಿಸುತ್ತದೆ. ಮುಂದೆ ಸಂಧಾನಕ್ಕಾಗಿ ಬ್ರಿಟಿಷರಿಗೆ ಯುದ್ಧ ಅನಿವಾರ್ಯವಾಗುತ್ತದೆ. ಕುದುರೆಯ ಸಿಪಾಯಿಗಳು ಹಲಗಲಿಗೆ ಹೋಗಿ ಮುಟ್ಟುತ್ತಿರುವಂತೆಯೆ ಹಲಗಲಿ ಊರಿನ ಬೆಳದಿಂಗಳಲ್ಲೇ ರಭಸದಿಂದ ಬರುವವರ ಮೇಲೆ ಗುಂಡು ಹೊಡೆದರು. ಗುಂಡಿನೇಟನು ತಿನ್ನಲಾಗದೇ ಸಿಪಾಯಿಗಳು ಗುಂಡದ ಹತ್ತಿರ ಬಂದು ಬೇಗನೇ ಒಂದು ಸೈನ್ಯವನ್ನು ಕಳಿಸಿರೆಂದು ಸಾಹೇಬನ ಹತ್ತಿರ ಕಳಿಸುತ್ತಾರೆ. ಆ ಸುದ್ದಿ ಮುಟ್ಟಿದ ತಕ್ಷಣವೇ ೬ ತಾಸು ರಾತ್ರಿಯಲ್ಲೇ ಹಲಗಲಿಗೆ ಬಂದು ಮೈಮರೆತು ಮಲಗಿದ್ದ ಮಂದಿಯ ಮೇಲೆ ಕಂಡ ಕಂಡಲ್ಲಿ ಗುಂಡಿನ ಸುರಿಮಳೆ ಆಯಿತು. ಕಂಗಾಲಾದ ಜನರು ಓಡಿ ಹೋದರು. ಸಿಕ್ಕಸಿಕ್ಕಲ್ಲಿ ಬೇಡರನ್ನು ಕೊಚ್ಚಿ ಹಾಕಿದರು. ಎಲ್ಲಿ ನೋಡಿದರೂ ಹೆಣಗಳ ರಾಶಿ ಬಿದ್ದಿದೆ.

ಹೆಬಲಕ್ ಸಾಹೇಬ ಅಗಸಿಗೆ ಬಂದು ನಿಂತು ಹೇಳುತ್ತಾನೆ. ಸುಮ್ಮನೇ ವ್ಯರ್ಥನಾಗಬೇಡರಿ ಎಂದು ಬುದ್ಧಿ ಮಾತನ್ನು ಹೇಳಿದಾಗ ಹನುಮ ಮುಂದೆ ಬಂದಾಗ ಜಡಗ ಹೇಳುತ್ತಾನೆ. ಇವರು ವಿಶ್ವಾಸ ಘಾತಕರು ಮುಂದೆ ನಮಗೆ ಗೋಳು ಬರುತ್ತದೆ ಎಂದು ಒಂದು ಗುಂಡು ಹೊಡೆದ. ಒಂದೇ ಗುಂಡಿಗೆ ಸಾಹೇಬ ಉರುಳಿ ಬಿದ್ದ. ಇನ್ನೊಬ್ಬ ಕಾರ್ ಸಾಹೇಬರನು ಕೋಪೋದ್ರಿಕನಾಗಿ ಊರನ್ನೇ ಲೂಟಿ ಮಾಡಲು ಆಜ್ಞೆ ಇಡುತ್ತಾನೆ. ಅವರು ಹುರುಪಿನಿಂದ ರಪರಪವ ಮಳೆ ಬಂದಾಗ ಗುಂಡು ಸುರಿದವು. ಆಗ ಹನುಮ ಹೇಳುತ್ತಾನೆ. ಗುಂಡು ಹೊಡೆದ ೩೦೦ ಮಂದಿ ಮ್ಯಾಗ ಗುಂಡು ಹಾಕಿ ಕೊಲ್ಲುತ್ತೇನೆ ಎಂದು ಗುಂಡು ಹಾರಿಸಿದ. ಆಗ ಭೀಮ -

"ಭೀಮನು ಇದಿರಿಗೆ ನಿಂತಾ
ಐನೂರ ಮಂದಿಗೆ ಮಲತಾ
ಬಾಲನು ಮಾಡಿದ ಕಸರತ್ತ
ಕುದುರೆ ಕಡಿದಾನ ಹತ್ತಾ
ರಾಮನ ಕಡತ ವಿಪರೀತ
ಕಾವಲಿ ಹರಿತೋ ರಕ್ತ

ಕೂಗತಾನೋ ಕಡಿ ಕಡೀರ ಅಂತಾ
ಸಾವಿರ ಆಳಗೆ ಒಬ್ಬ ಮುರಿತ
ನಾಲ್ಕು ಮಂದಿ ಹೀಂಗ ಕಡದ ಸತ್ತರೂ ಭಂಟರ್ ಅನಿಸ್ಯಾರ ಜನಕ"

ಹೀಗೆ ಶೂರರೆನಿಸಿಕೊಂಡು ಪರಸ್ಪರರು ಕೂಗಾಡಿ ಗ್ರಾಮದ ನೂರಾರು ಮುಗ್ಧ ಜನರು ಸತ್ತರೂ ಇಡೀ ಗ್ರಾಮವನ್ನೇ ಲೂಟಿ ಮಾಡಿ ಸುಟ್ಟು ಹಾಕಿದ ಚಿತ್ರ ಕರುಳ ಕತ್ತರಿಸುವಂತೆ ಚಿತ್ರಿತವಾಗಿದೆ. ಇಲ್ಲಿ ಚಿತ್ರಿತವಾಗಿರುವ ಮಾತು ಪ್ರತಿಯೊಂದು ರೋಚಕವೆನಿಸದೇ ಇರಲಾರದು. ಭೀಮ ಎನ್ನುವರು ೫೦೦ ಸೈನಿಕರನ್ನು ಸೆದೆಬಡಿದ. ಬಾಲ ಹತ್ತು ಕುದುರೆ ಸಿಪಾಯಿಗಳನ್ನು ಕಡಿದು ಹಾಕಿದ ರಾಮನ ಕಡಿತ ವಿಪರೀತ ರಕ್ತದ ಕಾಲುವೆಯೇ ಹರಿಯಿತು. ಸೈನಿಕರು ಸಾವಿರ ಜನ, ಇವರು ನಾಲ್ಕೈದು ಜನ, ಒಬ್ಬೊಬ್ಬರಾಗಿ ಬಲಿಯಾದರು. ಆರು ಗುಂಡು ತಾಗಿ ಹನುಮ ನೆಲಕ್ಕೆ ಬಿದ್ದಾದ ಎಲ್ಲ ಜನ ಅವನ ಸುತ್ತ ಬೋರಾಡಿ ಅಳುತ್ತ ನಿಂತರು. ಅಷ್ಟರಲ್ಲಿ ಕುದುರೆ ಏರಿ ಬರುತ್ತಿದ್ದ ಸವಾರನ ಕುದುರೆಯ ಕಾಲನ್ನೇ ಭೀಮ ಕತ್ತರಿಸಿ ಹಾಕಿದ, ಆ ಸವಾರ ನೆಲಕ್ಕುರುಳಿದ ಇಲ್ಲಿನ ಶಬ್ದ ಭಂಡಾರ, ಶಬ್ದ ಸಂಪತ್ತು. ಒಂದಕ್ಕೊಂದು ಮುತ್ತ ಪೋಣಿಸಿದಂತೆ ಮಾತಿನ ಚಕಮಕಿ ಅವರ ವಿರೋಚಿತ ಮಾತು ಇವೆಲ್ಲವನ್ನು ಕೇಳಿದಾಗ ಸದ್ಯ ನಡೆದಿದೆಯೋ ಅನ್ನುವಂತೆ ಭಾಸವಾಗುತ್ತದೆ.

ಇಂತಹ ಸಮಯದಲ್ಲಿ ರಾಮಿ ಎಂಬುವವಳು ಕತ್ತಿ ಬೀಸಿ ಮೂರು ಸೈನಿಕರನ್ನೇ ಕತ್ತರಿಸಿದಳು. ಅಲ್ಲದೇ ಆರು ಕುದುರೆಯನ್ನು ಕಡಿದು ಹಾಕಿದಳು. ಕಡೆಗೆ ಬಾಲನ ಶೌರ್ಯಕ್ಕೆ ಗುಂಡು ಸಿಡಿದು ಅವಳು ಬಿದ್ದಳು. ಊರೆಲ್ಲಾ ಲೂಟಿ ಆಯಿತು. ಮನಿ ಮನಿ ಹೊಕ್ಕು ಸಿಪಾಯಿಗಳು ಊರಲ್ಲಿ ಏನೂ ಬಿಡಲಿಲ್ಲ. ದನ-ಕರು ಉಳಿಯದೇ ಸಣ್ಣ ಕೂಸು ಸತ್ತವು ಬೆಂದಕಿ ಹಚ್ಚಿದಾಗ ಇಡೀ ಊರೇ ಸುಟ್ಟಿತು. ಬ್ರಿಟಿಷರ ದಂಡು ಇದ್ದಬಿದ್ದ ಸಾಮಾನುಗಳನ್ನು ಹೇಗೆ ತೆಗೆದುಕೊಂಡರು ಎಂಬುದು ಇಲ್ಲಿ ಮನಮಿಡಿಯುವಂತೆ ಚಿತ್ರಿತವಾಗಿದೆ.

"ಕತ್ತಿ ಕುದುರಿ ಮುತ್ತು ಮಾಣಿಕ್ಯ ಯಾವುದು ಬಿಡಲಿಲ್ಲ
ಬೆಳ್ಳಿ-ಬಂಗಾರ, ಅರಳಿನ ಉಂಗುರ, ಹೊನ್ನ ಉಂಗುರಗೋಳ
ಸರಗಿ ಸರಪಳಿ ಬುಗುಡಿ ಬಾವಲಿ ಬಿಡಲಿಲ್ಲ
ಕಡಗ ಕಂಕಣ ನಡುವಿನ ಡಾಬಾ ನಡಕ ಕಟ್ಯಾರು ಮೂಲ
ಕುಬಸಾ ಸೇರಿ ಹಪ್ಪಳಾ ಸ್ಯಾಂಡಿಗಿ ಕುರ್ಚಿಗಿ ಕುಡಗೋಲ
ಕೊಡಲಿ ಕೋಟಿ ಕಂಡ ಕಬ್ಬಿನ ಮೊಸರು ಬೆಣ್ಣೆ ಹಾಲ
ಉಪ್ಪ ಎಣ್ಣೆ ಅರಿಶಿಣ ಜೀರಿಗಿ ಅಕ್ಕಿ ಸಕ್ರೆ ಬೆಲ್ಲ
ಗಂಗಾಳ ಚರಗಿ ಮಂಗಳಸೂತ್ರ ತಕ್ಕೊಂಡು ಹೋದಾರ
ಬೀಸುಕಲ್ಲ
ಹಾಳ್ ಆಗಿ ಹೋದಿತೋ ಇಷ್ಟು
ವರ್ಣಿಸಿ ಹೇಳಲು ಎಷ್ಟು

ಯೆಲ್ಲಾ ತಗೊಂಡಾರೋ ಸಿಕ್ಕಷ್ಟೋ
ಸರ್ದ ನಿಂತಾರೋ ಊರಿಗೆ ಕೊಳಳಿ ಕೊಟ್ಟ
ಬೂದಿ ಮಾಡ್ಯಾರ ಹಲಗಲಿ ಸುಟ್ಟ
ಹಲಗಲಿ ಗುರ್ತ ಎಳ್ಳಷ್ಟು
ಕಾಣಸ್ತ ಹೋದಿತೋ ಕೆಟ್ಟು"

ಹೀಗೆ ಬ್ರಿಟಿಷರ ಅಮಾನುಷಕರವಾದ ಕೃತ್ಯದಿಂದ ಎಂತಹ ಅಘಾತವಾಗಿತ್ತೆಂಬುದನ್ನು ಕವಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ.

ಬ್ರಿಟಿಷರು ಶಸ್ತ್ರಗಳನ್ನು ಒಂದೇ ಊರಿನಲ್ಲಿ ಇಷ್ಟು ಹಾಳು ಮಾಡಿದರೇ ಇಡೀ ಭರತಖಂಡದ ತುಂಬೆಲ್ಲಾ ಎಷ್ಟು ಹಾಳಾದೀತೆಂಬುದನ್ನು ಯೋಚಿಸಿದರೆ ಎಂತಹ ಭಯಾನಕರ ಕೃತ್ಯಗಳನ್ನು ಅವರು ಎಸಗುತ್ತಿದ್ದರೆಂಬುದು ಇದರಿಂದ ತಿಳಿಯಬಹುದು. ಇಂತಹ ಅನ್ಯಾಯವನ್ನು ವಿರೋಧಿಸಿ ಬ್ರಿಟಿಷರಂತಹ ಜಾಗತಿಕ ಮಟ್ಟದ ಸಾರ್ವಭೌಮರನ್ನು ಎದುರಿಸಿ ಹೋರಾಡಿದ ಹಲಗಲಿ ಬೇಡರ ಶೌರ್ಯ ಪ್ರತಾಪಗಳು ಖಂಡಿತ ಘನನೀಯ. ಬ್ರಿಟಿಷರ ವಿರುದ್ಧ ಭಾರತೀಯರನ್ನು ಬಡಿದೆಬ್ಬಿಸುವಲ್ಲಿ ಇಂತಹ ವೀರರ ಚಿಂತನೆ ಆಚರಣೆಗಳು ಪ್ರೇರಕಕಾರಕಗಳಾಗಿದ್ದವು. ಆದ್ದರಿಂದಲೇ ಜನಪದ ಸಾಹಿತ್ಯದಲ್ಲಿ ವೀರಗೀತೆಗಳ ರೂಪದಲ್ಲಿ ಈ ವೀರರ ಕಥನ ದಾಖಲಾಗಿದೆ.

**೫. ರಣವಿಕ್ರಾಂತ ಭೀಮರಾವ್ ಮುಂಡರಗಿ (ಕ್ರಿ.ಶ. ೧೮೫೮)**

ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ನಾಗನಗೌಡನಾದ ರಂಗರಾಯನ ಪುತ್ರನೇ ಭೀಮರಾಯ. ಮುಂಡರಗಿ ಬೀಮರಾಯನು ಯಾವ ಅರಸು ಮನೆತನಕ್ಕೂ ಸೇರಿದವನಲ್ಲ. ಆದರೆ ಇವರ ತಂದೆಯೂ ಪೇಶ್ವೆಯ ಕಾಲದಲ್ಲಿ ನ್ಯಾಯಾಧೀಶನಾಗಿದ್ದನು. ಆದರೆ ವೈಯಕ್ತಿಕವಾಗಿ ಇವನಿಗೇನು ಬ್ರಿಟಿಷರ ಕೂಡ ದ್ವೇಷ ಇರಲಿಲ್ಲ. ಬ್ರಿಟಿಷರ ಶೋಷಣೆಯಿಂದ ಸಮಗ್ರ ಭಾರತವೇ ಅಧೋಗತಿಗೆ ಬೀಳುತ್ತದೆ ಎಂಬ ಜ್ಞಾನೋದಯವೇ ಅವರಿಗೆ ಆಯಿತು. ಇದರಿಂದ ಬ್ರಿಟಿಷರ ವಿರುದ್ಧ ಸೈನ್ಯ ಕಟ್ಟಿ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿ ಪಿತೂರಿ ನಡೆಸಿದನು. ಎಲ್ಲವನ್ನು ತಿಳಿದ ಆಂಗ್ಲರು ಭೀಮರಾಯನಿಗೆ ಎಚ್ಚರಿಕೆ ಕೊಟ್ಟರೂ ಅವನ ಮನಸ್ಸು ಬದಲಾಯಿಸಲಿಲ್ಲ. ಇದರಿಂದ ಬ್ರಿಟಿಷರಿಗೂ ಮತ್ತು ಭೀಮರಾಯನಿಗೂ ಯುದ್ಧ ಅನಿವಾರ್ಯವಾಯಿತು.

"ಮದ್ದು ಗುಂಡು ಸೋರುಪ್ಪುಗಂಧಕ
ಯುದ್ಧಡಗಿಸಿಕೊಂಡವರು
ಭಾರಿ ಶಿಕ್ಷೆ ಕಡೆ ಒಳಗಾಗುವರು
ಕಂಪನಿಯವರು ಸಾರಿ ಹೇಳಿದರು
ದೇಶದ ಮದ್ದುಗುಂಡು ಕೊಂಡಾರು
ಹಮ್ಮಿಗೆ ದೇಸಾಯಿ ಬಳಿಗೆ ಬಂದಾರ
ಮದ್ದುಗುಂಡು ಕಠಾರಕತ್ತಿ
ನಿಮಗಿದ್ದರೆ ಕೊಡುಯೆಂದಾರು"

ಬ್ರಿಟಿಷರು ಹಮ್ಮಿಗೆ ದೇಸಾಯಿಯವರಿಗೆ ಬಂದು ಎಲ್ಲಾ ಶಸ್ತ್ರಾಸ್ತ್ರಗಳನ್ನು ಕೊಡು ಎಂದು ಬಂದು ಶಾನಭೋಗ ಕೇಳಿದಾಗ ಶಾನಭೋಗ ನೋಡಿ ಧಾರವಾಡಕ್ಕೆ ಟಪಾಲನ್ನು ಬರೆಯುತ್ತಾನೆ.

ಆಗ ಶಾನಭೋಗ ಪಿತೂರಿಯಿಂದ ಧಾರವಾಡದಿಂದ ಬ್ರಿಟಿಷ ಅಧಿಕಾರಿಗಳು ಕುದುರೆಯೆನ್ನೇರಿ ಹಮ್ಮಿಗೆಗೆ ಬಂದು ಎಲ್ಲಿದ್ದಾನೆ. ದೇಸಾಯಿ ಎಲ್ಲಿವೆ ಮದ್ದುಗುಂಡು ಎನ್ನುತ್ತಾ ಶಾನಭೋಗವನ್ನು ಕರೆಸಿ ಕೇಳಿದಾಗ ಅವನು ಎಲ್ಲವನ್ನು ತೋರಿಸಿ ಬಿಡುತ್ತಾನೆ. ಆಗ ಹಮ್ಮಿಗೆಯ ದೇಸಾಯಿ ಈ ಬ್ರಿಟಿಷರು ನಮ್ಮನ್ನು ಬಿಡುವುದಿಲ್ಲವೆಂದು ತಿಳಿದು ಆತ ಓಡಿ ಬಂದು ಭೀಮರಾಯನಿಗೆ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ. ಆಗ ಭೀಮರಾಯನು ಮೀಸೆಯನ್ನು ತಿರುವುತ್ತಾ ಕುದುರಿ ಹತ್ತಿ ಹಮ್ಮಿಗೆಗೆ ಹೊರಡುತ್ತಾನೆ.

"ಬಿಡು ಬಿಡು ದೇಸಾಯಿ ಹಿಡಿ ಹಿಡಿ ಕತ್ತಿಯ
ನಡಿ ನಡಿ ಕುದರಿಯನೇರು
ಕರಿಯ ಬರಿಯ ಸಾಹೇಬರಿಬ್ಬರು
ಹೊನ್ನು ತಿನ್ನೋ ಭಂಟರ ಕರಸಿದರು
ಹಮ್ಮಿಗಿ ಪುರವಾಕ್ಷಣ ಹೊಕ್ಕರು
ಕಿವಿ ಮೂಗು ಶಾನಭೋಗನ ಕೊಯಿಸಿದರು ।
ಬಂದ ಸವಾರರ ಕಡಿ ಬಡೆಯೆಂದು
ದುಂದುಕರ ಮಾಡಿ ಬಿಟ್ಟಾರು"

ಪಿತೂರಿ ಮಾಡಿದ ಶಾನಭೋಗನ ಕಿವಿ ಮೂಗು ಕೊಯಿಸಿ ಅವನ ಕೈಕೆಳಗಿರುವ ಸವಾರರನ್ನು ಬಡಿದು ಬಿಡುತ್ತಾರೆ.

ಮದ್ದು ಗುಂಡುಗಳನ್ನು ದೋಚಿಕೊಂಡು ಖಜಾನೆಯ ಎಲ್ಲಾ ಬಂಗಾರ, ಬೆಳ್ಳಿಯನ್ನು ಚಕ್ಕಡಿಯಲ್ಲಿ ತುಂಬಿಕೊಂಡು ಡಂಬಳದಲ್ಲಿ ಸುಲಿಗೆ ಮಾಡಿ ಹಣವನ್ನು ತೆಗೆದುಕೊಂಡು ಹಾರೂಗೇರಿಯಲ್ಲಿ ಹಗಲೀನೆ ದರೋಡೆ ಮಾಡಿ ರೌಲೂರ ಮೇಲಿ ಇಳಿದು ರಾತ್ರಿಯಲ್ಲಿ ಕಳ್ಳನಾಗಿ ಈ ಶೂರಮಿತ್ರನನ್ನು ಮತ್ತು ಕೆಲವರು ಕೂಡಿಕೊಂಡು ಗದಗಿನತ್ತ ಹೊರಟರು. ಹೀಗೆ ಸುಸಜ್ಜಿತ ಜನಸಮುದಾಯದೊಂದಿಗೆ ಗದುಗಿಗೆ ಹೋಗಿ ಅಂಚೆ ಕಾರ್ಯಾಲಯ, ತಂತಿ ಕಾರ್ಯಾಲಯವನ್ನು ಸುಟ್ಟರು. ಅಲ್ಲಿಯ ಆಸ್ತಿಯೆಲ್ಲಾ ವಿಪ್ಲವದಲ್ಲಿ ಹಾಳಾಯಿತು. ಆದರೆ ಪೋಲಿಸರು ಈತನನ್ನು ಹಿಂಬಾಲಿಸಿಕೊಂಡು ಬಂದ ಸುದ್ದಿ ಕೇಳಿ ಸಮೀಪದ ಕೊಪ್ಪಳಕ್ಕೆ ಪಲಾಯನ ಮಾಡಿದರು. ಭೀಮರಾಯನ ದೇಸಾಯಿಯು ಬಹಿರಂಗವಾಗಿ ದಂಗೆ ಎಬ್ಬಿಸುವರೆಂದು ಖಚಿತವಾದ ಮೇಲೆ ಪೊಲೀಸರು ದೇಸಾಯಿಯ ಮನೆಗೆ ಬೆಂಕಿ ಇಟ್ಟು ಭೀಮರಾಯನನ್ನು ಹಿಡಿಯಲು ಕೊಪ್ಪಳಕ್ಕೆ ಹೋದರು.

"ಗಜಿಬಿಜಿ ಆದೀತು ನಿಜವಾದ ಭೀಮರಾಯ
ತಜವಿಜಿ ಮಾಡಿದನೆಂದು

ಪ್ರಜೆಗಳುರಿತಿ ಭಯದಲಿ ಮನನೊಂದು
ಲಿಂಗಸೂರ ಚ್ಯಾವಣಿ ಭುಗಿಲೆಂದು
ಭೀಮರಾಯನ ಹೆಂಡಿರ ಯಿಬ್ಬರ ಹಿಡಿತಂದು
ಕೊಪ್ಪಳ ಕಿಲ್ಲೆದೊಳಗೆ ಇಟ್ಟರೆಂದು
ಕಾಳಾಯುತ್ತಕ್ಷಿ ನಾಮ ಸಂವತ್ಸರ
ಜೇಷ್ಠ ಬಹುಳ ಮುಂದೆ ತಿಥಿವಂದು
ಹೆಂಡರ ಶೀರಿಯನು ಕಂಡು ಬದುಕುವ
ಭಂಡನೆ ಭೀಮರಾಯನ ತಾನು
ರಾತ್ರಿಲಿ ಕಮಟ ಬಿಟ್ಟು ಹೊಂಟಾನು
ಬೆಳಿಗ್ಗೆ ಜಾವದೊಳಗೆ ಬಂದಾನು
ಕೊಪ್ಪಳ ಅಗಸೆ ಮುರಿದು ಹೊಕ್ಕಾನು
ಹೆಂಡರ ಮಕ್ಕಳನೆ ಕೊಡಿದನು
ಒಳಗೆ ಸಿಕ್ಕ ಜನರನ್ನು ಜುಲುಮಿಲೇ
ಸಂಬಳ ಗೊತ್ತ ಮಾಡಿದನು"

ಈ ಮೊದಲೇ ಕೊಪ್ಪಳ ತಹಶೀಲ್ದಾರನು ಭೀಮರಾಯ ಕೊಪ್ಪಳಕ್ಕೆ ಬರುವನೆಂದು ತಿಳಿದು ಭೀಮರಾಯನ ಇಬ್ಬರು ಹೆಂಡಿರನ್ನು ೧೨ ವರ್ಷ ವಯಸ್ಸಿನ ಮಗನನ್ನು ಬಂದು ಚಿಕ್ಕ ಮಗುವನ್ನು ಅವನ ಮನೆಯೊಳಗೆ ಸೆರೆ ಹಿಡಿದನು.

ಹೀಗಾಗಿ ಭೀಮರಾಯನ ಬೆಳಿಗ್ಗೆ ಕೊಪ್ಪಳದ ಅಗಸೆ ಮುರಿದು ಹೆಂಡಿರು ಮಕ್ಕಳನ್ನು ಕೂಡಿಕೊಂಡನು. ಆಗ ಭೀಮರಾಯ ಕೊಪ್ಪಳಕ್ಕೆ ಬಂದಾನೆಂದು ತಹಶೀಲ್ದಾರ ಭೀಮರಾಯ ಕೆಂಚನಗೌಡರನ್ನು ಅರಸುತ್ತ ಹುಡುಕತ್ತ ಬಂದರು. ಆಗ ದಾರಿಯಲ್ಲಿ ಭೂತನಹಳ್ಳಿಯ ಭರಮಪ್ಪ ನಾಯಕನು ಭೀಮರಾಯನನ್ನು ಕಂಡು ಕೊಪ್ಪಳ ದುರ್ಗವನ್ನು ವಶಪಡಿಸಿಕೊಳ್ಳುವುದು. ಅಷ್ಟೇನು ಕಷ್ಟವಲ್ಲ ಎಂದು ತಿಳಿದು ತಹಶೀಲ್ದಾರನ ಚಲನವಲನವನ್ನು ಮುಂದಾಗಿಯೇ ಊಹಿಸಿದ ಭೀಮರಾಯ ಮತ್ತು ಕೆಂಚನಗೌಡರು ದಾರಿಯನ್ನೇ ಬದಲಿಸಿದರು.

"ಕೊಪ್ಪಳ ಸುತ್ತ ಕುದುರಿಟಳು ಪಾರಾ
ನಾಲ್ಕು ಕಡಿಗೆ ತೋಪು ತಯಾರಾ
ಹೊಡಿ ಹೊಡಿಯನಲಿ ಇಲ್ಲದೆ
ಗುಂಡುಗಳು ಕಿಲ್ಲೆ ಮಾಡಿದ ಚೂರ್ ಚೂರ್"

ಮೇ ೩೦ರಂದು ಕೊಪ್ಪಳ ಕೋಟೆಯನ್ನು ವಶಪಡಿಸಿಕೊಂಡರು. ಆಗ ಬ್ರಿಟಿಷರು ಮೇ ೩೧ರಂದು ಬೆಳಗಾಂವಿ, ರಾಯಚೂರು, ಧಾರವಾಡ, ಹೈದರಾಬಾದ್ ಈ ನಾಲ್ಕು ಕಡೆಗಳಿಂದ ಕೊಪ್ಪಳಕ್ಕೆ ಸೈನ್ಯಗಳು ಧಾವಿಸಿ ಬಂದವು. ಮರುದಿವಸ ಮುಂಜಾನೆ ಭೀಮರಾಯನ ಮೇಲೆ ಆಕ್ರಮಣ ಕಾರ್ಯಕ್ಕೆ ತೊಡಗಿದರು.

ಆಗ ಕೋಪದಿಂದ ಕರಕರ ಹಲ್ಲು ಕಡಿಯುತ್ತಾ ಕೆಂಪು ಮಾರಿಯ ಬ್ರಿಟಿಷರು ಪಡ ಪಡ ಗುಂಡು ಹಾರಿಸುವರು. ಆಗ ಭೀಮರಾಯ ಅವರನ್ನು ಬೆನ್ನತ್ತಿ ಮುನ್ನೂರು ಜನರನ್ನು ಗಟ್ಟಿನಕೋಡಿ ಬಳಗ ಹಚ್ಚಿ ಹೊಡೆಯುತ್ತಾನೆ. ಆ ಶೌರ್ಯವನ್ನು ಲಾವಣಿಕಾರನ ಮಾತಿನಲ್ಲೇ ಕೇಳಬೇಕು.

"ಕಾಲ ತುಳವುತ ಧೂಳ ಧೂಳ ಮುಸಕಲು
ಕಾಳಗ ವಾದಿತು ಪೂರಾ
ಹಾಲಕೋಡಿ ಬಾವಿ ಒಳಗೆ ಸಂದ್ಯಾರಾ
ಯತ್ತಿ ಕಡದ ಮಲತ ಬಂಟಾರಾ
ಕಣನೊಳು ಬಿದ್ದೇಳದೆ ಹೊರಳುವರಾ
ಜನಳದ ಹೊಲ್ಕ ಕರ್ಣ ಅರ್ಜುನರಾ
ಹೇಳಬೇಕು ಹಂಮಿಗೆ ದೇಸಾಯಿ
ಭೀಮರಾಯರಿಬ್ಬರಾ"

"ಹಿಂದಣ ಯುಗದೊಳು ಯಿಂದ್ರ ಜಿತನು
ರಾಯಚಂದ್ರನ ಬಲ ಹೊಡದಂತೆ
ಅಂಗದ ರಾಕ್ಷಸ ಭಯ ಹೊಕ್ಕಂತೆ
ಭೀಮರಾಯ ಜಗಳ ಇದರಂತೆ
ಗುಂಡಿನ ಶಬ್ದ ಅಳ್ಳು ಹುರದಂತೆ
ದೇಸಾಯಿಗಾಗ ಹೇಳುತಾನೆ ನಿಂತ
ಯಿಂದನ ದೋಳೆ ನಾಟ್ದಿ ನಂಮದು
ಮಂದಿ ಬಂದಿತೆಂಬುದಿಲ್ಲ ಚಿಂತೆ
ಕಿತ್ತು ಕತ್ತಿ ಕೈಯ್ಯತ್ತಿ ಸುತ್ತಾ ಮುತ್ತಾ
ತ್ತಾ ಕೇಳೋ ಬಂಟಾರಾ
ಕಡಿಯಲಿ ಹಾರುತಿದ್ದವು ಸೆರಾ
ಭೀಮರಾಯ ಕೂಡಿ ಹೊಡದ ಸರದಾರಾ
ಹರವು ತಲಿತ್ತು ಕೆಂಪು ನೆತ್ತರಾ
ಹಾರಿತು ಗುಂಡು ವಂಮಿಗೆ ಸಾವೀರಾ
ಹಂಮಿಗಿ ದೇಸಾಯಿ ಭೀಮರಾಯರು
ಅದೇ ಕ್ಷಣಕ್ಕೆ ಸಂಹ್ವಾರಾ"

ಹೀಗೆ ಬ್ರಿಟಿಷರ ಕೂಡ ಯುದ್ಧ ಮಾಡುತ್ತ ಭೀಮರಾಯ ಹಮ್ಮಿಗಿಯ ಕೆಂಚನಗೌಡರು ತಮ್ಮ ಪ್ರಾಣದ ಹಂಗು ತೊರೆದು ಅವರ ಕೂಡ ಹೋರಾಡಿ ತಮ್ಮ ಪ್ರಾಣವನ್ನೇ ಕಳೆದುಕೊಂಡು ಬಿಡುತ್ತಾರೆ. ಈ ಸುದ್ದಿ ಟೆಯಲರನಿಗೆ ಸುದ್ದಿ ಹತ್ತಿ ಬಂದು ಅವರ ಕೂಡ ಹೋರಾಡಿದವರಿಗೆ ಬೇಡಿ ಹಾಕಿಸಿ ಬೆಣ್ಣೆ ಹಾಲು ಉಣ್ಣುವ ಬಾಯಲ್ಲಿ ಮಣ್ಣು ವಗಿ ಎಂದನು.

ಹೀಗೆ ಕಂಪನಿ ಸರ್ಕಾರ ದೊಡ್ಡ ದೊಡ್ಡ ಕಿಲ್ಲೆ ಕೆಡವಿ ತೋಪು ಸುಟ್ಟು ಇದ್ದ ಮದ್ದನ್ನು ನೀರಿನೊಳಗೆ ಹಾಕಿಸಿ ಬಿಡುತ್ತಾರೆ. ಅದಕ್ಕೇನು ಲೆಕ್ಕವೇ ಇಲ್ಲ ಎನ್ನುತ್ತಾರೆ ಲಾವಣಿಕಾರ.

ಪೂರ್ವಜನ್ಮದಲ್ಲಿ ಇವರು ಏನಿದ್ದಾರೆಂಬುದನ್ನು ಪಾರ್ವತಿಯೇ ಒಬ್ಬಳು ಎಂದು ಹೇಳುತ್ತಾ ಆಗ ಭೀಮರಾಯ ಮತ್ತು ಹಮ್ಮಿಗಿ ದೇಸಾಯಿಯರ ಶವಗಳನ್ನು ತರುವ ರೀತಿ ದುಃಖ ಉಕ್ಕೇ ಹರಿಯುತ್ತಿದೆ.

"ಹಮ್ಮಿಗಿ ದೇಸಾಯಿ ಭೀಮರಾಯರನು
ಕೈಲಿಡದು ಯಳಸಿ ತಂದರು ಶವಗಳನು
ಗವಿಯ ಮಠದ ಬಯಲೊಳು ಹಾಕಿಸುವನು
ಸುತ್ತಲು ಊರ ಜನರು ಮರುಗಿ
ಅಳುತ್ತಾರೆ ನೋಡಿ ಹೆಣಗಳನು"

ಆಗ ಭೀಮರಾಯನ ಹೆಂಡರು ಗಗನ ಒಡೆದು ಹೋಗುವ ರೀತಿಯಲ್ಲಿ ಬೋರೆಂದು ಅಳುತ್ತಾರೆ. ಈ ರೀತಿಯಾಗಿ ಮುಂಡರಗಿ ಭೀಮರಾಯನು ಬ್ರಿಟಿಷರ ವಿರುದ್ಧ ಹೋರಾಡಿರುವುದನ್ನು ನೋಡಲಾಗುತ್ತದೆ.

**೬. ನರಗುಂದದ ಬಾಬಾಸಾಹೇಬ (ಕ್ರಿ.ಶ. ೧೮೫೮)**

ನರಗುಂದ ಗದಗ ಜಿಲ್ಲೆಯ ಒಂದು ತಾಲೂಕು, ಇಲ್ಲಿನ ದೊರೆ ದಾದಾಜಿರಾವ್‌ಭಾವೆ ಎಂಬುವನ ಮಗ ಬಾಬಾ ಸಾಹೇಬ ಭಾವೆ. ಇವನನ್ನು ಭಾಸ್ಕರರಾಯ ಭಾವೆ ಎಂದು ಕರೆಯುತ್ತಿದ್ದರು. ಇವನೆ ಅಲ್ಲಿಯ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದನು. ಕಾಲಾಂತರದಲ್ಲಿ ಅವನು ಬ್ರಿಟಿಷರ ಮೇಲೆ ತಿರುಗಿ ಬಿದ್ದನು. ದತ್ತಕ ನಿರಾಕರಣವೇ ಅದಕ್ಕೆ ಮೂಲ ಕಾರಣವಾಗಿತ್ತು. ದತ್ತು ಪದ್ಧತಿಯನ್ನು ನಿರಾಕರಿಸಿದ ಬ್ರಿಟಿಷರ ವಿರುದ್ಧ ಬಾಬಾಸಾಹೇಬ ನೇರೆ ಹೊರೆ ಸಂಸ್ಥಾನದವರನ್ನು ಕೂಡಿಸಿಕೊಂಡು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿ ಬ್ರಿಟಿಷರ ಜೊತೆ ಸಮರವನ್ನು ಸಾರಿದ.

ಬಾಬಾಸಾಹೇಬನು ಸ್ವಾತಂತ್ರ್ಯ ವೀರನಾಗಿ ಜನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದ್ದಾನೆ. ಇವನನ್ನು ಕುರಿತು ಅನೇಕ ಲಾವಣಿಗಳು ಸಿಗುತ್ತವೆ. ಎ.ಎಸ್. ಹೂಗಾರವರು ಸಂಪಾದಿಸಿದ ಜನಪದ ನರಗುಂದ ಎಂಬ ಪುಸ್ತಕದಲ್ಲಿಯ 'ನರಗುಂದದ ಸ್ವಾತಂತ್ರ್ಯ ನಾಯಕ' ಎಂಬ ಲಾವಣಿಯನ್ನು ಆರಿಸಿಕೊಂಡು ವಿಶ್ಲೇಷಿಸಿದ್ದೇವೆ.

ನರಗುಂದ ಬಾಬಾಸಾಹೇಬನು ದೇಶಾಭಿಮಾನಿಯು ಮಹಾಸಾಹಸಗಾರನೂ ಆದ ಅವನು ಸ್ವಾತಂತ್ರ್ಯ ಸಮರವನ್ನು ಹೂಡಿದ ಧೀರ ಅವನು, ಬ್ರಿಟಿಷರ ಕೂಡ ಭೀಕರ ಕದನ ಹೂಡಿ ಅವರ ಬಿಂಕಿನ್ನೇ ಬಿಡಿಸಿದ ಬಹದ್ದೂರ ನರಗುಂದ ಬಾಬಾಸಾಹೇಬ. ಇವನ ಆಳ್ವಿಕೆಯಲ್ಲಿ ನರಗುಂದ ಸಂಸ್ಥಾನ ಅಷ್ಟೈಶ್ವರ್ಯದಿಂದ ತುಂಬಿತ್ತು. ಅವರ ಆಳ್ವಿಕೆ ಎಲ್ಲರಿಗೂ ಪ್ರಿಯವಾಗಿತ್ತು.

ಬಾಬಾಸಾಹೇಬನಿಗೆ ಒಂದು ಮಗು ಆಗಿತ್ತು. ಆದರೆ ದುರ್ದೈವ ವಶಾತ್ ಅದು ೭ ತಿಂಗಳಲ್ಲಿಯೇ ತೀರಿಕೊಂಡಿತು. ಇದರಿಂದ ಅಪರಿಮಿತಿವಾದ ದುಃಖವನ್ನು ಅನುಭವಿಸುವಂತೆ ಮಾಡಿತು. ಅಷ್ಟೇ ಅಲ್ಲ ಕಡೆಯವರೆಗೂ ಸಂತಲೆ ಆಗದೆಯೇ ಅವರಿಗೆ ಚಿಂತೆ ಹತ್ತಿತ್ತು.

"ಪಟ್ಟದ ಬಾಧ್ಯತೆಗೆಂದು ದತ್ತಕ ಪುತ್ರನನ್ನು
ತೆಗೆದುಕೊಳ್ಳಲು ಆಲೋಚನೆ ನಡದೀತು-ಕಂಪನಿ
ಸರಕಾರದಪ್ಪಣೆಯನು ಕೇಳಬೇಕಾತು"

ಅದೇ ತಾನೇ ಬ್ರಿಟಿಷರು ದತ್ತಕ ಮಕ್ಕಳಿಗೆ ಹಕ್ಕಿಲ್ಲ ಎಂಬ ನೀತಿ ಪಾಲಿಸಲಾಗಿತ್ತು. ಹೀಗಾಗಿ ಕಂಪನಿ ಸರಕಾರದ ಹುಕುಂ ತೆಗೆದುಕೊಳ್ಳಬೇಕಾಗಿತ್ತು. ಇದು ಅನಿವಾರ್ಯವು ಆಗಿತ್ತು.

ಸ್ವಾಭಿಮಾನಿಯಾದ ಬಾಬಾಸಾಹೇಬರು ನಿರ್ವಾಹವಿಲ್ಲದೇ ದತ್ತಕ ಅಪ್ಪಣೆಯನ್ನು ಕೇಳಿ ಅರ್ಜಿ ಸಲ್ಲಿಸಿದರು. ಆ ಅರ್ಜಿಯಲ್ಲಿ ಮಕ್ಕಳಿಲ್ಲದವನಾದ ನಾನು ದತ್ತಕ ತೆಗೆದುಕೊಳ್ಳಲು ಕಂಪನಿ ಸರಕಾರ ಅಪ್ಪಣಿ ಕೊಡಬೇಕೆಂದು ಅದರಲ್ಲಿ ಬರೆದಿತ್ತು. ಆ ಅರ್ಜಿ ಗವರ್ನರ್ ಸಾಹೇಬರ ಹತ್ತಿರ ಹೋಗಿತ್ತು. ಅವರು ಕೋರ್ಟಿಗೆ ಕಳಿಸಿದ್ದರು. ಕೋರ್ಟಿನವರು ತೀರ್ಮಾನಿಸಿ ದತ್ತಕ ತೆಗೆದುಕೊಳ್ಳಬಹುದೆಂದು ಸುದ್ದಿ ಕಳಿಸುತ್ತಾರೆ. ನಂತರ ಬಾಬಾಸಾಹೇಬ ಸಂತೋಷ ಪಡುತ್ತಾನೆ.

ಹಿಂದುಗಡೆ ಮತ್ತೊಂದು ಉತ್ತರ ಬರುತ್ತದೆ. ಅದರಲ್ಲಿ ಇನ್ನೂ ಮಾತುಕತೆ ಆಗಿಲ್ಲ. ಇನ್ನೊಮ್ಮೆ ಇನಾಮ ಕಮಿಟಿಯವರು ವಿಚಾರ ಮಾಡುತ್ತಾರೆ. ಈಗ ಸದ್ಯ ದತ್ತಕ ತೆಗೆದುಕೊಳ್ಳಬಾರದೆಂದು ಕಳಿಸಿದರು.

ಇನಾಮ ಕಮೀಟಿಯಲ್ಲಿ ಕುಹಕ ಬುದ್ಧಿಯವನಾದ ಮ್ಯಾನ್ಸನ್ ಸಾಹೇಬನೇ ಮುಖ್ಯಸ್ಥನಿದ್ದನು. ಅವನು

"ದತ್ತಕ ತೆಗೆದುಕೊಳ್ಳಲಾಕ ಅಪ್ಪನೆ ಇಲ್ಲಂತ
ಕಮಿಟಿಯವರು ಕಳಿಸ್ಯಾರ ಉತ್ತರವನ್ನು - ಇದ
ಕೆಲ್ಲಾ ಜೀತಗಾರ ಮ್ಯಾನ್ಸನು"

ಈ ಸುದ್ಧಿಯನ್ನು ಕೇಳಿ ವ್ಯವಸನಗೊಂಡ ಬಾಬಾಸಾಹೇಬ ದ್ವೇಷಾಗ್ನಿಯಿಂದ ನೋಡಿ ಅವನ ಮೇಲೆ ವಿಷಕಾರತೊಡಗಿದನು. ವಿಚಾರಕ್ರಾಂತನಾಗಿ ಕುಳಿತಾಗ ಕೆಲವು ಕಡೆ ಈ ದತ್ತಕದ ಹಕ್ಕಿನ ಬಗ್ಗೆ ಆದ ಕೆಲವು ಕ್ರಾಂತಿ ಸಂದೇಶವನ್ನು ಕೇಳಿ ಮನಸ್ಸಿನಲ್ಲಿ ಸಂತೋಷ ತಾಳಿ ಕೋಪದಿಂದ ಆಂಗ್ಲರಿಗೆ ನನ್ನ ಕೈಯನ್ನು ತೋರಿಸಿಯೇ ತೀರುತ್ತೇನೆಂದ ಹಟ ಹಿಡಿದನು. ಆಗ ವಿಚಾರ ಮಾಡುತ್ತಾ -

"ಗವರ್ನರ್ ಜನರಲ್‌ನಾದ ಡಾಲಹೌಸಿಯು ಆಳ್ವಿಕೆಯ
ಸಂಸ್ಥಾಪಕರಿಗೆ ಮಾಡಿತ್ತಪಮಾನವನು - ತಮ್ಮ

ಕರಾರಿಗೆ ವಿರುದ್ಧ ಅವನು ನಡೆಸಿದ್ದನು
ಬಾಬಾಸಾಯ್ಬ ಅಂತಾನ ನಮ್ಮ ಸಂಸ್ಥಾನಗಳಿಗೆ
ನಾವೇ ಬಾಧ್ಯಸ್ಥರು ಅಲ್ಲವೇನು - ಅದನ್ನು
ಕೇಳಲಾಕ ಈ ಮಕ್ಕಳ್ಯಾರು ಅಂತಾನು - ಆ
ಆಂಗ್ಲರು ನಡಿಸ್ಯಾರ ನಮಗೆ ಮೋಸವನು
ನಮ್ಮ ಸ್ವಾತಂತ್ರ್ಯವನ್ನು ಹರಣ ಮಾಡಬೇಕೆಂದು
ತೆಗೆದಾರ ಅವರು ಈ ಮುಕ್ತಿಯನ್ನು - ನಾವು
ನಾಶ ಮಾಡಬೇಕು ಮೊದಲೇ ಅವರನ್ನು"

ಈ ರೀತಿ ಸಿಟ್ಟಿಗೆದ್ದ ಬಾಬಾಸಾಹೇಬ ಕೋಪದಿಂದ ಭಾರತ ಮಾತೆಗಾಗಿ ಯಾಕೆ ನನ್ನ ಸರ್ವಸ್ವವನ್ನು ಅರ್ಪಿಸಬಾರದೆಂದು ತಿಳಿದು ದೃಢಸಂಕಲ್ಪ ಮಾಡಿ ತಾನೇ ಮುಂದಾಳುತನ ವಹಿಸಿ ತನ್ನ ವೀರರಿಗೆಲ್ಲಾ ಕ್ರಾಂತಿ ಸಂದೇಶವನ್ನು ಬೀರಿ ಕೋಟಿ ಬಳಗ ಅನ್ನ, ನೀರು ಸಂಗ್ರಹವನ್ನು ಮಾಡಿಸುತ್ತಾನೆ.

ರಾಜದ್ರೋಹಿಗಳು ಯಾರೋ ಹೋಗಿ ಕಮೀಷನರ್ ಜೇಕಬ್ ಸಾಹೇಬನಿಗೆ ತಿಳಿಸಿಬಿಡುತ್ತಾರೆ. ಎಲ್ಲೆಲ್ಲೂ ಬಂಡಾಯ ಏಳಬಾರದೆಂದು -

"..........ಶಸ್ತ್ರ
ಕಳಿಸಿಕೊಡಬೇಕು ಸಂಸ್ಥಾನಿಕರು ನಮ್ಮಲ್ಲಿ - ಲೆಸ್ವರ್
ಅಂಬುವನು ನೇಮಿಸ್ಯಾರೋ ಆ ಕೆಲಸದ ಮ್ಯಾಲಿ"

ಹುಕುಂ ಬಂದು ಬಾಬಾಸಾಹೇಬನಿಗೆ ಮುಟ್ಟುತ್ತದೆ. ಆಗ ಮನದಲ್ಲಿ ಕೋಪ ತಾಳಿ ಶಸ್ತ್ರಾಸ್ತ್ರಗಳನ್ನು ಕಳಿಸುವಂತೆ ಕಳಿಸಿ ದಾರಿಯಲ್ಲಿ ಅವರನ್ನು ತನ್ನ ವೀರರಿಂದ ಬಿಡಿಸಿ ಶಸ್ತ್ರವನ್ನು ಕಸಿದುಕೊಂಡು ಅವರನ್ನು ಹೊಡೆದು ಓಡಿಸಿ ಬಿಡುತ್ತಾರೆ. ಆಗ ಲೆಸ್ವರಸಾಹೇಬ ಜೇಕಬ್ ಸಾಹೇಬ ಬೆಂಕಿ ಕಾರುತ್ತ ಆಗ ಜೇಕಬ್ ಮ್ಯಾನ್ಸನ್ ಸಾಯ್ಬ ಕುರಂದವಾಡದಲ್ಲಿದ್ದ ಈ ಸುದ್ಧಿಯನ್ನು ಅವನಿಗೆ ತಿಳಿಸುತ್ತಾನೆ. ಸುದ್ಧಿ ತಿಳಿದ ತಕ್ಷಣ ಸೈನಿಕರನ್ನು ಕರೆದುಕೊಂಡು ತನ್ನ ಹಿಂಬಾಲಿನಲ್ಲಿ ಸಜ್ಜಾಗಿ ಮ್ಯಾನ್ಸನ್‌ನ ಶೋಧನೆಗಾಗಿ ಹೊರಡುತ್ತಾನೆ. ಸೂರೆಬಾನಕ್ಕೆ ಮ್ಯಾನಸನ್ ಬಂದಿದ್ದನ್ನು ಪತ್ತೆ ಹಚ್ಚಿ ಬಾಬಾಸಾಹೇಬ ಎಂಟುನೂರು ಸೈನಿಕರನ್ನು ಕರೆದುಕೊಂಡು ಬಂದನು.

ಈ ಸುದ್ದಿ ಮ್ಯಾನಸನ್‌ನಿಗೆ ಹೇಗೋ ಗೊತ್ತಾಗುತ್ತದೆ. ಆತ ಅಲೋಚಿಸುತ್ತಾ ನಾನು ಇಷ್ಟೇ ಸೈನ್ಯದಿಂದ ಬರಬಾರದಾಗಿತ್ತು ಅಂದನು. ಬಾಬಾಸಾಹೇಬನ ಸೈನಿಕರು ಧರ್ಮಶಾಲೆಯಲ್ಲಿ ಅಡಗಿ ಕುಳಿತಿದ್ದರು. ಮ್ಯಾನಸನ್ ಹೆದರದೇ ಧೈರ್ಯ ಮಾಡಿ ಬೇಗನೇ ಪಿಸ್ತೂಲಿನಲ್ಲಿ ಗುಂಡು ತುಂಬಿ ಸೈನಿಕರನ್ನು ಹೊಡೆದು ಮ್ಯಾನಸನ್ ಪಾರಾದನು.

ಮ್ಯಾನಸನ್ ಓಡಿ ಹೋಗಿದ್ದನ್ನು ನೋಡಿ ಗಾಬರಿಯಾದ ಬಾಬಾಸಾಹೇಬ ತನ್ನ ಸೈನಿಕರ ಮೇಲೆ ಸಿಟ್ಟಾಗಿ ಬೆನ್ನು ಹತ್ತಿ ಅವನನ್ನು ಬಿಡಬ್ಯಾಡರಿ ಎಂದು ಆಜ್ಞೆಯನ್ನು ಹೊರಡಿಸಿದ.

ಆಗ ಮ್ಯಾನಸನ್ ಓಡಿ ಹೋಗಿ ಮಾರುತಿ ದೇವಸ್ಥಾನದ ಗುಡಿಯಲ್ಲಿ ಅವಿತುಕೊಂಡು ಬಾಗಿಲವನ್ನು ಹಾಕುತ್ತಾನೆ. ಯಾರ ಕೈಗೂ ಸಿಗದೇ ಹೋದನಲ್ಲಾ ಎಂದು ಗಾಬರಿಯಾಗಿ ಮಾರುತಿ ದೇವಸ್ಥಾನದ ಕಡೆಗೆ ಬರುತ್ತಾರೆ. ಇವನು ಇಲ್ಲಿ ಅವಿತುಕೊಂಡು ಕುಂತಿದ್ರು ಕುಂತಿರಬಹುದೆಂದು ಹುಡುಕಿದಾಗ ಅವನು ಮೂಲೆಯಲ್ಲಿ ನಡುಗುತ್ತ ಕುಳಿತಿರುತ್ತಾನೆ.

"ವಿಷ್ಣು ಕುಲಕರ್ಣಿ ಎಂಬ ತರುಣ ವೀರ
ಕದಾ ಒದ್ದನು ಧಡಾ ಧಡಾ - ಮುರಿದು
ಹೊಕ್ಕು ಒಳಗೆ ಹೊಡೆದನು ಸೆಡ್ಡ-ಕಳ್ಳ
ಅಡಗಿ ಕುಂತೀ ಯುದ್ಧಕ ಬಾರೊ ಗಡಾ
ಮ್ಯಾನಸನ್ನನ ಗತಿ ಮೊದಲ ಮುಗದ ಹೋಗಿತ್ತೋ
ಮೂಲ್ಯಾಗ ಕುಂತ ನಡಗಿತದ್ದಾ ಮೂಢಾ - ವಿಷ್ಣು
ಎಳೆದು ತಂದು ಮ್ಯಾನ್ಸನ್‌ನೆಂದು ಕೋದ ರುಂಡಾ
ಮ್ಯಾನಸನ್ನನ ಸೈನ್ಯ ಎಲ್ಲಾ ನಾಶ ಮಾಡಿ ಬಿಟ್ಟಿರವರಾ
ಬಾಬಾಸಾಹೇಬ ಸೇಡ ತೀರಿಸಿಕೊಂಡಾ - ಸ್ವಲ್ಪ
ಸಮಾಧಾನ ಮನಸ್ಸಿಗೆ ಮಾಡಿಕೊಂಡಾ - ಅಗಸೇ
ಬಾಗಿಲಿಗೆ ಕಟ್ಟಿಸಿದ ತಂದು ರುಂಡಾ"

ಆಯಿತು ಮ್ಯಾನ್ಸನ್‌ನನ್ನು ಕೊಂದರು. ಇದರಿಂದ ಮತ್ತಷ್ಟು ಕೋಪ ತಾಳಿದ ಬ್ರಿಟಿಷರು ನಮ್ಮೊಡನೆ ಯುದ್ಧಕ್ಕೆ ಬರುತ್ತಾರೆಂಬುದು ಖಾತ್ರಿ ಅವರಿಗೆ ಆಗಿತ್ತು. ಅದಕ್ಕಾಗಿ ಅವರು ಬರುವುದಕ್ಕಿಂತ ಮೊದಲು ನಾವೇ ಸಜ್ಜಾಗೋಣವೆಂದು ತನ್ನ ದಂಡನ್ನು ಹುರುದುಂಬಿಸಿದ.

ಮ್ಯಾನಸನ್‌ನ ಹತ್ತಿರ ಕೆಲವು ಕಾಗದ ಪತ್ರಗಳು ಸಿಗುತ್ತವೆ. ಅದರೊಳಗೆ ಮ್ಯಾನಸನ್ನನ ಹತ್ತಿರ ಪಿತೂರಿ ಮಾಡಿದವರದು ಹೆಸರು ಇತ್ತು. ಅವರ್‍ಯಾರೆಂದರೆ ಕೃಷ್ಣಾಜಿ ಪಂತ, ಜೋಷಿ ಒನ್ಯಾಬಾಪು ಇವರು ಬ್ರಿಟಿಷರಿಗೆ ತಿಳಿಸಿದವರಾಗಿದ್ದರು.

ಬಾಬಾಸಾಹೇಬ ಬೆಂಕಿ ಕಾರುತ್ತ ನಮ್ಮ ಉಪ್ಪು ತಿಂದು ನಮ್ಮ ವ್ಯಾಲೆ ಹೋರಳ್ಯಾರಾನಾಡಿನೊಳಗೆ ಇಂಥವರು ಜನಿಸಬಾರದೆಂದು ಅವರ ಮೇಲೆ ಕ್ರಮ ತೆಗೆದುಕೊಳ್ಳುತ್ತಾನೆ.

ಯುದ್ಧ ಮಾಡಲಿಕ್ಕೆ ಎಷ್ಟು ಮದ್ದು ಬೇಕೆಂದು ನೋಡಬೇಕೆಂದು ತಾನೇ ಸ್ವತಃ ನೋಡಲಿಕ್ಕೆ ಹೋಗುತ್ತಾನೆ.

"ಬಾಬಾಸಾಹೇಬ ಸ್ವತಃ ತಾನು ಹೋಗಿ ನೋಡಿದ - ಸೆಗಣಿ
ಕೂಡಿತ್ತು ದೇಶದ್ರೋಹಿಗಳಿಂದಾ - ನೋಡಿ
ಬಾಬಾಸಾಯ್ಬ ಕುಂತಾನು ಉಸುರುಗರದಾ
ಇಂಥ ಕೃತಿಯನು ಕಂಡಂತ ಮರುಗಿ ಮರುಗಿ ತಾನು
ಎರಡು ಕಣ್ಣಿನಲ್ಲಿ ಆಗ ನೀರ ತಂದ - ಆ
ದದ್ದು ಆಗಲೆಂದು ಧೈರ್ಯ ಮಾಡಿದಾ"

ಹೀಗೆ ಸೆಗಣಿ ಕೂಡಿಸಿದ್ರೂ ಕೂಡಾ ಮದ್ದು ಇಲ್ಲ ಎಂದು ಬಿಡದೇ ಬಾಬಾಸಾಹೇಬ ಆಪ್ತಮಿತ್ರರನ್ನು, ಹಳ್ಳಿ ಜನರನ್ನು ಕೂಡಿಸಿ ಹುರುದುಂಬಿಸಿ ನಾಡಿನ ಸಲುವಾಗಿ ನಿಮ್ಮ ಜೀವ ಕೊಡರಿ ಎಂದು ಕೇಳಿಕೊಳ್ಳುತ್ತಾನೆ. ಆಗ ಹೊಸ ಮದ್ದು ತಯಾರ ಮಾಡಿರೆಂದು ಕೇಳಿ ಅವನ್ನು ತಯಾರ ಮಾಡಿಸಿ ತೋಪುಗಳನ್ನು ಬುರುಜಿನ ಮ್ಯಾಲೇರಿಸಿದನು.

ಇತ್ತ ಬ್ರಿಟಿಷರು ಮ್ಯಾನಸನ್‌ನು ಕೊಲೆಯಾದದ್ದನು ಕೇಳಿ ಸಿಟ್ಟಿಗೆದ್ದು ಮ್ಯಾಲ್ಕಮ್ ಸಾಹೇಬನನ್ನು ನೇಮಿಸುತ್ತಾರೆ. ಆಗ ಮ್ಯಾಲ್ಕಮ್ ದಂಡೆತ್ತಿ ಬಂದಾ ಬಹಳ ಕೋಪದಿಂದ ಮ್ಯಾನಸನ್‌ನನ್ನು ಕೊಂದ ಬಾಬಾಸಾಹೇಬನನ್ನು ಹೆಡಮುರಗಿ ಕಟ್ಟಿ ತರುವೆನೆಂದು ಸೇಡು ತೀರಿಸ್ಕೊಂತಿನಿ ಅಂದು ಯುದ್ಧ ಪ್ರಾರಂಭವಾಯಿತು.

ವೈರಿ ಸೈನ್ಯವು ಲೆಕ್ಕವಿಲ್ಲದೇ ಬಂದಿತು. ನರಗುಂದ ವೀರರು ಜೀವನದ ಹಂಗು ದೊರೆದು "ಕುರಿ ಹಿಂಡಿನೊಳಗೆ ತೋಳ ಹೊಕ್ಕಾಂಗ ಹೊಕ್ಕರು" ಪ್ರಾಣದ ಪರವೇ ಇಲ್ಲವಾ ಆಂಗ್ಲರ ಸೈನಿಕರನ್ನು ಲೆಕ್ಕವಿಲ್ಲದೇ ಕಡಿದರು.

ಒಮ್ಮೆಲೇ ಮುಸುಕಿದ ಮೋಡದ ಹಾಗೆ ಆಂಗ್ಲ ಸೈನಿಕರು ಮುತ್ತಿಗೆ ಹಾಕುತ್ತಾರೆ. ಮಳೆಯಂತೆ ಗುಂಡುಗಳನ್ನು ಹಾರಿಸಿದರು.

ಆದರೇನು ಮಾಡುವುದು ಮೊದಲೇ ಇವರ ಮದ್ದನ್ನು ದೇಶದ್ರೋಹಿಗಳು ಸೆಗಣಿ ಕೂಡಿಸಿ ಹಾಳು ಮಾಡಿ ಬಿಟ್ಟಿರುತ್ತಾರೆ. ರಭಸದಿಂದ ಯುದ್ಧ ಪ್ರಾರಂಭವಾದುದರಿಂದ ಏನು ಮಾಡಲು ಬರುವಂತಿಲ್ಲ. ಆ ಮೂರೇ ತೋಪಿನಿಂದಲೇ ಹೋರಾಡ ಹತ್ತಿದರು. ಆಗ ಬಾಬಾಸಾಹೇಬ ತನ್ನ ಸೈನ್ಯಕ್ಕೆ ಕೂಗಿ ಹೇಳುತ್ತಾನೆ. ಯಾರ್‍ಯಾರು ಹೆದರಬೇಡರಿ ಹಿಂದಕ್ಕೆ ಸರದು ಹಗುರ ಆಗಬ್ಯಾಡ್ರಿ ಸ್ವಾತಂತ್ರ್ಯ ಸಲುವಾಗಿ ಹೋರಾಡಿ ಉಳಿಸಿರಿ ದೇಶದ ಹೆಸರ ಎನ್ನುತ್ತಾನೆ.

ಸುಸಜ್ಜಿತವಾದ ಬ್ರಿಟಿಷರ ಶಸ್ತ್ರದ ಮುಂದೆ ಹಳೇ ಶಸ್ತ್ರಗಳ ಆಟ ನಡೆಯಲಿಲ್ಲ. ಶಕ್ತಿ ಮೀರಿ ಯುದ್ಧ ಮಾಡಿದರು. ಪ್ರಾಣ ಕೊಡುವುದಕ್ಕೆ ಸಂಕಲ್ಪ ಮಾಡಿದರು.

"ದೇಶದ್ರೋಹಿಗಳ ದ್ರೋಹದ ಮೂಲಕ
ಆಗುವ ಪ್ರಸಂಗ ಬಂತು ಪರತಂತ್ರ - ಹಿಂದಕ
ಸರಿಲಿಲ್ಲಾ ಅಷ್ಟಾದರೂ ಶೂರ ಜನರಾ"

ನರಗುಂದದ ವೀರರು ಬೇದರದೇ ತೋಪಿನಲ್ಲಿ ಯುದ್ಧ ಮಾಡುತ್ತಾರೆ. ಮದ್ದು ಗುಂಡು ತಮ್ಮ ಬಳಿ ಇರುವವರೆಗೂ ಕೋಟೆಯನ್ನು ರಕ್ಷಿಸಿದರು. ಉದಾಸೀನರಾದರೂ ವೈರಿಗೆ ಬೆನ್ನು ತೋರಿಸದೇ ಯಮನೆಡೆಗೆ ಸಾಗಿದರು.

ಮೋಸತನದಿಂದ ನರಗುಂದ ಕೋಟೆಯನ್ನು ಬ್ರಿಟಿಷರು ವಶಪಡಿಸಿಕೊಂಡರು. ಆಗ ಬಾಬಾಸಾಹೇಬನನ್ನು ಹಿಡಿಯಲಿಕ್ಕೆ ಧಾವಿಸಿದರು.

ಇಷ್ಟು ಆಗುವುದರೊಳಗಾಗಿ ಬದಲಿ ವೇಷ ಧರಿಸಿ ಬೇಗದಿಂದ ಆಗಿದ್ದು ಪಾರು ಅವನ ವೀರಮಾತೆ ಯಮುನಾಬಾಯಿ ಧರ್ಮಪತ್ನಿ ಸಾವಿತ್ರಿಬಾಯಿಯವರು ಬಾಬಾಸಾಹೇಬ ಹೋಗಿದ್ದು ತಿಳಿದು ಕುಲದೇವತೆಗೆ ಪ್ರಾರ್ಥಿಸಿ ಅರಮನೆಯಿಂದ ಹೊರಟ್ಟಿದ್ದರು. ಅತ್ತಿ-ಸೊಸೆ ಇಬ್ಬರೂ ದುಃಖ ಮಾಡುತ್ತಾ ಶತೃಗಳ ಕೈಯಲ್ಲಿ ಸಿಕ್ಕು ಅಪಮಾನಕ್ಕೀಡಾಗುವುದಕ್ಕಿಂತ ಮರ್ಯಾದೆಯಿಂದ ಮರಣವೇ ಲೇಸೆಂದು ಇಬ್ಬರು ಕೂಡಿ ಮಲಪ್ರಭಾವ ನದಿ ಬಳಿಗೆ ಹೋದರು. ಮೈಮೇಲಿನ ಆಭರಣಗಳನ್ನು ತೆಗೆದು ಇಟ್ಟರು. ಬಾಬಾಸಾಹೇಬನ ಆಯುಷ್ಯ ಬೆಳೆಯಲೆಂದು ಪರಮಾತ್ಮನನ್ನು ಪ್ರಾರ್ಥಿಸಿದರು. ಇಬ್ಬರು ಅಪ್ಪಿಕೊಂಡು ಮಡುವಿನಲ್ಲಿ ಧುಮುಕಿದರು.

ಬಾಬಾಸಾಹೇಬ ಸಿಗಲಿಲ್ಲಂತ ಚಿಂತಿ ಹತ್ತಿತ್ತು. ಬ್ರಿಟಿಷರಿಗೆ ಶೋಧಕ್ಕಾಗಿ ಹೋದರು. ಸೇವಕರು ಈ ಶೋಧಕ್ಕೆ ಫ್ರಾಂಕ್ ಸೂಟರ್ ಎಂಬುವವನ್ನು ನೇಮಿಸ್ಯಾರು ಸೂಟರ್ ಹುಡುಕಿ ಹಾಕತಾನ ಬಿಸಿ ಉಸಿರನ್ನು ಕೊನೆಗೆ ತೊರಗಲ್ಲಿನಲ್ಲಿ ಗೌಡನ ಮನೆಯಲ್ಲಿ ಸಿಕ್ಕನು.

"ಬಂಧಿಸಿ ಅವನನ್ನು ಬೆಳಗಾವಿಗೆ ತಂದಾರು-ಮ್ಯಾನಸನ್
ಕೊಲೆಯ ಆರೋಪ ಹೊರಿಸಿ ಫಾಸಿ ಕೊಟ್ಟಾರು"

ಆಗ ನರಗುಂದ ಆಂಗ್ಲರ ವಶವಾಯಿತು. ಸಂಶಯದಿಂದ ಎಷ್ಟೋ ಜನರನ್ನು ಬ್ರಿಟಿಷರು ಕೊಂದರು.

"ಮಾತೃಭೂಮಿ ಮುಕ್ತಿಗಾಗಿ ತನ್ನ
ಪ್ರಾಣ ಕೊಟ್ಟ ಬಾಬಾಸಾಹೇಬ ವೀರಾ-ಸೂರ್ಯ
ಚಂದ್ರರಿರುವತನಕಾ ಉಳಿಸ್ಯಾನ ಹೆಸರಾ
ಬ್ರಿಟಿಷರ ಕೂಡ ಭೀಕರ ಕದನ ಹೂಡಿ | ಬಿಂಕ
ಬಿಡಿಸಿದ ಬಹದ್ದೂರಾ"

ಹೀಗೆ ಬಾಬಾಸಾಹೇಬ ವೈರಿಗಳ ಕೂಡ ಹೋರಾಡಿ ತನ್ನ ಸಂಸಾರವನ್ನೇ ದೇಶಕ್ಕಾಗಿ ಬಲಿಕೊಟ್ಟ ಮಹಾಪುಣ್ಯಾತ್ಮನನ್ನು ಎಷ್ಟು ಹೊಗಳಿದರೂ ಅದು ಸಾಲದು.

ಬ್ರಿಟಿಷರು ಪ್ರತಿಯೊಂದರಲ್ಲಿಯೂ ಮೋಸದಿಂದ ಕೆಲಸ ಮಾಡಿ ತಮಗೆ ಬೇಕಾದುದ್ದನ್ನು ಪಡೆದುಕೊಳ್ಳುತ್ತಿದ್ದರು.

ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಯಿಂದ ರೊಚ್ಚಿಗೆದ್ದ ಬಾಬಾಸಾಹೇಬ ದತ್ತು ಮಗನನ್ನು ಪಡೆಯಬೇಕೆಂದು ಶತಪ್ರಯತ್ನ ಮಾಡಿದರೂ ಬ್ರಿಟಿಷ ಸರಕಾರ ಅನುಮತಿ ಕೊಡದೇ ಇದ್ದಾಗ ಬ್ರಿಟಿಷ್ ಅಧಿಕಾರಿ ಕೊಂದು ಇನ್ನೇನು ಸಂತೋಷದ ಗಳಿಗೆ ಹತ್ತಿರ ಬರುತ್ತಿದೆ ಎನ್ನುವಾಗ ದೇಶದ್ರೋಹಿಗಳು ಬ್ರಿಟಿಷರಿಗೆ ಸುಳಿವು ಕೊಟ್ಟರು ಬೆಳಗಾವಿಗೆ ಕರೆದೊಯ್ದಿ ಗಲ್ಲೇಗೆರಿಸಿದರು. ಸಾಮ್ರಾಜ್ಯಕ್ಕಾಗಿ ತಾನು ತನ್ನ ಹೆಂಡಿರ ಜೀವವನ್ನು ಕೊಟ್ಟ ವೀರ ಈ ಬಾಬಾಸಾಹೇಬರು.

## ೭. ಸಿಂಧೂರ ಲಕ್ಷ್ಮಣ (ಕ್ರಿಶ. ೧೯೨೨)

ವೀರ ಸಿಂಧೂರ ಲಕ್ಷ್ಮಣನ ಸಾಹಸದ ಕಥೆಯನ್ನು ಹೇಳುವ ಈ ಲಾವಣಿ ಯಾವುದೋ ಒಂದು ಸಣ್ಣ ಕಾರಣಕ್ಕಾಗಿ ಸಿಂಧೂರಿನ ಅಯ್ಯನ ಕೂಡ ವಿರೋಧ ಕಟ್ಟಿಕೊಂಡ, ಅವನು ಪೋಲೀಸರಿಗೆ ದೂರು ನೀಡಿದಾಗ ಇವನನ್ನು ಹಿಡಿಯಲು ಬಂದರು. ಲಕ್ಷ್ಮಣ ಅನೇಕ ರೀತಿಯಿಂದ ಬ್ರಿಟಿಷರಿಗೆ ಕಿರುಕುಳ ಕೊಡುತ್ತಾನೆ. ಕೊನೆಗೆ ವಾಲಿಕಾರನಿಂದ ಕೊಲ್ಲಿಸುವುದರ ಮೂಲಕ ಬ್ರಿಟಿಷರು ಜಯವನ್ನು ಸಾಧಿಸಿದರೆ ವಿನಹ ತಮ್ಮದೇ ಕರ್ತವ್ಯದಿಂದ ಆತನನ್ನು ಹಿಡಿಯಲಿಲ್ಲ.

ಈ ಕಥೆಯು ಭಾರತಕ್ಕೆ ಸ್ವಾತಂತ್ರ್ಯ ಸಿಗುವ ಪೂರ್ವದಲ್ಲಿ ಕರ್ನಾಟಕದ ಉತ್ತರ ಗಡಿಯಲ್ಲಿ 'ಜತ್ತ' ಎಂಬುದು ಒಂದು ಚಿಕ್ಕ ಸಂಸ್ಥಾನವಾಗಿತ್ತು. ಆ ಸಂಸ್ಥಾನದಲ್ಲಿ ಸಿಂಧೂರ ಎಂಬುದು ಒಂದು ಚಿಕ್ಕ ಹಳ್ಳಿ. ಅಲ್ಲಿ ಗ್ರಾಮಸ್ಥರ ಕೈಕೆಳಗೆ ಓಲೇಕಾರ(ಹಳಬ)ನಾಗಿ ಕೆಲಸ ಮಾಡುತ್ತಿದ್ದ ಲಕ್ಷ್ಮಣನು.

"ಒಟ್ಟು ಅಯ್ಯ ನಾರನ ಕಾಲಾಗ ಮರ್ಮ ಬಿತ್ತು
ಆತ ವಿಪರೀತ ಹೇಳತಾನ ನಿಂತ |ಭಾಡೇ ಇಡಲಿಲ್ಲಾ |
ಒಂದು ದಿನಾ ಲಕ್ಷ್ಮಣ ತಳ್ಳಿ ಮ್ಯಾಡಾನ ಅಯ್ಯನಾರನ ಮ್ಯಾಲ
ಊರಿದ್ದಲ್ಲಿ ಹೊಲಗೇರಿ ಉಂಟು |ಮಾಡಿರಿ ಪೋರ್ಟ್
ಬಂದ ಇನ್ಸ್‌ಪೆಕ್ಟರ್ ಆದ ಬೆಂಕಿ ಲಾಲ |ಬೆಂಕಿ ಬಾಲ
ಕಂಕರ ಹಲ್ಲ ತಿಂತಾನ ಲಕ್ಷ್ಮಣನ ಮ್ಯಾಲ"

ಹೀಗೆ ಒಂದು ಸಣ್ಣ ತಪ್ಪಿನಿಂದಾಗಿ ಆತ ಸೊಕ್ಕಿನಿಂದ ಮಾತನಾಡಿದ್ದಕ್ಕಾಗಿ ಈತ ಮೊದಲೇ ಕ್ಷಾತ್ರ ತೇಜಕ್ಕೆ ಎಂದೂ ತಲೆಬಾಗಿ ಗೊತ್ತಿರಲಿಲ್ಲ. ಈಗ ಅಂಥ ಪ್ರಸಂಗ ಬಂದ ಲಕ್ಷ್ಮಣ ಅವನನ್ನು ಒಮ್ಮೆ ತಳ್ಳಿ ಬಿಡುತ್ತಾನೆ. ಆಗ ಅವನು ರಿಪೋರ್ಟ್ ಮಾಡುತ್ತಾನೆ. ಆಗ ಇನ್ಸ್‌ಪೆಕ್ಟರ್ ಬಂದು ಇವರ ಮೇಲೆ ಕರಕರ ಹಲ್ಲು ಕಡಿದರು. ಸಿಪಾಯಿಗಳೊಂದಿಗೆ ಈತನನ್ನು ಕರೆಕಳಿಸುತ್ತಾನೆ. ಆಗ ಬಂದು ನಿಲ್ಲುತ್ತಾನೆ. ಆಗ ಇನ್ಸ್‌ಪೆಕ್ಟರ್ ಬೇಡಿ ಹಾಕಲಿಕ್ಕೆ ಹೋದ. ಆಗ ಲಕ್ಷ್ಮಣ ಕೈ ಕೊಸರಿ ಹಿಂದಕ್ಕೆ ತಕ್ಕೊಂಡು ಬಾಳಿ ಹುಸಾರಿಂದಾ ಬಾರೋ ಎದ್ದು ಇಷ್ಟು ಅಂದು ಎರಡು ಹೆಜ್ಜೆ ಹಿಂದ ಸರಿದು ಕಟ್ಟೆ ಜಗಿದು ಓಡಿ ಹೋಗುತ್ತಾನೆ. ಕೂಡಲೇ ಇನ್ಸ್‌ಪೆಕ್ಟರ್ ಅವನನ್ನು ಅವನಕ್ಕಿಂತ ಚದುರಾಗಿ ಓಡುತ್ತಾ ಭರ್ಚಿಯನ್ನು ಒಗೆಯುತ್ತಾರೆ. ಅದು ಲಕ್ಷ್ಮಣನ ತೊಡಿಯಾಗ ನಡುತ್ತದೆ. ಆಗ ಒಮ್ಮೆಲೆ ಗಾಯದಿಂದ ರಾಮಾ ರಾಮಾ ಎಂದು ಭೂಮಿ ಮೇಲೆ ಬಿದ್ದು ಬಿಡುತ್ತಾನೆ. ಆಗ ದಾವಾಖಾನೆಗೆ ಒಯ್ದು ಹಾಕುತ್ತಾರೆ. ಡಾಕ್ಟರು ಎಂಟು ದಿನಗಳಲ್ಲಿ ಆರಾಮ ಮಾಡುತ್ತಾರೆ. ಆಗ ಇನ್ಸ್‌ಪೆಕ್ಟರ್ ಅವನನ್ನು ಒಯ್ದು ಜೈಲಿಗೆ ಆ ರಾಮ ಮಾಡುತ್ತಾರೆ. ಅವಾಗ ಇನ್ಸ್‌ಪೆಕ್ಟರ್ ಅವನನ್ನು ಒಯ್ದು ಜೈಲಿಗೆ ಹಾಕುತ್ತಾರೆ.

ಇತ್ತ ಕಡೆ ಲಕ್ಷ್ಮಣನ ಅಳಿಯರಾದ ಪರಿಸ್ಯಾ, ಬಸ್ಯಾ, ನರಸ್ಯಾ ಈ ಮೂರು ಜನ ಕೂಡಿ ರಾತ್ರೋ ರಾತ್ರಿ ಜತ್ತಿಗೆ ಬಂದು ಜೈಲು ಮುರಿದು ಲಕ್ಷ್ಮಣನನ್ನು ಕರೆದುಕೊಂಡು ಹೋಗುತ್ತಾರೆ. ಆಗ ಪೇಟೆಯಲ್ಲಿ ನಿಂತು ಜನರಿಗೆ ಎಚ್ಚರಿಕೆ ಕೊಡುತ್ತಾರೆ.

"ಸಾರಿ ಹೇಳತಾರ |ನಿಂತ ಪ್ಯಾಟ್ಯಾಗ ( ನಡು ಪ್ಯಾಟ್ಯಾಗ
ಗಂಡಸಿನ ಮಗ ಇದ್ರ ಬಂದ ಹಿಡಿರೋ ನೀವು ನಮಗ
ಕ್ಯಾಕಿ ಹೊಡೆದು ಹೊಂಟರು ಊರಾಗ
ಯಾರ್‍ಯಾರು ಬರಲಿಲ್ಲ ಸನೇದಾಗ"

ಆಗ ಬ್ರಿಟಿಷರಿಗೆ ಹೇಗೋ ಆ ಸುದ್ಧಿಯು ತಿಳಿಯುತ್ತದೆ. ಆಗ ಅವರು ಲಕ್ಷ್ಮಣನ ಮೇಲೆ ಸಿಟ್ಟಾಗುತ್ತಾರೆ. ಕೂಡಲೇ ಸಮಾಚಾರವನ್ನು ಕಳಿಸಿ ಅವರನ್ನು ಹುಡುಕಲು ಹತ್ತುತ್ತಾರೆ. ಆಗ ಲಕ್ಷ್ಮಣ ಸಿಗುವುದಿಲ್ಲ. ಲಕ್ಷ್ಮಣ ಟೋಳಿ ಕಟ್ಟಿಕೊಂಡು ಗುಡ್ಡದಲ್ಲಿ ಅಡಗಿಕೊಂಡು ಕುಳಿತಿದ್ದ.

ಈ ಸುದ್ಧಿ ಸುತ್ತ ಕಡೆ ಹಬ್ಬಿತು. ಆಗ ಬ್ರಿಟಿಷರು ಹಿಡಿದು ಕೊಟ್ಟವರಿಗೆ ಒಳ್ಳೆಯ ಬಹುಮಾನ ಕೊಡುತ್ತೇವೆಂದು ಡಂಗುರ ಸಾರಿದರು. ಆಗ ಒಬ್ಬ ಇನ್ಸ್‌ಪೆಕ್ಟರ್ ನಾನು ಹಿಡಿದು ಕೊಡುತ್ತೇನೆಂದು ವೀಳ್ಯವನ್ನು ಸ್ವೀಕರಿಸುತ್ತಾನೆ. ಇನ್ಸ್‌ಪೆಕ್ಟರ್ ನಾಳೆ ಅವನನ್ನು ನೆತ್ತರ ಕುಡಿಯುವೆನು ಎನ್ನುತ ಹುರುಪನಲ್ಲಿರುವನು. ಈ ಸುದ್ಧಿಯು ಲಕ್ಷ್ಮಣನಿಗೆ ಮುಟ್ಟುತ್ತದೆ. ಆಗ ಮರುದಿನ ಹುರುಸಿಗೆದ್ದ ಇನ್ಸ್‌ಪೆಕ್ಟರ ಗುಡ್ಡಕ್ಕೆ ಬರುತ್ತಾನೆ. ಆಗ ತನ್ನ ಸಂಗಡಿಗರಿಗೆ ಹೇಳುತ್ತಾನೆ. ಲಕ್ಷ್ಮಣ ಈಗ ಸಿಕ್ಕರೆ ನೆತ್ತರನ ಕುಡಿತೀನ ಎನ್ನುತ್ತಾರೆ. ಆಗ ಈ ಮಾತು ಲಕ್ಷ್ಮಣನಿಗೆ ಕೇಳುತ್ತದೆ. ಆಗ ಎಲ್ಲರು ಸಜ್ಜಾಗುತ್ತಾರೆ. ಇನ್ಸ್‌ಪೆಕ್ಟರ್ ಮುಂದೆ ಬರುವುದರೊಳಗೆ ಅವನ ಮುಂದೆ ಜಿಗದ ನಿಲ್ಲುತ್ತಾನೆ. ಲಕ್ಷ್ಮಣ ಆಗ .....

"ಒಬ್ಬರ ಕೊಟ್ಟರು ತೆಕ್ಕೆ ಮುಕ್ಕೆ ಬಿದ್ದ |ಒಬ್ಬನ ಒಬ್ಬ ವರ್ಗದ
ಲಕ್ಷ್ಮಣ ಕೆಳಗೆ ಬಿದ್ದಾನು ಕೆಳಗ ಬಿದ್ದಾನು
ಎದಿಮ್ಯಾಲ ಕುಂತ ಇನ್ಸ್‌ಪೆಕ್ಟರ್ ಪಿಸ್ತೂಲ ಹಿಡಿದಾನು |
ಅವಸರ ಮಾಡಿ ನರಸ್ಯಾ ಓಡಿ ಬಂದು | ಕೊರಳಿಗೆ ಹಗ್ಗ ವಗದ
ಜಗ್ಗಿಜೋಲಿ ಹೊಡದ | ಇನ್ಸ್‌ಪೆಕ್ಟರನ್ನು ಕೆಡವ್ಯಾನು ನೆಲಕ್ಕೆ
ಕುಡಗೋಲ ತಗೊಂಡು ಕರಕರ ಕುತ್ತಿಗೆ ಕೆಯ್ದಾನು"

ಹೀಗೆ ಇನ್ಸ್‌ಪೆಕ್ಟರನ್ ಕುತ್ತಿಗೆ ಕೊಯ್ದು ಆ ಚೆಂಡನ್ನು ಕಲ್ಲೊಳಗಿ ಉರಿನ ಅಗಸೆಗೆ ಶಿರಾ ಕಟ್ಟಿ ಚಾವಡಿಯಲ್ಲಿ ಕುಳಿತುಕೊಳ್ಳುತ್ತಾರೆ. ಆಗ ಯಾರ ಇವರ ತಂಟೆಗೆ ಬರುವುದಿಲ್ಲ. ಆಗ ವಾಲೀಕಾರಗ ಎಲ್ಲಾ ತಿಳಿಸಿ ಅರಭಾವಿ ಕ್ಷೇತ್ರಕ್ಕೆ ಬಂದು ಅಲ್ಲಿ ಅಜ್ಞಾನವರ ಪಾದಕ್ಕೆ ಬಿದ್ದರು. ಅಲ್ಲೇ ಅವರು ಊಟ ನೀರು ಕೊಟ್ಟರು. ಅಲ್ಲಿರಡರಟ್ಟಿ ಬಸ್ಯಾ, ದರೂರಸಿದ್ಯಾ, ನೆಡೋನಿ ಹೊಲಿಯಾ ದುಂಡ್ಯಾ ಇವರು ಲಕ್ಷ್ಮಣನ ಬೋಳೆಯಲ್ಲಿ ಕೂಡಿದರು. ಎಲ್ಲರೂ ಕೂಡಿ ಗಲಗಲಿ ವಾಸ ಮಾಡಿ ದೇಸಾರ್ಯ ಹಳ್ಳ ಕೊಳ್ಳೆ ಹೊಡೆದು ಕಾಕಣಕಿ(ಕಾಬಂಡಿಕಿ) ತೋಟದಲ್ಲಿ

ಊಟ ಮಾಡಿ ಮಲಗುತ್ತಾರೆ. ಆಗ ಬ್ರಿಟಿಷರು ಶೋಧನ ನಡೆಸಿ ಇವರು ಇರುವ ಮೆಟ್ಟನ್ನು ಪತ್ತೆ ಹಚ್ಚಿ ಜಗತ್ತಿ ಪೋಲೀಸರು ಹಿಂಡು ಕೂಡಿ ಇರುವ ಗುಂಡು ಹಾರಿಸುತ್ತಾರೆ. ಆಗ ಮಲಗಿದ್ದ ಇವರು ಸಪ್ಪಳ ಕೇಳಿ ಏಳತಾರ ಗಾಬರ್ಯಾಗಿ ಮೋಡ ಮುಸೂಕಿದಂತಾತು ಅಂತ ಹತ್ತಿದಂಗ ಒಬ್ಬರಕೊಬ್ಬರು ಜಿಗಿದು ಪಾರಾಗಾಕ ಹತ್ತಿದರು. ಆಗ ಬ್ರಿಟಿಷರು ಬಸ್ಯಾನ ಹಿಡಿದುಕೊಂದು ಬಿಟ್ಟರು. ಆದರೆ ನೆಡೋನಿ ಹೊಲಿಯರ ದುಂಡಾ ತಪ್ಪಿಸಿಕೊಂಡು ಪ್ರಾಣವನ್ನು ಉಳಿಸಿಕೊಂಡನು.

"ಐದು ಅಕ್ಕಡಿ ಭಾವಿ ಅಡ್ಡ ಅಗಲಾ
ನರಸ್ಯಾ ಜಿಗದ ಹೋದನು ಸಿಗಲಿಲ್ಲಾ
ಬಾಳ ಬಂಟ ಸಾಬ್ಯಾ ಗೋಪಾಲ
ವೈದ ಹಾಕ್ಯರ ಬೆಳಗಾಂವಿ ಜೈಲಾ
ಲಕ್ಷ್ಮಣ ಹೊಡಿಯು ತಾನು ಕಲ್ಲಾ
ಬಹಳ ಮಂದಿದು ಮುರದಾನು ಕಾಲ".

ಸಾಹೇಬ ನಿಂತಿದ್ದ ಮೋಟಾರದ ಮ್ಯಾಲ
ಟೊಪ್ಪಿಗಿಗೆ ಗುಂಡ ಬಡಿದಿತಲ್ಲಾ
ಸಿಡಿದಬಿದ್ದಿತ ಭೂಮಿಯ ಮೇಲಾ
ಮೋಟಾರ ತಿರುವಿ ಸಾಹೇಬ ನಿಂದರಲಿಲ್ಲಾ
ಚಣ್ಣದ ಬಿದ್ದಿತ ಭೂಮಿಯ ಮೇಲಾ
ಮೋಟಾರ ತಿರುವಿ ಸಾಹೇಬ ನಿಂದರಲಿಲ್ಲಾ
ಚಣ್ಣದ ತುಂಬ ಮುಳಗಿತು ಮಲಾ
ಲಕ್ಷ್ಮಣಗ ಹೇಳತಾನ ತಿರುಗಿ ನಾಳೆ ಬರತೀನ
ನಿನ್ನ ಹಿಡಿತೇನ ಇರಲಿ ಎಚ್ಚರಾ"

ಅಲ್ಲಿಂದ ಪಾರಾಗಿ ಬೆಳಗಾವಿಯ ಇಂಡಲಗಿ ಜೇಲಿಗೆ ಬಂದು ಜೈಲ ಮುರಿದು ಸಾಬ್ಯಾ ಗೋಪಾಲ ಇಬ್ಬರನ್ನು ಬಿಡಿಸಿಕೊಂಡು ಅಲ್ಲಿಂದ ತಿಗಡಿಗೆ ಹೋಗಿ ದರೋಡೆ ಮಾಡಿ ಅಲ್ಲಿ ಚನ್ನಪ್ಪ ಸಾವಕಾರ ಊಟ ಹಾಕುತ್ತಾನೆ. ಅಲ್ಲಿಂದ ಗೋಪಿಚಂದ ಗುಜ್ಜನಮನಿಯನ್ನು ಹಗಲಿ ದರೋಡೆ ಮಾಡುತ್ತಾರೆ. ಆಗ ಬಡಬಗ್ಗರಿಗೆ ಹಂಚುತ್ತಾರೆ. ಕಳವು ಮಾಡಿದ ಮಾಲನ್ನು ಹೊರಲಾರದೆ ತೆಗೆದುಕೊಂಡು ಹೊರಟಾಗ ದಾರಿ ದಾರಿಯಲ್ಲಿ ರೂಪಾಯಿ ಚೆಲ್ಲಿ ಬಿಟ್ಟಿದ್ದರು.

ಕೂಡಲೇ ಇವರನ್ನು ಹುಡುಕಲಿಕ್ಕೆ ಅಲ್ಲಲ್ಲಿ ತಪಾಸಣೆಗೆ ಕಳುಹಿಸಿದರು. ಅಂದರೆ ಒಂದು ತಿಂಗಳ ಅಂತ ಗಪ್ಪಗಡದ ಆದರು. ಆವಾಗ ನಂತರ ಮುಂಗಡಗನೂರಿಗೆ ಬರುತ್ತಾರೆ. ಆಗ ಗಾರ್ಮನ್ ಸಾಹೇಬ ಮೋಟಾರ ತೆಗೆದುಕೊಂಡು ಬರುತ್ತಾನೆ. ಆಗ ಲಡಾಯಿ ಪ್ರಾರಂಭ ಆಗುತ್ತದೆ.

"ಮುಂಜಾನೆ ಲಡಾಯಿ ಸುರವಾತು
ಸಂಜೀತನ ನಡಿತು | ಸಾಹೇಬ ತೆಳಗೆ | ಲಕ್ಷ್ಮಣ ಮ್ಯಾಗ
ಗುಡ್ಡದ ಮ್ಯಾಗ ಸಾಹೇಬ ಹೇಳತಾನ ಹುಶಾರಿರಲಿ ಮೈಮ್ಯಾಗ
ಹೇಳಿ ಹೇಳಿ ಹೊಡದ ರೈಪಲ್ಲಾ |

ಆಗ ಲಕ್ಷ್ಮಣ ಸಾಹೇಬನಿಗೆ ಹೇಳುತ್ತಾರೆ. ನಾಳೆ ರಾತ್ರಿ ಚವಡಿಗೆ ಬರತೇನಿ ಮೈಮರೆತು ಮಲಗಬೇಡ ಗಂಟು ಹಾಕಿಕೋ ಪದರಿನ್ಯಾಗ ಎಂದು ಗದರಿಸುತ್ತಾನೆ.

ಆದರೇನು ಮಾಡುವುದು ಮೊದಲೇ ಸಾಹೇಬ ಹೆದರಿಗೆ ದಣಿದು ಬಂದು ಮಲಗಿದ್ದು ಸಂಪೆ ನಿದ್ದೆ ಹತ್ತಿತು.

ಆಗ ಲಕ್ಷ್ಮಣ, ಸಾಬ್ಯಾಗ, ಗೋಪಾಲಗ, ನರಸ್ಯಾಗ ಹೇಳಿ ಕತ್ತಿ, ಭರ್ಜಿ, ಪಿಸ್ತೂಲ ಬಂದೂಕ ಕೈಯಲ್ಲಿ ತೆಗೆದುಕೊಂಡು ಬರುತ್ತಾರೆ. ರಾತ್ರಿ ಚೌಡಿಗೆ ಆಗ ಅವರು -

"ಇಬ್ಬರ ಪೋಲಿಸರ ಮೀಸೆ ಬೋಳಿಸ್ಯಾರ
ನಿಂತ ವದರ್‍ಯಾರ |
ಜಗ್ಗಿ ಎಬಿಸ್ಯಾರ ಮಲಗಿದ ಸಾಹೇಬಗ
ಕುದರಿ ಹಗ್ಗ ಕೊಯ್ದು ಪಾರಾ ಆದಾರೋ ಸಿಗದಂಗ"

ಆ ಸಾಹೇಬ ಕೋಪ ತಾಳಿ ತಯಾರಾಗಿ ಹೊರಟ ಗುಡ್ಡವನ್ನು ತಿರುಗುತ್ತಾನೆ. ಆದರೆ ಸಿಗುವುದಿಲ್ಲ.

ಆದರೆ ಇವರು ತಮರಿಮಟ್ಟ ಗುಡ್ಡದಲ್ಲಿ ತಪ್ಪಿಸಿ ಕುಳಿತ್ತಿದ್ದರು. ಅಲ್ಲಿಂದ ಅಮ್ಮೀನಗಡಕ್ಕೆ ಬಂದರು. ಆಗ ಮೆಟ್ಟಿ ಹುಡಿಕಿ ಚಿಂತೆ ಇಲ್ಲದಂತೆ ಆನಂದದಿಂದ ಇರುತ್ತಾರೆ.

ಲಕ್ಷ್ಮಣನ ಪಾರ್ಟಿಗೆ ತೆಗ್ಗಿ ನಾಯಕನ ಆಶ್ರಯವಿರುತ್ತದೆ. ಆಗ ಸರಕಾರದವರು ಅವನಿಗೆ ಇನಾಮು ಕೊಡುವ ಆಸೆ ಹುಟ್ಟಿಸಿ ಪಿತೂರಿಯಿಂದ ಲಕ್ಷ್ಮಣನನ್ನು ಅವನ ಪಾರ್ಟಿಯ ಜನರನ್ನು ಹಿಡಿಯಲು ಯತ್ನಿಸಿ ಸಫಲರಾಗುತ್ತಾರೆ. ತನಗೆ ಇನಾಮ ಬರುವುದೆಂದು ತೆಗ್ಗಿ ನಾಯಕನ ಇವರಿಗೆ ಅನ್ನ, ನೀರು ಕೊಡುತ್ತಾನೆ. ಆಗ ಇವನನ್ನು ನಂಬಿದ ಲಕ್ಷ್ಮಣ ಇಲ್ಲಿಯವರೆಗೆ ತಾನು ದರೋಡೆ ಮಾಡಿದ ಕಡೇವು, ಕಂಟಿಸರ ಒಂದೂ ಉಳಿಯದಂಗ ದರೋಡೆ ಮಾಡಿದ್ದನ್ನು ತೆಗ್ಗಿ ನಾಯಕನಿಗೆ ಕೊಬ್ಬು ಬಿಡುತ್ತಾನೆ.

ಆಗ ಲಕ್ಷ್ಮಣನಿಂದ ಅಪಾರ ಸಂಪತ್ತು ಪಡೆದಿದ್ದು ಬ್ರಿಟಿಷರಿಗೆ ಗೊತ್ತಾಗಿ ಸರಕಾರ ತಪಾಸ ಇಡುತ್ತಾರೆ. ಪಿತೂರಿ ನಡೆಸಿ ತೆಗ್ಗಿ ನಾಯಕನನ್ನು ಹಿಡಿಯುತ್ತಾರೆ. ಅವನಿಗೆ ಲಕ್ಷ್ಮಣನನ್ನು ಹಿಡಿದು ಕೊಡದೇ ಇದ್ರೇ ನಿನ್ನ ಪ್ರಾಣವನ್ನೇ ತೆಗೆದುಕೊಳ್ಳುತ್ತಾನೆ. ಅಂದಾಗ ತೆಗ್ಗಿ ನಾಯಕ ಮತ್ತಷ್ಟು ಎಚ್ಚರಿಕೆ ಹುಟ್ಟಿ ಆಗ ತೆಗ್ಗಿ ನಾಯಕ -

"ಕಬಲಾದ ತೆಗ್ಗಿನಾಯಕ ಅಂಜಿ ತನ್ನ ಮನಕ್ಕ
ಲಕ್ಷ್ಮಣನಾದ ಕೊಲ್ಲಿ ಸುದಕ |ಹಾಕಿದಾನ ಲೆಕ್ಕ
ವಚನ ಕೊಟ್ಟನಾಗ"

ಬ್ರಿಟಿಷರ ಪ್ರಾಣ ಬೆದರಿಕೆಯಿಂದ ದ್ರೋಹ ಮಾಡಲಿಕ್ಕೆ ಆತ ಅಕಲಾಕಿ ಅವರಿಗೆ ಹೇಳುತ್ತಾನೆ. ನಾಳೆ ಶನಿವಾರ ತೋಟದಾಗ ಔತಣ ಇಡುತ್ತೇನೆ. ಅಲ್ಲೇ ನಾನು ದೇವರಿಗೆ ಮಾಡುತ್ತೇನೆ. ಆಗ ಟಗರು ಕಡಿಸುತ್ತೇನೆ. ಶೆರೆ ಸಿಂದಿ ತರಿಸುತ್ತೇನೆ. ಯಾರದೇನು ಅಂಜಿಕೆ. ತಿಂದು ಮಜಾಮಾಡೂನು ಎಂದು ಹೇಳುತ್ತಾನೆ. ಆಗ ನಾಯಕನನ್ನು ನಂಬಿದ ಲಕ್ಷ್ಮಣ ಒಪ್ಪಿಕೊಂಡು ಆ ಔತಣ ಕೂಟಕ್ಕೆ ಹೋಗುತ್ತಾನೆ. ಆಗ ನಾಯಕ -

"ಶೆರೆ, ಸಿಂದಿ ಸಾಕಷ್ಟು ಕಳಿಸ್ಯಾನ
ಕುರಿ ಕೋಳಿ ಮಾಡಸ್ಯಾನ
ಊಟಕ ಕುಂದಿರಸ್ಯಾನ
ಮನಿಯಾಗ ಉಳಿದಾನ"

ಹೀಗೆ ಎಲ್ಲ ಸಜ್ಜು ಮಾಡಿ ತಾನು ಮನೆಯಲ್ಲಿ ಉಳಿದು ವಾಲಿಕಾರಗ ಪಿತೂರಿ ಮಾಡಿ ಎಲ್ಲಿ ಹೇಗೆ ಕೊಲ್ಲಬೇಕೆಂದು ಎಲ್ಲವನ್ನು ಈ ರೀತಿ ತಿಳಿಸುತ್ತಾನೆ. ಆಗ ಊಟ ಮಾಡಲಿಕ್ಕೆ ಹತ್ತಿದಾಗ ರಾತ್ರಿ ಆಗಿರುತ್ತದೆ. ಆಗ ಲಕ್ಷ್ಮಣನ ಎದುರಿಗೆ ಹತ್ತಿರದಲ್ಲಿ ಒಂದು ಕಂದೀಲು ಇರುತ್ತದೆ. ಅದೇ ಬೆಳಕಿಗೆ ಗುರಿ ಇಟ್ಟು ನೀನು ಗುಂಡು ಹೊಡಿ ಎಂದು ಹೇಳಿರುತ್ತಾನೆ.

ಆಗ ಇಲ್ಲಿ ಊಟದ ವ್ಯವಸ್ಥೆಯು ತಯಾರಾಗುತ್ತದೆ.

"ತಾಟ ತಂದ ಮುಂದಿಟ್ಟಾನ ಹಾಲಕ್ಕಿ ನುಡಿದಿತಾಗ |
ನರಸ್ಯಾ ಹೇಳತಾನ ಲಕ್ಷ್ಮಣಗ |ಹಾಲಕ್ಕಿ ನುಡಿಯತೈತಿ
ಸಂಸೆ ಬರತೈತಿ |ನಂಗ ತಿಳಿತೈತಿ |ಮೋಸ ಇದರಾಗ |
ಲಕ್ಷ್ಮಣ ಕಬಲಾಗಲಿಲ್ಲ ಎಂದು ತುತ್ತು ಹಾಕಿದ್ದ ಬಾಯಾಗ |
ಡಮ್ಮನ್ನು ಶಬ್ದ ಕೇಳಿತ | ಗುಂಡ ಬಡದೀತು | ಘಾತ ಆದೀತ |
ಲಕ್ಷ್ಮಣನ ಎದಿಯಾಗ | ಎದಿಯಾಗ |ಮೋಸ ಮಾಡಿ
ಅಭಮನ್ಯುಗ ಕೌರವರು ಕೊಲ್ಲಿಸಿದಂಗ"

ಈ ರೀತಿ ತನ್ನ ಬಂಧುಗಳೇ ತನಗೆ ಮೋಸ ಮಾಡಿ ಕೊಲ್ಲಿಸುತ್ತಾರೆ. ಮುಂದೆ ನರಸ್ಯಾ ಏಲೊ ಮಾವ ಹಿಡಿಯಾಕ ಬಂದಾರ ಎನ್ನುತ್ತಿರುವಂತೆ ಬಂದು ಮುತ್ತಿಗೆ ಹಾಕಿ ಸಾಬ್ಯಾ, ಗೋಪಾಲನನ್ನು ಹಿಡಿದರು. ಅವರನ್ನು ತೆಗೆದುಕೊಂಡು ಜಮಖಂಡ್ಯಾಗ 'ಫಾಸಿ' ಶಿಕ್ಷೆ ಕೊಟ್ಟರು.

ಈ ರೀತಿ ಲಕ್ಷ್ಮಣನು ತನ್ನ ಸ್ವಾಭಿಮಾನಕ್ಕೆ ಧಕ್ಕೆ ಬಂದು ಅಯ್ಯನ ಮೇಲೆ ಸೇಡು ತೀರಿಸಿಕೊಂಡರೆ ಅದೇ ಮುಂದೆ ದೊಡ್ಡದಾಗಿ ಇಷ್ಟೆಲ್ಲಾ ಅನಾಹುತವಾಯಿತು. ಲಕ್ಷ್ಮಣ ಎಂದಿಗೂ ಕೂಡ ಕೊಟ್ಟ ಮಾತಿಗೆ ತಪ್ಪಿ ನಡೆಯದೇ ಬ್ರಿಟಿಷರ ಕೂಡ ತನ್ನ ಛಲವನ್ನೇ

ಸಾಧಿಸುತ್ತ ತನ್ನ ಪ್ರಾಣವನ್ನು ಬಲಿಯಾಗಿಸಿಕೊಂಡು ಬಿಡುತ್ತಾನೆ. ಧೀರೋದ್ದಾತ ಲಕ್ಷ್ಮಣನಂಥವರು ನಮ್ಮ ದೇಶದಲ್ಲಿ ಇದ್ದರೆ ಬ್ರಿಟಿಷರು ಇನ್ನು ಬೇಗ ನಮ್ಮ ದೇಶ ಬಿಟ್ಟು ಹೊರಡತಿದ್ದರೋ ಏನೋ? ಏನೇ ಆಗಲಿ ಆತ ತನ್ನ ಹಿತೈಷಿಗಳಿಗಾಗಿ ಹೋರಾಡಿದ ಬಡಬಗ್ಗರಿಗೆ ದರೋಡೆ ಮಾಡಿದುದರಲ್ಲಿ ಹಂಚಿ ತಾನೂ ತಿಂದು ಚಿರವಾಗಿ ನಮ್ಮೆಲ್ಲರ ಮಧ್ಯೆ ಅಮರನಂತೆ ಇನ್ನು ಉಳಿದಿದ್ದಾನೆ. ಇದು ಸಿಂಧೂರ ಲಕ್ಷ್ಮಣನ ಶೌರ್ಯಕ್ಕೆ ಸಾಕ್ಷಿಯಾಗಿದೆ.

### ೮. ಮೈಲಾರ ಮಹದೇವ (ಕ್ರಿ.ಶ. ೧೯೧೧-೧೯೪೩)

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣವನ್ನು ತ್ಯಾಗ ಮಾಡಿ ಮಡಿದ ಮೈಲಾರ ಮಹದೇವ. ಧಾರವಾಡ ಜಿಲ್ಲೆಯ ಬ್ಯಾಡಗಿ ತಾಲೂಕಿನ ಮೋಟೆಬೆನ್ನೂರಿನಲ್ಲಿ ಜನಿಸಿದ. ಈತನು ತನ್ನ ಶಿಕ್ಷಣವನ್ನು ಊರ ಶಾಲೆಯಲ್ಲಿ ಮತ್ತು ಜಿಲ್ಲೆಯ ಹತ್ತಿರದ ಹಂಸಭಾವಿಯಲ್ಲಿ ವಿದ್ಯೆ ಕಲಿತನು. ಮಹಾತ್ಮಾ ಗಾಂಧೀಜಿಯವರ ಪ್ರಭಾವ ಮತ್ತು ಈತನ ತಾಯಿಯ ಪ್ರಭಾವದಿಂದ ಸ್ವಾತಂತ್ರ್ಯದ ಚಳುವಳಿಯಲ್ಲಿ ಭಾಗವಹಿಸಲು ಶಾಲೆ ಬಿಟ್ಟು ಖಾದಿಯ ಮೂಟೆಗಳನ್ನು ಹೆಗಲಿಗೆ ಏರಿಸಿ ಖಾದಿಯ ಬಗ್ಗೆ ಪ್ರಚಾರ ಮಾಡುತ್ತಾ ಸ್ವದೇಶಿ ಬಟ್ಟೆಯನ್ನು ಮಾತ್ರ ಧರಿಸಿರಿ. ವಿದೇಶಿ ಬಟ್ಟೆಯನ್ನು ಸುಡಿರಿ ಎಂದು ಹೇಳುತ್ತಿದ್ದನು. ಅಷ್ಟೇ ಅಲ್ಲ ತಾನೇ ನೂಲುವುದು ನೆಯ್ಯುವುದು ಮಾಡುತ್ತಿದ್ದನು. ಗಾಂಧೀಜಿಯವರ ಸಬರಮತಿ ಆಶ್ರಮದಲ್ಲಿ ತರಬೇತಿಗಾಗಿ ಆಯ್ಕೆಯಾದ ತರುಣರಲ್ಲಿ ಮಹದೇವನು ಒಬ್ಬನಾಗಿದ್ದ. ಈ ಅವಧಿಯಲ್ಲಿ ಗಾಂಧೀಜಿಯವರ ನೆಚ್ಚಿನ ಶಿಷ್ಯನಾಗಿ ಅವರ ಜೊತೆ ದಂಡಿಯಾತ್ರೆ ಹೊರಟ. ಕಿರಿಯ ನಾಯಕ ಮಹದೇವ ಬ್ರಿಟಿಷರ ಅನುಮತಿ ಇಲ್ಲದೇ ಉಪ್ಪು ತಯಾರಿಸಬಾರದೆಂಬ ನಿಯಮ ಮುರಿದು ಉಪ್ಪು ತಯಾರಿಸಲು ಹೊರಟ. ಗಾಂಧಿಯವರ ಈ ಚಳುವಳಿಯೇ ದಂಡಿಯಾತ್ರೆ. ಉಪ್ಪು ತಯಾರಿಸಿ ಆಂಗ್ಲ ಸರಕಾರದ ಕಾನೂನು ಮುರಿದು ಜೈಲು ಸೇರಿದವರಲ್ಲಿ ಇನ್ನು ಹದಿನೆಂಟು ತುಂಬಿದ ಮಹದೇವನು ಇದ್ದ. ಮುಂದೆ ಹಾವೇರಿಯ ಕೊರಡೂರಿನಲ್ಲಿ ಸಬರಮತಿ ಆಶ್ರಮದ ಮಾದರಿಯಲ್ಲೇ ಸೇವಾಶ್ರಮ ಆರಂಭಿಸಿದ. ಇಲ್ಲಿ ಖಾದಿ, ವ್ಯಾಯಾಮ, ಶಿಕ್ಷಣ, ಸಾಕ್ಷರತೆ ಕಾಂಗ್ರೆಸ್ ತತ್ವಗಳ ಪ್ರಚಾರ, ಗ್ರಾಮ ಕೈಗಾರಿಕೆ ಇಂಥ ವೈವಿಧ್ಯಮಯವಾದ ಹಲವಾರು ವಿಷಯಗಳನ್ನು ಹಳ್ಳಿ ಮಕ್ಕಳಿಗೆ ಹೇಳಿಕೊಡುತ್ತಿದ್ದನು. ಸ್ವತಃ ತನ್ನ ಹೆಂಡತಿಯನ್ನು ಹಾಗೂ ತಾಯಿ ಬಸಮ್ಮರನ್ನು ಸರಬರಮತಿ ಆಶ್ರಮಕ್ಕೆ ಕಳಿಸಿ ಅಲ್ಲಿಯ ಎಲ್ಲಾ ಕಾರ್ಯಾಚಾರಣೆಯನ್ನು ನೋಡಿ ಅವರೂ ಕೂಡ ಸ್ವಾತಂತ್ರ್ಯ ವೀರವನಿತೆಯರೆನಿಸಿಕೊಂಡರು. ಮುಂದೆ ಇವರ ತಾಯಿ ಸಾಯುವತನಕ ಖಾದಿ ಬಟ್ಟೆಯನ್ನು ಧರಿಸುತ್ತಿದ್ದಳು. ಅಲ್ಲದೇ ಅವರು ಕೂಡ ಅನೇಕ ಸಲ ಜೈಲಿಗೆ ಹೋಗಿ ಬಂದರು.

"ಕಾಯಿದೆಭಂಗ ಚಳುವಳಿ" "ಬ್ರಿಟಿಷರೇ ಭಾರತ ಬಿಟ್ಟು ತೊಲಗಿರಿ" ಮುಂತಾದ ಎಲ್ಲ ಹಂತದಲ್ಲಿ ಆತ ಮುನ್ನುಗ್ಗುತ್ತಿದ್ದ. ೧೯೪೦ರಲ್ಲಿ ತಾಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾಗಿ ಕಾಂಗ್ರೆಸ್ ತತ್ವ ಪ್ರಚಾರ ಮಾಡಿದ. ಅಸಹಕಾರ ಚಳುವಳಿಯಲ್ಲಿಯೂ ಭಾಗವಹಿಸಿದ. ಕೆಲವು ದೇಶ ತರುಣರನ್ನು ಸೇರಿಸಿಕೊಂಡು ಒಂದು ತಂಡ ಕಟ್ಟಿ ಅದಕ್ಕೆ 'ಕಬೀರ' ಎಂಬ ಗುಪ್ತನಾಮ

ಇಟ್ಟರು. ಕೊನೆಯ ಅಸ್ತ್ರವಾಗಿ "ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಎಂಬ ಚಳುವಳಿ ರೂಪಿಸಿದಾಗ ಗಾಂಧೀಜಿಯವರನ್ನು ಜೈಲಿನಲ್ಲಿ ಇಡಲಾಗಿತ್ತು. ಆ ಸಮಯ ಮಹಾದೇವನ ತಂಡ ಬ್ರಿಟಿಷರಿಗೆ ಕಿರುಕುಳ ಕೊಡುವ ಹತ್ತಾರು ಉಪಾಯಗಳನ್ನು ಯೋಚಿಸಿ ಕಾರ್ಯಗತ ಮಾಡಿತು. ಉಪಾಯವಾಗಿ ಯೋಜನೆ ರೂಪಿಸುತ್ತಿದ್ದ ಮಹದೇವ ಬ್ರಿಟಿಷರಿಗೆ ಪೋಲಿಸರಿಗೆ ಸಿಂಹಸ್ವಪ್ನವಾಗಿದ್ದ. ಹೊಸರಿತ್ತಿ ಎಂಬ ಸ್ಥಳದಲ್ಲಿ ದೇವಸ್ಥಾನವೊಂದರಲ್ಲಿ ಮಹದೇವ ಮತ್ತು ಅವನ ಸಂಗಡಿಗರು ಕಾರ್ಯಾಚರಣೆಯಲ್ಲಿದ್ದಾಗ ಪೋಲೀಸರೊಂದಿಗೆ ಘರ್ಷಣೆಗೆ ಇಳಿಯಬೇಕಾಯಿತು. ಗರ್ಭಗುಡಿಯಲ್ಲಿದ್ದ ಪೋಲಿಸನೊಬ್ಬ 'ಜೀವ ಉಳಿಸು' ಎಂದು ಅಂಗಲಾಚಿ ಬೇಡಿದಾಗ ಆತನನ್ನು ಪ್ರಾಣಸಹಿತ ಬಿಟ್ಟು ಬಿಟ್ಟ. ಆದರೆ ಮರುಕ್ಷಣದಲ್ಲೇ ಆ ಪೋಲಿಸನೇ ಬಂದೂಕಿನಿಂದ ಮಹದೇವನನ್ನು ಹೊಡೆದ. ಮಹದೇವ ಮತ್ತು ಅವನ ಕೆಲವು ಸಂಗಡಿಗರು ಕೆಲವರು ಹೋರಾಟದಲ್ಲಿ ಅಸುನೀಗಿದರು(೧೯೪೩). ಇವನ ಮರಣದ ವಾರ್ತೆ ಕೇಳಿ ಗಾಂಧೀಜಿಯವರು ಮರುಗಿದರು.

ಹೀಗೆ ಮೈಲಾರ ಮಹದೇವ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹಾಧೀರ ವ್ಯಕ್ತಿಯಾದ. ಈತನನ್ನು ಕುರಿತು ಲಾವಣಿಯೊಂದು ತುಂಡು ಹಾಡಿನಲ್ಲಿದೆ. ಸಂಪೂರ್ಣ ಅದರಲಿಲ್ಲ. ಹೀಗಾಗಿ ನನಗೆ ಈತ ಸಂಪೂರ್ಣ ಚರಿತ್ರೆ ಸಿಗದಿದ್ದರಿಂದ ಹಿ.ಚ. ಹಿತ್ತಲಮನಿ ಅವರು ಸಂಪಾದಿಸಿದ 'ಮಹಾದೇವ ನನ್ನ ಶಿಷ್ಯ' ಎಂಬ ಪುಸ್ತಕದಲ್ಲಿಯ ಲಾವಣಿಯನ್ನು ತೆಗೆದುಕೊಂಡು ವಿವರಿಸಿದ್ದೇನೆ.

ಕನ್ನಡ ಕಲಿತನದ ಪರಂಪರೆಯ ಕ್ರಾಂತಿ ಪುರುಷ
ಭಾರತ ವೀರಕ್ಷಾತ್ರ ತೇಜದ ಕಾರಣ ಪುರುಷ
ಮಹಾತ್ಮಾ ಗಾಂಧೀಜಿಯ ಸತ್ಯ ಅಹಿಂಸೆ ಸತ್ಯಾಗ್ರಹಗಳ ಪ್ರತಿರೂಪ
ಹೇ ಮಾಡಿ ಮಡಿದ ಮೈಲಾರ ಮಹದೇವ ನಿನ್ನಂತವರ ಕಾಣುವುದರ ರೂಪ.

ಹೀಗೆ ಆರಂಭವಾಗುವ ಈ ಲಾವಣಿಯಲ್ಲಿ ಗಾಂಧೀಜಿಯವರ ಪ್ರತಿಯೊಂದು ನುಡಿಯು ಅವರಲ್ಲಿತ್ತು ಎನ್ನುವುದನ್ನು ತಿಳಿಸುತ್ತದೆ.

ಧಾರವಾಡ ಜಿಲ್ಲೆಯ ಬ್ಯಾಡಗಿ ತಾಲೂಕಿನ ಮೋಟೆಬೆನ್ನೂರಿನಲ್ಲಿ ರೈತ ಕುಟುಂಬವೊಂದರಲ್ಲಿ ಮಾರ್ತಂಡಪ್ಪ, ಬಸಮ್ಮರ ಉದರದಲ್ಲಿ ಹುಟ್ಟಿದ ಮೈಲಾರ ಅಚ್ಚುಮೆಚ್ಚಿನ ಕಂದನೆನಿಸಿದ. ಸಂಪಿಗೆಯ ವಾಸನೆಯ ಹಾಗೆ ತನ್ನ ಕಂಪನ್ನು ಎಲ್ಲರಿಗೂ ಕಟ್ಟಾಣಿಯಾಗಿ ಬೆಳೆದ. ಮಹಾದೇವನ ಜೀವನದಲ್ಲಿ ಒಂದು ಭಾಷಣದಿಂದ ಬದಲಾವಣೆ ಹೊಂದಿರುವುದನ್ನು ಈ ರೀತಿ ಹೇಳುತ್ತದೆ.

"ಹತ್ತು ಮಳೆಗಾಲಗಳೂ ಉರುಳದ ಎಳೆಯ
ಹಲವು ಒಲವಿನ ಚಿನ್ನರ ಚಿಲುಮೆಯ ಗೆಳೆಯ
ರೊಡಗೂಡಿ ಕಾರಣಾಂತರದಿ ಊರಿಗಾಗಮಿಸಿದ

ಉಜ್ವಲ ದೇಶ ಭಕ್ತರೋರ್ವರ ದೇಶಾಭಿಮಾನದ
ಅಮೂಲ್ಯ ಭಾಷಣ ಏಕಾಗ್ರ ಚಿತ್ತದಿ ಆಲಿಸಿದೆ
ಅಕ್ಷರಶಃ ಅದರಲಿ ಅಡಗಿದ ಸಂದೇಶ ಪಾಲಿಸಿದೆ
ದೂರಬಿಸುಟಿದೆ ತಿರಸ್ಕಾರದಿ ಮಲ್ಲು ಟೊಪ್ಪಿಗೆ
ಪ್ರೇಮದಿ ತೊಟ್ಟೆ ಖಾದಿ ಬೆಟ್ಟ"

ಹೀಗೆ ಪರಿವರ್ತನೆಗೊಂಡ ಇವನನ್ನು ಇವರ ಮನೆಯವರು ಮುಂದಿನ ಶಿಕ್ಷಣಕ್ಕಾಗಿ ಎ.ವಿ. ಹೈಸ್ಕೂಲ ಹಂಸಭಾವಿಯಲ್ಲಿ ಹೆಸರು ಹಚ್ಚಿಸಿದರು. ಆದರೆ ತಾನೊಂದು ಬಗೆದರೆ ದೈವವೊಂದು ಬಗೆದಂತೆ ಈತನಿಗೆ ಶಿಕ್ಷಣ ಕೊಟ್ಟು ಅಂದು ಮನಪರಿವರ್ತನೆ ಮಾಡಿದ ದೀಕ್ಷಾ ಗುರು ಪಾಟೀಲ ಕಲ್ಲನಗೌಡರು ಪಠಿಸಿದ ಆಲೂರ ವೆಂಕಟರಾಯರ 'ಕರ್ನಾಟಕ ಗತ ವೈಭವ' ಆಲಿಸಿದಾಗ ಎಳೆಯ ವಯಸ್ಸಿನ ಮಹದೇವನು ಭಾರತಾಂಬೆಗೆ ಕಣ್ಣೀರನ್ನು ಸುರಿಸಿದನಂತೆ. ಅದಕ್ಕಾಗಿ ಇಂಗ್ಲೀಷನ್ನು ಕಲಿತರೆ ಭಾರತ ದೇಶದ ಅಪಚಾರವಾಗುವುದೆಂದು ಅದನ್ನು ಬಿಟ್ಟು ಖಾದಿ ಹೊತ್ತು ಸ್ವದೇಶಿ ಬಟ್ಟೆ ಬಗ್ಗೆ ಪ್ರಚಾರ ಮಾಡಿ ತಾನೇ ಸ್ವತಃ ನೂಲುವುದನ್ನು ನೇಯ್ಯುವುದನ್ನು ಒಂದು ವರ್ಷದ ಅವಧಿಯಲ್ಲಿ ಎಲ್ಲವನ್ನು ಕಲಿತು ಬಿಟ್ಟನು.

ಮುಂದೆ ಧಾರವಾಡದ ಗಂಡುಮೆಟ್ಟಿನ ಸ್ಥಳಕ್ಕೆ ಬಂದು 'ಭಾರತೀಯ ತರುಣರ ಸಂಘ'ವನ್ನು ಸೇರಿ ಅಲ್ಲಿ ಆಗಾಗ ಆಗಮಿಸುತ್ತಿದ್ದ ರಾಷ್ಟ್ರ ಮುಖಂಡರ ಸ್ವಾತಂತ್ರ್ಯದ ಬಗ್ಗೆ ವಿರೋಚಿಸಿ, ವೀರಸಂದೇಶವನ್ನು ಕೇಳಿದ ಮಹದೇವ. ರಾಷ್ಟ್ರಭಕ್ತಿ, ದೇಶಭಕ್ತಿ ಆತನಲ್ಲಿ ತುಂಬಿ ತುಳುಕುವಂತೆ ಮಾಡಿತು.

ಮುಂದೆ ಮಹಾದೇವನಿಗೆ ಸಬರ್ಮತಿ ಆಶ್ರಮಕ್ಕಾಗಿ ತರಬೇತಿಗೆ ಆಹ್ವಾನ ಬಂದಿತು. ಆದರೆ ಈತನ ಮನದಾಳದ ಇಚ್ಚೆಯು ಕೂಡ ಅಲ್ಲಿಗೆ ಹೋಗಬೇಕೆಂದಿದ್ದಿತು. ಆದರೆ ಅಲ್ಲಿಯ ಭಾಷೆ ಮತ್ತು ಆ ಆಶ್ರಮದ ನಡೆ ಏನು ಅರಿಯದೇ ಹೋಗುವುದೆಂತು ಮತ್ತೇ ಪುನಃ ಗಾಂಧೀಜಿಯವರು ಕರ್ನಾಟಕದ ಒಬ್ಬಿಬ್ಬರನ್ನು ತಡಮಾಡದೇ ಅತೀ ಶೀಘ್ರದಲ್ಲಿ ಸಬರ್ಮತಿಗೆ ಎಂದು ಗಾಂಧೀಜಿಯವರಿಂದ ಕಾಗದ ಬಂತು. ಮಹಾದೇವ ಏನು ಆಗಿದ್ದು ಆಗಲಿ ಎಂದು ನಗುನಗುತ್ತಾ ಗಾಂಧೀ ಆಶ್ರಮಕ್ಕೆ ಬಂದು ಅಲ್ಲಿ ಸತ್ಯ, ಅಹಿಂಸೆ, ಸತ್ಯಾಗ್ರಹಗಳ ದೀಕ್ಷೆ ಪಡೆದನು.

ಆಗ ಬ್ರಿಟಿಷರು ಉಪ್ಪಿನ ಮೇಲೆ ತೆರಿಗೆಯನ್ನು ಹಾಕಿದ್ದರು. ಅದನ್ನು ಪ್ರತಿಭಟಿಸುವುದಕ್ಕಾಗಿ ಕನ್ನಡದ ಏಕಮೇವ ವ್ಯಕ್ತಿ ಮೈಲಾರ ಮಹಾದೇವ ಅಲ್ಲಿಗೆ ಹೋದ. ಅಲ್ಲಿ ಬ್ರಿಟಿಷರ ಅನುಮತಿ ಇಲ್ಲದೇ ಉಪ್ಪನ್ನು ತಯಾರಿಸಿದ್ದಕ್ಕಾಗಿ ಜೈಲಿನಲ್ಲಿ ಹಾಕಿದರು. ಜೈಲುವಾಸ ಮುಗಿಸಿ ಒಬ್ಬ ಮುನಿ ತಪಸ್ಸು ಮುಗಿಸಿ ಬಂದಂತೆ ಸಾಬರಮತಿ ಆಶ್ರಮದಲ್ಲಿ ತಪಸ್ಸು ಪಡೆದು ತಾಯ್ನಾಡಿಗೆ ಆಗಮಿಸಿದ.

ಇಲ್ಲಿ ಅವನು ಬರುವುದೇ ತಡ ಸಂಭ್ರಮದಿಂದ ಸ್ವಾಗತವನ್ನು ಮಾಡಿ ಸತ್ಕರಿಸಿದರು. ಮಾರನೆ ವರ್ಷವೇ ಸತಿ ಸಿದ್ದಮ್ಮಳನ್ನು ಗಾಂಧೀಜಿ ಬಳಿಗೆ ಕರೆದೊಯ್ದು -

"ಎಳೆ ವಯದ ಮುಗ್ಧ ಬಾಲೆಗೆ ದೇಶ ಸೇವೆಯ ದೀಕ್ಷೆ ಕೊಡಿಸಿದ
ಅಲ್ಲಿರುವಾಗಲೆ ಸತಿ ಪತಿಗಳಿಬ್ಬರಿಗೂ ದೊರೆಯಿತು ಸೆರೆಮನೆ ಆತಿಥ್ಯ
ಸವಿನಯದ ಕಾಯ್ದೆ ಭಂಗ ಸತ್ಯಾಗ್ರಹದಲ್ಲಿ ಭಾಗವಹಿಸಿದುದಕ್ಕೆ"

ಅಲ್ಲಿ ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗಿ 'ಕಾಯ್ದೆ ಭಂಗ' ಚಳುವಳಿಯಲ್ಲಿ ಭಾಗವಹಿಸಿದ್ದಕ್ಕೆ ಸೆರೆಮನೆಯ ವಾಸ ಅನುಭವಿಸಿದರು. ಗಾಂಧೀಜಿಯವರ 'ಜನಸೇವೆ ಜನಾರ್ಧನ ಸೇವೆ, ಅದಕೆ ಮೀಸಲಾಗಿರಲಿ ನಿಮ್ಮ ಬದುಕು.

ಮುಂದೆ ಅವರು ತಾತನ ಆಶೀರ್ವಾದ ಪಡೆದು ತಾಯ್ನಾಡಿಗೆ ಆಗಮಿಸಿ ಸೇವಾ ಆಶ್ರಮವನ್ನು ಸ್ಥಾಪಿಸಿ ವರದಾ ನದಿಯ ದಡದ ಕೊರಡೂರಿನಲ್ಲಿ ವಿವಿಧ ಕಾರ್ಯಕ್ರಮ ನಡೆಸಿ ಅಲ್ಲಿ ಅನೇಕ ಬಗೆಯ ಶಿಕ್ಷಣ ಆರಂಭಿಸಿದನು. ಸಾಕ್ಷರತೆಯನ್ನು ಮಕ್ಕಳಿಗೆ ರಾಷ್ಟ್ರಪ್ರೇಮ ಬೀರುವ ಕಲಾ ಮತ್ತು ವ್ಯಾಯಾಮ ಮುಂತಾದವುಗಳನ್ನು ಕಲಿಸಿ ಪ್ರತಿ ಮನೆ ಮನೆಯಲ್ಲಿ ರಾಟಿ ಸ್ಥಾಪಿಸಿ ನೂಲು ತೆಗೆದರು. ಬಟ್ಟೆಯ ನೆಯ್ದರು ತಾವೂ ತೊಟ್ಟರೂ ಪರರಿಗೂ ಕೊಟ್ಟರೂ ಬಡತನ ಹಿಂಗಿ ಭಾಗ್ಯವು ಬಳಿ ಸೇರಿತು. ಆಶ್ರಮದಲ್ಲಿರುವವರಿಗೆ ಎಲ್ಲರಿಗೂ ಉದ್ಯೋಗ ದೊರಕಿತು. ಅರೆಬಟ್ಟೆ ದೂರಾಯ್ತು ಮಹಾತ್ಮರನ್ನು ನೆನಸಿ ರಾಷ್ಟ್ರಪ್ರೇಮ ಎಲ್ಲರಲ್ಲಿ ಉಳಿಯಿತು.

ಮುಂದೆ ದ್ವಿತೀಯ ಮಹಾಯುದ್ಧ ಪ್ರಾರಂಭವಾಯಿತು. ಆಗ ಎಲ್ಲೆಡೆ ಅಶಾಂತಿ ಆಕ್ರಂಧನ ಮೂಡಿತು. ಆಗ ಗಾಂಧೀಜಿ ಸ್ವಾತಂತ್ರ್ಯದ ಕೊನೆಯ ಕಹಳೆಯನ್ನೂದಿದರು.

"ಬ್ರಿಟಿಷರೇ ಭಾರತ ಬಿಟ್ಟು ಹೊರಡಿ | ಅಣತಿ ಅದು
ನಾಡಿಗರೇ, ಮಾಡಿರಿ ಇಲ್ಲವೆ ಮಡಿಯಿರಿ, ಮಂತ್ರವಿದು,
ದೇಶದ ಮೂಲೆ ಮೂಲೆಗಳಲಿ ಮೊಳಗಿತು ರಣಕಹಳೆಯ ವೀರಧ್ವನಿ
ನಾಡ ಬೆಟ್ಟ ಬಯಲು ಹೊಲಗದ್ದೆಗಳೆಲ್ಲೆಡೆಯಲ್ಲಿ
ಕೇಳಿ ಬಂದಿತು ಪ್ರತಿಧ್ವನಿ"

ದೇಶದ ಎಲ್ಲೆಡೆಗಳಲ್ಲಿ ಆಳರಸರಿಗೆ ಧಿಕ್ಕಾರ ಹಾಕಿ ಬಹು ಕ್ರೂರ ದಬ್ಬಾಳಿಕೆಯನ್ನು ವಿರೋಧಿಸಿದರು. ಲಾಠಿ ಏಟು ಗುಂಡಿನ ಮಳೆ ನಿತ್ಯದ ಮಾತಾಗಿ ಪೋಲೀಸರ ನೆರವಿಗೆ ಬ್ರಿಟಿಷರು ಸೈನ್ಯವನ್ನು ತಂದರು. ವಿಮಾನಗಳಿಂದ ಬಾಂಬು ಎಸೆದರು. ಮಹಿಳೆಯರನ್ನು ಮಕ್ಕಳನ್ನು ಬಿಡದೆ ಕೊಂದರು.

ಹೀಗೆ ಒಂದಕ್ಕೊಂದು ೧೯೪೨ರಲ್ಲಿ ನಾನಾ ರೀತಿ ನಡೆದಾಗ ಮೈಲಾರ ಮಹದೇವ 'ಕಬೀರ' ಎಂಬ ಗುಪ್ತನಾಮದಿಂದ ಒಂದು ತಂಡ ಕಟ್ಟಿ ಯುದ್ಧ ಪ್ರಾರಂಭಿಸಿದ ಸಂದರ್ಭದಲ್ಲಿ

ಜೈಲಿಗೆ ಹಾಕಿದ್ದರು. ಇಲ್ಲಿ ಪ್ರತಿಭಟಿಸಿದರು. ಚಾವಡಿಗಳನ್ನು ಸುಟ್ಟರು. ರೇಲ್ವೆ ನಿಲ್ದಾಣಗಳು ಉರುಳಿದವು. ಸರಕಾರಿ ದಪ್ತರ ಹೋಳಿ ನಡೆಯಿತು. ತಾರತಂತಿ ಕಂಬಗಳನ್ನು ತುಂಡು ತುಂಡು ಮಾಡಿದರು. ಪೋಲೀಸರ ಅಸ್ತ್ರ ಕಸಿದು ಸಮವಸ್ತ್ರ ಸುಟ್ಟು ಸರಕಾರಿ ವಾಹನಗಳಿಗೆ ಬೆಂಕಿ ಹಚ್ಚಿದರು. ಅಷ್ಟೇ ಅಲ್ಲದೇ ಧಾರವಾಡ ಜಿಲ್ಲೆಯ ತೆಂಕಣ ಭಾಗದ ಆಳರಸರ ದುರಾಡಳಿತವನ್ನು ಇಲ್ಲದಂತಾಗಿ ಮಾಡಿಸಿದನು. ಮಹಾದೇವನ ವೀರಕಾರ್ಯಕ್ಕೆ ಸಿಡಿಮಿಡಿಗೊಂಡ ಆಳರಸರು ಇವನ ಸೊಲ್ಲಡಗಿಸಲು ನಿಶ್ಚಯಿಸಿದರು. ಆಗ ಸರಕಾರ ಮಹಾದೇವನನ್ನು ಹಿಡಿದು ಕೊಟ್ಟವರಿಗೆ ದುಡ್ಡಿನ ಆಸೆ ತೋರಿಸಿದರು. ಜೀವಂತ ಹಿಡಿಯಲಾಗದಿದ್ದರೆ ಕೊಂದಾದರೂ ಹೆಣಾ ತರಬೇಕು ಎಂದು ಹೊಂಚು ಹಾಕಿದರು. ಸ್ಥಳೀಯ ಪೋಲೀಸರಿಗೆ ಆಗುವುದಿಲ್ಲವೆಂದು ಪರಪೋಲಿಸರನ್ನು ತಂದರು. ಎಲ್ಲೆಲ್ಲೂ ಸಶಸ್ತ್ರ ಪೋಲೀಸರು ಸರ್ಪಾಗಾವಲು ಸೈನಿಕರ ಬೆಂಗಾವಲು ಹೊಸರಿತ್ತಿಯಲ್ಲಿ ಹಲವು ವರ್ಷಗಳಿಂದ ನಡೆದು ಬಂದು ಗಾಂಧೀ ಆಶ್ರಮದ ನೆಲೆಯಲ್ಲಿ ಕಂದಾಯದ ಹಣ ಕೂಡಿಸುವು ನೆಪವೊಡ್ಡಿ ಪೋಲೀಸರು ಬರುತ್ತಿದ್ದರು. ಆಗ ಮಹಾದೇವ ಕಂದಾಯದ ವಿರುದ್ಧ ಬಂಡೆದ್ದು ಅಲ್ಲಿ ಬರುತ್ತಾನೆ.

ಅಗಿನ್ನು ಚುಮು ಬೆಳಕು ಹರಿಯುವ ಮುಂಜಾವು ಹಕ್ಕಿಗಳು ಚಲಿಪಿಲಿ ಸದ್ದು ಗೈದು ಪಕ್ಕ ಬಿಚ್ಚಿ ಹಾರಿ ಹೋಗುವ ಕಾಲ ನೇಸರನಿನ್ನು ತಾಯಿಗರ್ಭದಿಂದ ಹೊರ ಬೀಳದ ಸಂಧಿ ಸಮಯ ನಿತ್ಯ ಕೆಲಸ ಮಾಡಿ ಬಳಲಿ ಮಲಗಿದ್ದ ಜನ ಎದ್ದಿರದ ಕಾಲ, ಆ ಸಮಯದಲ್ಲಿ ಮಹಾದೇವ ರೈತರನ್ನು ಕೂಡಿಸಿ ಕಂದಾಯದ ಹಣ ಕೂಡಿಟ್ಟ ವೀರಭದ್ರ ದೇವರ ಗುಡಿಗೆ ನೀರಣ ಭೈರವನಾಗಿ ಮೈಲಾರ ಮಹಾದೇವ ದಾಳಿಯಿಟ್ಟು ಕಾವಲಿದ್ದ ಪೋಲೀಸರನ್ನು ಮಿಸುಕಾಡದಂತೆ ತೆಕ್ಕೆಯಲ್ಲಿ ಹಿಡಿದುಬಿಟ್ಟ.

ಆಗ ಗರ್ಭಗುಡಿಯಲ್ಲಿದ್ದ ಪೋಲೀಸ ಉಳಿದ ಪೋಲೀಸರನ್ನು ಕೊಂದದ್ದು ನೋಡಿ ತನ್ನನ್ನು ಕೊಲ್ಲುತ್ತಾರೆಂಬ ಬೆದರಿಕೆಯಿಂದ ಪಾರಾಗಬೇಕೆಂದು ಮೋಸದಿಂದ ತನ್ನ ಜೀವವನ್ನು ಉಳಿಸು ಎಂದು ಅಂಗಲಾಚಿದ. ಅಷ್ಟೇ ಅಲ್ಲ ತಾನೊಬ್ಬ ನಿರುಪದ್ರವಿ ಎಂದು ಬಾಗಿ ಬೇಡಿಕೊಂಡಿದ್ದ ಆದರೆ ಮರುಕ್ಷಣದ ಮಾಯದ ಆಟ ನಡೆದೇ ಬಿಟ್ಟಿತು.

> "ಮೋಸದ ಮರುಕ್ಷಣದ ಒಂದರ ಮೇಲೊಂದು ನಾಲ್ಕು ಗುಂಡು ಹಾರಿಸಿದ
> ಅಮರ ವೀರಾಗ್ರಣಿ ಅಹಿಂಸಾ ಪುರುಷನೆದೆಗೆ ಗುರಿಯಿಟ್ಟು ಬೈನಟ್ಟು ಬೀಸಿದಾ
> ಅದೃಷ್ಟವಂಚಿತ ಮಹಾದೇವ ನನ್ನೆದೆ ಸೀಳಿ ರಕ್ತ ಕಾರಂಜಿಯಂತೆ ಪುಟಿಯಿತು
> ನೆರೆ ಬಂದಾಗಿನ ವರದಾನದಿಯ ಪ್ರವಾಹ ಕೋಡೆಯಾಗಿ ಹರಿಯಿತು"

'ತನ್ನ ಪ್ರಾಣವನ್ನು ಉಳಿಸಿ' ಎಂದು ದೈನ್ಯದಿಂದ ಬೇಡಿದ ಪೋಲಿಸನೇ ಮಹದೇವ ಮತ್ತು ಕೊರಗನೂರಿನ ತಿರಕಪ್ಪ ಮಡಿವಾಳರ ಹಾಗೂ ಅದೇ ಊರಿನ ವೀರಯ್ಯ ಮೂವರನ್ನು ಗುಂಡಿಟ್ಟು ಕೊಂದೇ ಬಿಟ್ಟನು.

ಶಾಂತಿಧೂತ ಧೀರ ಸತ್ಯಾಗ್ರಹಿ ಧರೆಗುರುಳಿದ 'ಹೇ ಬಾಪು' ಎನ್ನುತ್ತಾರೆ. ಜೊತೆಗೆ ಅನುಚರರಾದ ತಿರಕಪ್ಪ, ವೀರಯ್ಯರಿಬ್ಬರೂ ಪ್ರಾಣ ಬಿಟ್ಟರು.

ಅಂದು ಅನಿಷ್ಟ ಸೂಚಿ ಕ್ಯುಖಾತನು ಏಪ್ರಿಲ್ ಒಂದು ಸಾವಿರದ ಒಂದುನೂರ ನಲವತ್ತು ಮೂರರಂದು (೧೯೪೩) ಎಲ್ಲರೆದೆಯಾಡಿಸಿ ನಡೆದೋಯ್ತು ಮುರ್ಖತನದ ಕಾರ್ಯ. ಆಗ ನಾಡಿನ ತುಂಬ ಅಮರ ಬಲಿದಾನಿಯ ವೀರಮರಣ ಕಂಡು ಜನರು ಕಣ್ಣೀರನ್ನು ಸುರಿಸಿದರು. ಮಹದೇವನು ಮಡಿದ ಸುದ್ದಿ ಕೇಳಿ ಕೆಲ ಸಮಯ ಮಾತ್ರ ಹೊರಡದೇ ಗಾಂಧೀಜಿಯವರು ಮಹಾದೇವ ಹುತಾತ್ಮನಾದನೊ ಅವನು ಅಮರ ನನ್ನ ನೆಚ್ಚಿನ ಶಿಷ್ಯ ಎಂದರಂತೆ ಹೀಗೆ ಮಹಾದೇವ ಸ್ವಾತಂತ್ರ್ಯ ಬರುವುದು ಇನ್ನು ನಾಲ್ಕು ವರ್ಷ ಇದ್ದಾಗಲೇ ವೀರಮರಣವನ್ನು ಅಪ್ಪಿದನು.

ಮಹದೇವನಂತಹ ವೀರಾಗ್ರಣಿಯನ್ನು ಅವನ ವೀರ ಸಂಗಡಿಗರನ್ನು ಅವರ ಮರಣಾ ನಂತರ ಮರೆಯದೇ ಉತ್ತರ ಕರ್ನಾಟಕದ ವೀರಗೀತೆಗಳ ಮೂಲಕ ಅವರನ್ನು ಸದಾ ನೆನಪಿಸಿಕೊಳ್ಳುತ್ತಾ ಮುಂದಿನ ಪೀಳಿಗೆಯ ಜನರಿಗೂ ಉಳಿಸಿಕೊಟ್ಟಿದ್ದಾರೆ.

## ೫.೨. ರಾಜಕೀಯ ನೆಲೆ

ರಾಜಕೀಯತೆ ಎನ್ನುವುದು ಮನುಷ್ಯನ ಮೂಲ ಗುಣ ಹೀಗಾಗಿ ಅವನು ಯಾವುದೇ ಕ್ಷೇತ್ರದಲ್ಲಾದರು ರಾಜಕೀಯುವನ್ನು ಮಾಡೆ ಮಾಡುತ್ತಾನೆ. ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಮನುಷ್ಯ ರಾಜಕೀಯವನ್ನು ಮಾಡುತ್ತಾ ಹೋಗುತ್ತಾನೆ. ಇಲ್ಲಿಯೂ ಕೂಡ ಬ್ರಿಟೀಷರು ವ್ಯಾಪರಕ್ಕೆಂದು ಭಾರತಕ್ಕೆ ಬಂದರು ಆದರೆ ಅವರು ವ್ಯಾಪಾರವನ್ನು ಮಾಡಿ ಲಾಭ ಮಾಡಿಕೊಂಡು ತಮ್ಮ ದೇಶಕ್ಕೆ ಮರಳಿ ಹೋಗಲಿಲ್ಲ. ಅದರ ಬದಲಾಗಿ ಭಾರತದಲ್ಲಿ ತಮ್ಮದೇ ಆದ ರೀತಿಯಲ್ಲಿ ಆಡಳಿತವನ್ನು ರೂಪಿಸಿ ತಮ್ಮದೇ ಆದ ಒಂದು ರಾಜಕೀಯ ವ್ಯವಸ್ಥೆಯನ್ನು ರೂಪಿಸಿಕೊಂಡರು ಅವರ ರಾಜಕೀಯ ನೆಲೆಯು ಅವರ ಸ್ವಾರ್ಥದ ಪ್ರತಿಬಿಂಬವಾಗಿತ್ತು ಭಾರತೀಯರ ಮನಸ್ಥಿತಿಯನ್ನು ಅರಿತು ಅಂದು ಭಾರತದ ಜನರು ಅ ಭದ್ರವಾದ ಪರಿಸ್ಥಿತಿಯಲ್ಲಿ ಭಾರತದ ಜನಸಾಮಾನ್ಯರ ಅಂದರೆ ಭಾರತದ ಸಾಂಸ್ಕೃತಿಕ ಪರಂಪರೆ ಮತ್ತೆ ಇಲ್ಲಿಯ ರಾಜಕೀಯ ಪರಿಸ್ಥಿತಿಯ ಲಾಭಾ ಪಡೆದು ಅವರು ತಮ್ಮದೆ ಆದ ರೀತಿಯಲ್ಲಿ ಭಾರತದಲ್ಲಿ ರಾಜಕೀಯ ವ್ಯವಸ್ಥೆಯನ್ನು ರೂಪಿಸಿಕೊಂಡರು.

ಅಂದು ಭಾರತ ಆಳ ಅರಸರ ಆಳ್ವಿಕೆಯಿಂದ ಚಿದ್ರ ಚಿದ್ರವಾಗಿ ಆಡಳಿತವನ್ನು ನಿರ್ವಹಿಸುತ್ತಿದ್ದರು. ಕೇಂದ್ರಿಯ ಆಡಳಿತವಿರಲಿಲ್ಲ ಮತ್ತು ಭಾರತೀಯರು ಮುಗ್ಧರು ಅನಾಗರೀಕರು ಮತ್ತು ಅವರು ಮೂಡರು ಎಂದು ತಿಳಿದಿದ್ದರು. ಭಾರತದಲ್ಲಿ ಮೇಲ್ ಜಾತಿ, ಕೆಳಜಾತಿ ಹಿಂದೂಧರ್ಮ ಮತ್ತು ಮುಸ್ಲಿಂಧರ್ಮ ಹೀಗೆ ಬೇರೆ ಬೇರೆ ಧರ್ಮಗಳಿರುವುದನ್ನು ಗಮನಿಸಿ ಭಾರತೀಯರ ಮನಸ್ಸು ಒಂದೇ ತೆರನಾದಲ್ಲಿ ಅವರು ಚಿದ್ರ ಚಿದ್ರವಾದ ಸಮೂಹ ಪಂಗಡಗಳಲ್ಲಿ ವಾಸ ಮಾಡುತ್ತಾರೆ ಹಾಗಾಗಿ ಬೇಧ ನೀತಿಯನ್ನು ತಮ್ಮ ರಾಜಕೀಯ ವ್ಯವಸ್ಥೆಯಲ್ಲಿ ರೂಪಿಸಿಕೊಂಡರು. ಇವರ ಒಂದು ರಾಜಕೀಯದ ನೀತಿಗಳನ್ನು ವಿಂಗಡಿಸಿಕೊಂಡು ಅವುಗಳನ್ನು

ವಿರೋಧಿಸಿ ಭಾರತೀಯರು ಕೆಲವು ಪ್ರತಿಭಾವನೆಗಳನ್ನು ಮಾಡಿದರೆ ರಾಜಕೀಯ ನೆಲೆಯ ಪ್ರತಿರೋಧಗಳು ಈ ಕೆಳಗಿನಂತಿವೆ.

೧. ನಿಶ್ಯಸ್ತ್ರೀಕರಣ ಕಾಯಿದೆ ಹಾಗೂ ಸ್ಥಳೀಯ ಪ್ರತಿರೋಧಗಳು

೨. ದತ್ತು ಪದ್ಧತಿಯ ನೆಲೆಯ ಪ್ರತಿರೋಧಗಳು

೩. ಸಹಾಯಕ ಸೈನ್ಯಪದ್ಧತಿಯ ನೆಲೆಯ ಪ್ರತಿರೋಧಗಳು

**೫.೨.೧. ನಿಶ್ಯಸ್ತ್ರೀಕರಣ ಕಾಯಿದೆ ಹಾಗೂ ಸ್ಥಳೀಯ ಪ್ರತಿರೋಧಗಳು**

ವಸಹಾತುಶಾಹಿ ಕಾಲಸಂದರ್ಭದಲ್ಲಿ ಭಾರತದಲ್ಲಿ ವಿವಿಧ ರೀತಿಯ ಬ್ರಿಟೀಷ್ ವಿರೋಧಿ ಪ್ರತಿರೋಧಗಳಾಗಿದ್ದವು. ಅವು ಬ್ರಿಟೀಷರ ರಾಜಕೀಯ ಕುತಂತ್ರಗಳನ್ನೂ ವಿರೋಧಿಸುವಂತ ಪ್ರತಿರೋಧಗಳಾಗಿದ್ದವು. ಬ್ರಿಟೀಷರು ಭಾರತೀಯರನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡು ತಮ್ಮ ಪ್ರಭುತ್ವವನ್ನು ಸ್ಥಳೀಯರ ಮೇಲೆ ಸಾಧಿಸುವುದು ಅವರ ಮುಖ್ಯ ಉದ್ದೇಶವಾಗಿತ್ತು. ಅದಕ್ಕಾಗಿ ಅವರು ಆಗ ಭಾರತೀಯರ ಮೇಲೆ ಹಲವಾರು ರೀತಿಯ ಕಾಯಿದೆ ಕಾನೂನುಗಳನ್ನು ಒತ್ತಾಯಪೂರ್ವಕವಾಗಿ ಇವರ ಹೇರುತ್ತಿದ್ದರು ಯಾಕೆಂದರೆ ಅವರಿಗೆ ಭಾರತೀಯರ ಕುರಿತು ಭಯ ಇದ್ದೇ ಇತ್ತು ತಾವು ಮಾಡುವುದು ಅವರ ಆಡಳಿತ ದುರಾಡಳಿತ ಎಂದು ತಿಳಿದು ಒಂದಿಲ್ಲ ಒಂದಿನ ಭಾರತೀಯರು ತಮ್ಮನ್ನು ದುಸ್ತಿತಿಗೆ ತಂದೆ ತರುತ್ತಾರೆ ಎನ್ನುವುದು ಅವರ ಆತ್ಮವಲೋಕನದಿಂದ ತಿಳಿದಿದ್ದರು ಅದಕ್ಕಾಗಿನೆ ಅವರು ಒತ್ತಾಯ ಪೂರ್ವಕವಾಗಿ ಮತ್ತು ದುರುದ್ದೇಶದಿಂದ ಹಲವಾರು ಅಸಮರ್ಪಕವಾದ ಕಾಯಿದೆಗಳನ್ನು ಇವರ ಮೇಲೆ ಹೇರುತ್ತಿದ್ದರು ಅಂತಹ ಕಾಯಿದೆಗಳಲ್ಲಿ ನಿಶ್ಯಾಸ್ತ್ರೀಕರಣ ಕಾಯಿದೆ ಎನ್ನುವುದು, ನಿಶ್ಯಾಸ್ತ್ರೀಕರಣ ಕಾಯಿದೆ ಮತ್ತು ಅದರ ವಿರೋಧಿ ಭಾರತೀಯ ಪ್ರತಿರೋಧಿಗಳನ್ನು ತಿಳಿಯುದಕ್ಕಿಂತ ಮುಂಚಿತವಾಗಿ ನಿಶ್ಯಾಸ್ತ್ರೀಕರಣಾ ಕಾಯ್ದೆ ಎಂದರೇನು ಎಂದು ಅರ್ಥೈಸುವುದು ಸೂಕ್ತ.

**ನಿಶ್ಯಸ್ತ್ರೀಕರಣ ಕಾಯ್ದೆ**

"೧೮೫೭ ಈಸ್ಟ್ ಇಂಡಿಯಾ ಕಂಪನಿ ಜಾರಿಗೆ ತಂದ ನಿಶ್ಯಸ್ತ್ರೀಕರಣಾ ಕಾಯ್ದೆ ಅಥವಾ ಸಶಸ್ತ್ರ ನಿಯಂತ್ರಣ (Disarnament Act of 11th septmber - 1857) ಕಾನೂನಿನ ಪ್ರಕಾರ ಇಂಗ್ಲೀಷರದು, ಭಾರತದಲ್ಲಿ ವಾಸಿಸುವ ಎಲ್ಲರೂ ತಮ್ಮಲ್ಲಿರುವ ಸಶಸ್ತ್ರಗಳನ್ನು ಕಂಪನಿ ಸರಕಾರಕ್ಕೆ ಒಪ್ಪಿಸಬೇಕು ಅಥವಾ ಹೊಸದಾಗಿ ಸಶಸ್ತ್ರಗಳನ್ನು ಖರೀದಿಸಬೇಕಾಗಿದ್ದಲ್ಲಿ ಕಂಪನಿ ಸರಕಾರದ ಪರವಾನಿಗೆ (ಲೈಸನ್ಸ್) ಪಡೆದುಕೊಳ್ಳಬೇಕು. ಅನುಮತಿ ಇಲ್ಲದೆ ಆಯುಧ ಹೊಂದುವುದು ಮಹಾ ಅಪರಾಧ ಈ ಕಾನೂನು ಉಲ್ಲಂಘನೆಗೆ ಉಗ್ರ ಶಿಕ್ಷೆ ಹಾಗೂ ಬಾರೀ ಮೊತ್ತದ ದುಡ್ಡು ಕೂಡ ಇದು ಸ್ವಾಭಿಮಾನಿ ಭಾರತೀಯರನ್ನು ಮಾನಸಿಕವಾಗಿ ಕಂಗೆಡಿಸುವಂತಹ ಕರಾಳ ಶಾಸನವಾಗಿತ್ತು."[೨೫] ಈ ತೆರನಾಗಿ ನಿಶ್ಯಸ್ತ್ರೀಕರಣ ಕಾಯ್ದೆ ಆಗಿತ್ತು. ಇಂತಹ ಒಂದು ದುರುದ್ದೇಶದ ಕಾಯ್ದೆ ಭಾರತೀಯರ ಮೇಲೆ ಒತ್ತಾಯಪೂರ್ವಕವಾಗಿ ಹೇರಲಾಗಿತ್ತು. ಇದು ಬ್ರಿಟೀಷರ

ಒಂದು ರಾಜಕೀಯ ಕುತಂತ್ರವಾಗಿ ಕಂಡುಬಂತು. ಇಂತಹ ಒಂದು ವಸಹಾತುಶಾಹಿಗಳ ಕಾಯಿದೆಯ ವಿರುದ್ಧ ಸ್ಥಳೀಯ ಭಾರತದಲ್ಲಿ ಅದನ್ನು ವಿರೋಧಿಸಿ ಪ್ರತಿರೋಧಗಳನ್ನು ಒಡ್ಡಿರುವುದನ್ನು ನಾವು ಚರಿತ್ರೆಯಿಂದ ಮತ್ತೆ ಮೌಖಿಕ ಸಾಹಿತ್ಯವಾದ ಲಾವಣಿ ಸಾಹಿತ್ಯದಿಂದ ಗೊತ್ತಾಗುತ್ತದೆ. ಲಾವಣಿ ಸಾಹಿತ್ಯ ಜನಸಾಮಾನ್ಯರ ಮಧ್ಯದಲ್ಲಿಯೇ ರಚನೆಗೊಂಡಿರುವುದರಿಂದ ಇಂತಹ ಕಾಯಿದೆಗಳನ್ನು ಹೆಚ್ಚು ಪರಿಣಾಮಬೀರಿರುವುದು ಕುಲಿ ನಾಲಿ ಮಾಡುವಂತ ಶ್ರಮಿಕ ವರ್ಗದ ಮೆಲೆ ಯಾಕೆಂದರೆ ಅವರು ತಮ್ಮ ಬದುಕನ್ನು ಕಟ್ಟಿಕೊಳ್ಳಲು ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳಲು ಹಲವಾರು ಸಶಾಸ್ತ್ರಗಳನ್ನು ಬಳಸುತ್ತಿದ್ದರು. ಅದಕ್ಕಾಗಿ ಇಂತಹ ಶ್ರಮಿಕ ವರ್ಗವೆ ಈ ಕಾಯಿದೆಯನ್ನು ವಿರೋಧಿಸಿರುವುದು ಕಂಡುಬರುತ್ತದೆ.

ಬ್ರಿಟೀಷರ ನಿಶ್ಯಸ್ತ್ರೀಕರಣ ಕಾಯ್ದೆ ಅನುಷ್ಠಾನಕ್ಕೆ ಬಂದನಂತರ ಸ್ಥಳೀಯ ಭಾರತೀಯ ಸುಮಾರು ಜನ ತಮ್ಮಲ್ಲಿದ್ದ ಶಸ್ತ್ರಗಳನ್ನು ಬ್ರಿಟೀಷರಿಗೆ ಒಪ್ಪಿಸಿದರೆ ಅಲ್ಲದೆ ಹೊಸದಾಗಿ ಸಶಾಸ್ತ್ರಗಳನ್ನು ಕೊಂಡುಕೊಳ್ಳುವಾಗ ಬ್ರಿಟೀಷರ ಪರವಾನಗಿ ತೆಗೆದುಕೊಳ್ಳುತ್ತಿದ್ದರು. ಆದರೆ ಈ ಕಾಯಿದೆಯನ್ನು ವಿರೋಧಿಸಿ ನಮ್ಮ ಭಾರತೀಯರಲ್ಲಿ ಬ್ರಿಟೀಷರ ನಿಶ್ಯಸ್ತ್ರೀಕರಣ ಕಾಯ್ದೆಯನ್ನು ವಿರೋಧಿಸಿ ನಡೆದ ಪ್ರತಿಭಟನೆಗಳು ಎರಡು ಸ್ಥಳಗಳಲ್ಲಿ ನಡೆದಿರುವುದು ನಮ್ಮ ಚರಿತ್ರೆಯಿಂದ ತಿಳಿಯುತ್ತದೆ. ಒಂದು 'ಹಲಗಲಿ ಬಂಡಾಯ' ಇನ್ನೊಂದು ನರಗುಂದ ಬಾಬಾ ಸಾಹೇಬನ ಬಂಡಾಯ ನರಗುಂದ ಬಾಬಾ ಸಾಹೇಬನ ಬಂಡಾಯ ದತ್ತು ಪದ್ದತಿಯನ್ನು ವಿರೋಧಿಸಿ ನಡೆದ ಪ್ರತಿಭಟನೆ ಆಗಿದ್ದರು. ಅವನಿಗೂ ಕೂಡಾ ಬ್ರಿಟೀಷರು ಸಶಾಸ್ತ್ರಗಳನ್ನು ಒಪ್ಪಿಸಲು ಆದೇಶ ಮಾಡಿರುತ್ತಾರೆ. ಅದು ಈ ಕಾಯ್ದೆಗೆ ಅನುಗುಣವಾಗಿ ಆದರೆ ನರಗುಂದ ಬಾಬಾಸಾಹೇಬ ಅವರು ಅಸ್ತ್ರಗಳನ್ನು ಒಪ್ಪಿಸಲು ನಿರಾಕರಿಸಿದಾಗ ಅವನ ಮೇಲು ಬ್ರಿಟೀಷರು ಯುದ್ಧವನ್ನು ಮಾಡಿರುವುದು ಚರಿತ್ರೆಯಿಂದ ತಿಳಿಯುತ್ತಾದೆ. ಆದರೆ ಲಾವಣಿಯಲ್ಲಿ ಎಲ್ಲ ಇದರ ಕುರಿತು ಇಲ್ಲಿ ಕೇವಲ ಈ ಬಂಡಾಯ ದತ್ತು ಪದ್ಧತಿಯನ್ನು ವಿರೋಧಿಸಿ ನಡೆದ ಬಂಡಾಯ ಎನ್ನುವುದು ಲಾವಣಿಗಳಲ್ಲಿ ಪ್ರತಿಬಿಂಬಿತವಾಗಿದೆ. ಲಾವಣಿ ಸಾಹಿತ್ಯದಲ್ಲಿ ಇದರ ಕುರಿತು ಪುರಾವೆ ಇರುವುದಕ್ಕೆ ಕಾರಣ ಲಾವಣಿ ಸಾಹಿತ್ಯ ಶ್ರಮಿಕರ ಮಧ್ಯದಲ್ಲಿ ರಚನೆಯಾದ ಸಾಹಿತ್ಯವಾಗಿರುವುದರಿಂದ ಇದು ನರಗುಂದ ಬಾಬಾ ಸಾಹೇಬ ಎನ್ನುವಂತ ಒಬ್ಬ ಸಂಸ್ಥಾನದ ಅಧಿಕಾರಿಗೆ ಆಗಿರುವುದರಿಂದ ಲಾವಣಿ ಸಾಹಿತ್ಯದಲ್ಲಿ ನರಗುಂದಕ ಬಾಬಾಸಾಹೇಬನನ್ನು ಸಂಪೂರ್ಣನಾಗಿ ತನ್ನ ಮಡಿಲಲ್ಲಿ ಹಿಡಿದಿಡುವುದರಲ್ಲಿ ಅದು ವಿಫಲವಾಗಿದೆ ಅಂತ ಅನಿಸುತ್ತದೆ. ಇಲ್ಲಿ ಈ ದುರಂತ ಹೆಚ್ಚು ದತ್ತು ಪದ್ದತಿಯನ್ನು ವಿರೋಧಿಸಿರುವುದರಿಂದ ಲಾವಣಿಕಾರರು ದತ್ತು ಪದ್ದತಿ ಬಂದು ಈ ದುರಂತಕ್ಕೆ ಮುಖ್ಯ ಕಾರಣ ದತ್ತು ಪದ್ಧತಿ ವಿರೋಧಿಸಿದೆ ಈ ಕಾಯಿದೆಯಿಂದ ಈ ನಿಶ್ಯಸ್ತ್ರೀಕರಣ ಕಾಯಿದೆ ಮರೆ ಮಾಚಿರಬಹುದು ಎಂದು ಅನಿಸುತ್ತದೆ. ಅದು ಏನೇ ಇರಲಿ ನಿಶ್ಯಸ್ತ್ರೀಕರಣ ಕಾಯಿದೆಯನ್ನು ವಿರೋಧಿಸಿ, ಬ್ರಿಟೀಷರ ವಿರೋಧಿಗಳಲ್ಲಿ ಹಲಗಲಿ ಬಂಡಾಯ ಮುಖ್ಯವಾಗಿ ಕಂಡುಬರುತ್ತದೆ. ಇಂತಹ ಹಲವಾರು ನಿಶ್ಯಸ್ತ್ರೀಕರಣಾ

ಕಾಯಿದೆಯನ್ನು ವಿರೋಧಿಸಿ ನಮ್ಮ ಭಾರತದಲ್ಲಿ ಇನ್ನು ಹಲವಾರು ಪ್ರತಿಭಟನೆಗಳು ನಡೆದಿರಬಹುದು ಆದರೆ ಅವು ಚರಿತ್ರೆ ಮತ್ತು ಲಾವಣಿಯಿಂದ ಮರೆ ಮಾಚಿರಬಹುದು ಎಂದು ಅನಿಸುತ್ತದೆ. ಅದೂ ಏನೇ ಇರಲಿ ಇಲ್ಲಿ ಮುಖ್ಯವಾಗಿ ಲಾವಣಿ ಸಾಹಿತ್ಯ ನಿಶ್ಯಸ್ತ್ರೀಕರಣ ಕಾಯಿದೆ ವಿರೋದ್ಧ ನಡೆದ ಪ್ರತಿಭಟನೆಗಳನ್ನು ಅಧ್ಯಯನ ಮಾಡುವುದು ಈ ಒಂದು ಅಧ್ಯಾಯದ ಉದ್ದೇಶ ಎಂದು ಹೇಳುತ್ತೇನೆ ಅದಕ್ಕಿಂತ ಮುಂಚೆ ಹಲಗಲಿ ಬಂಡಾಯದ ಕುರಿತು ತಿಳಿಯುವುದು ಅವಶ್ಯವಾಗಿದೆ.

### ಹಲಗಲಿ ಬಂಡಾಯ

ಈ ಮುಂಚೆ ಹೇಳಿದ ಹಾಗೇ ಸಶಸ್ತ್ರ ನಿಷೇದ ಕಾಯಿದಯನ್ನು ೧೮೫೭ ಸೆಪ್ಟೆಂಬರ್ ೧೧ ರಂದು ಬ್ರಿಟೀಷರು ಭಾರತೀಯರಿಗೆ ಜಾರಿಗೆ ತಂದರು ಈ ಶಸ್ತ್ರಾಸ್ತ್ರ ನಿಷೇಧ ಕಾಯ್ದೆ ಬೆಳಗಾವಿ ಮ್ಯಾಜಿಸ್ಟ್ರೇಟ್ ಲೆ.ಹೆ.ಚಿ ಸೆಟಿನೆ ಕರನ ಮೂಲಕ ಮುಧೋಳ ಸಂಸ್ಥಾನಕ್ಕೂ ಬಂದು ತಲುಪಿತು. ಸಂಸ್ಥಾನದಲ್ಲಿಯ ಕೆಲಸ್ವಾಭಿಮಾನಿ ಸೈನಿಕರು ಪ್ರಾರಂಭದಲ್ಲಿ ಕಾನೂನನ್ನು ವಿರೋಧಿಸಿದರು ಆದರೆ ಕೊನೆಗೆ ಪರಿಸ್ಥಿತಿಯೊಡನೆ ಹೊಂದಿಕೊಂಡು ಬ್ರಿಟೀಷರ ಜೊತೆ ರಾಜಿ ಮಾಡಿಕೊಂಡರು, ಶಸ್ತ್ರಾಸ್ತ್ರಗಳನ್ನು ಬ್ರಿಟೀಷರಿಗೆ ಒಪ್ಪಿಸಿಬಿಟ್ಟರು. “ಇಲ್ಲಿ ಕುಂದರಗಿಯ ಕೃಷ್ಣರಾವ್ ಎಂಬ ಕಾರಬಾರಿ ಅತ್ಯಂತ ಚುರುಕಿನಿಂದ ಈ ರಾಜಿಕಾರ್ಯ ನಿಭಾಯಿಸಿದ್ದು ಭಯ ಅಧಿಕಾರ ಆಮಿಷಕ್ಕೊಳಗಾದ ಜನ ಆತ್ಮಗೌರವವನ್ನು ಹೇಗೆ ಒತ್ತೆ ಇಡುತ್ತಾರೆನ್ನುವುದು ಇಲ್ಲಿ ಎದ್ದು ಕಾಣುತ್ತದೆ. ಶಸ್ತ್ರಾಸ್ತ್ರ ನಿಷೇಧ ಕಾಯಿದೆ ಹಲಗಲಿಯ ಬೇಡರಿಗೂ ಬಂದು ತಲುಪಿತು ಆದರೆ ಅವರು ಕುಂದಗಿಯ ಕೃಷ್ಣರಾವ್ ಅವರ ತರಹ ಆತ್ಮವಂಚನೆಯ ಕೆಲಸ ಮಾಡಲಿಲ್ಲ. ಅವರು ಧೈರ್ಯವಾಗಿ ಬ್ರಿಟೀಷರ ವಿರುದ್ಧ ಅಡ್ಡಿ ಆತಂಕಗಳನ್ನುಂಟು ಮಾಡಿದರು. ಅತಿ ತೀವ್ರವಾಗಿ ಇದನ್ನು ವಿರೋಧಿಸಿದರು ಕಾರಣ ಶಸ್ತ್ರಾಸ್ತ್ರಗಳೇ ಅವರ ಜೀವನಕ್ಕೆ ಆಧಾರಸ್ತಂಭಗಳಾಗಿದ್ದವು.”[೨೬] ಕೆಲವು ವಿದ್ವಾಂಸರು ಹಲಗಲಿಯ ಬೇಡರಿಗೆ ಶಸ್ತ್ರಾಸ್ತ್ರಗಳಿಂದ ಬೇಟೆಯನ್ನೇ ಮೂಲ ಉದ್ಯೋಗವನ್ನಾಗಿ ಮಾಡಿಕೊಂಡು ಅವರು ಬದುಕುತ್ತಿದ್ದರು ಎಂದು ಹೇಳುತ್ತಾರೆ. ಅಂತವರಲ್ಲಿ ವೀರೇಂದ್ರ ಶೀಲವಂತರು ಒಬ್ಬರು. ಆದರೆ ಬೇಟೆ ಆಡುವುದೇ ಅವರ ಮೂಲ ಉದ್ಯೋಗ ಅದೇ ಅವರ ಜೀವನದ ಆಧಾರಸ್ತಂಭ ಎನ್ನುವುದನ್ನು ಸ್ವಲ್ಪ ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ ಯಾಕೆಂದರೆ ಮುದೋಳ ತಾಲ್ಲೂಕಿನ ಹಲಗಲಿ ಇರುವುದು ಬಯಲು ಸೀಮೆಯ ಪ್ರದೇಶ ಅಲ್ಲಿ ಯಾವುದೇ ಗುಡ್ಡಗಾಡು ಅರಣ್ಯ ಪ್ರದೇಶ ಇಲ್ಲ ಎಂದು ಅನಿಸುತ್ತದೆ. ಅರಣ್ಯವೇ ಇಲ್ಲ ಎಂದರೆ ಯಾವ ಪ್ರಾಣಿಗಳ ಸುಳಿವು ಅಲ್ಲಿ ಸಿಗುವುದಿಲ್ಲ ಎಂದು ಅನಿಸುತ್ತದೆ ಬಯಲು ಸೀಮೆಯಲ್ಲಿ ಪ್ರಾಣಿಗಳು ವಾಸಮಾಡಲು ಸಾಧ್ಯವಿಲ್ಲ ಪ್ರಾಣಿಗಳೇ ಇಲ್ಲ ಅಂದರೆ ಹಲಗಲಿಯ ಬೇಡರು ಅಲ್ಲಿ ಎಂತಹ ಬೇಟಿ ಆಡಿ ತಮ್ಮ ಬದುಕನ್ನು ನಿಭಾಯಿಸುತ್ತಿದ್ದರು ಎನ್ನುವುದು ಗಮನಿಸಬೇಕಾಗುತ್ತದೆ. ಆದರೆ ಅನಾಗರಿಕ ಮತ್ತು ಮುಗ್ಧ ಜನವಾಗಿರುವ ಬೇಡರಿಗೆ ಅಂತಹ ಒಂದು ಶಸ್ತ್ರಾಸ್ತ್ರ ನಿಷೇಧ ಕಾಯಿದೆಯ ಅರಿವು ಅವರಿಗೆ ಬಾರದೆ ಇರುವುದರಿಂದ ಇಂತಹ

ಒಂದು ಪ್ರತಿಭಟನೆ ನಡೆದಿರಬಹುದು. ಹಲಗಲಿ ಬೇಡರು ಮೊದಮೊದಲು ವಿನಯದಿಂದ ಈ ಕಾಯಿದೆಯನ್ನು ತಳ್ಳಿ ಹಾಕಿದರು. ಹಾಗೆ ಕೃಷ್ಣರಾವ್ ಹಲವಾರು ಬಾರಿ ಬ್ರಿಟೀಷರು ಮತ್ತು ಹಲಗಲಿ ಬೇಡರ ಮಧ್ಯ ಸಂಧಾನಕ್ಕೆ ಪ್ರಯತ್ನ ಮಾಡಿದ ಆದರೆ ಇದು ಪ್ರಯೋಜನಕ್ಕೆ ಬರಲಿಲ್ಲ ಜೀವವೆ ಕೊಡತೀವಿ ಹೊರತು ನಮ್ಮ ಶಸ್ತ್ರಾಸ್ತ್ರಗಳನ್ನು ಕೊಡುವುದಿಲ್ಲ ಎಂದು ಕಡಾಕಂಡಿವಾಗಿ ಹೇಳಿಬಿಟ್ಟರು ಹಲಗಲಿಯ ಬೇಡರನ್ನು ದೇಶ ಪ್ರೇಮಿಗಳು ಎಂದು ನಮ್ಮ ಚರಿತ್ರೆಯಲ್ಲಿ ಮತ್ತೆ ಕೆಲವು ವಿದ್ವಾಂಸರು ಹೇಳುತ್ತಾರೆ ಬೇಡರು ಸ್ಥಳೀಯ ಅನಾಗರಿಕರು ಅವರು ದೇಶ ದೇಶಾಭಿಮಾನ ರಾಷ್ಟ್ರೀಯತೆ ಎನ್ನುವ ಪರಿಕಲ್ಪನೆಯಿಂದ ಅವರು ತುಂಬ ಅಂತರದಲ್ಲಿರುವುದರಿಂದ ಅವರಿಗೆ ಇಂತಹ ಪದಗಳು ಅಪರಿಚಿತವಾಗಿದ್ದವು ಎನ್ನುವುದು ನನ್ನ ಅಭಿಪ್ರಾಯವಾಗಿರುತ್ತದೆ. ಇದರ ಹೊರತು ತಮ್ಮ ಕೈಯಲ್ಲಿ ಇರುವ ವಸ್ತುಗಳನ್ನು ಯಾರು ಕೊಡಲು ಅದು ಸುಮ್ಮನೆ ಕೊಡಲು ಒಪ್ಪುವುದಿಲ್ಲ ಹಾಗೆ ಬೇಡರ ಸ್ವಂತ ಸಂಪ್ರದಾಯಕವಾದ ಅಸ್ತ್ರಗಳು ಇವು ಆಗಿರುವುದರಿಂದ ಅವರು ಬ್ರಿಟೀಷರಿಗೆ ಅವುಗಳನ್ನು ಕೊಡಲು ನಿರಾಕರಿಸಿರಬಹುದು ಎಂದು ಅನಿಸುತ್ತದೆ ಅದಕ್ಕಾಗಿನೇ ಲಾವಣಿಕಾರ ತನ್ನ ಲಾವಣಿಯಲ್ಲಿ "ಮಗ್ಗಲದಾಗಿನ ಹೇಣತಿ ಕೊಟ್ಟಹಂಗ ಹೇಡಿ ಆದೇವ ಅಲ್ಲಾ! ಸತ್ತ ಹೆಣಾಕಿ ಶೃಂಗಾರ ಮಾಡಿದ ಪರಿ ಅದೀತಲ್ಲಾ"[೨೬] ಎಂದು ಅವರು ತಮ್ಮ ವಸ್ತುಗಳ ಬಗ್ಗೆ ಇರುವ ಒಂದು ಅವರ ಭಾವನೆಯನ್ನು ಇಂತಹ ಲಾವಣಿಯಲ್ಲಿ ಲಾವಾಣಿಗಳ ಮೂಲಕ ತಿಳಿಯುತ್ತದೆ ಅದಕ್ಕಾಗಿನೆ ಅವರು "ಹತ್ಯಾರ ಕೊಡಲಾಕ ಹೆಂಗಸಾಗಿ ಬಳಿ ಇಟ್ಟಿಲ್ಲ ಕೈಯಾಗ ಯಾಕ ಬಂದಿರೀ ಜೀವ ಹೋದರು ಕೊಡುವುದಿಲ್ಲ ಸುಮ್ಮನೆ ಹೋಗಿರಿ ಈಗ"[೨೮] ಎಂದು ಅವರು ಹೇಳಿರಬಹುದು ಇದರಿಂದಲ ಅವರು ತಮ್ಮ ವಸ್ತುಗಳನ್ನು ಇನ್ನೊಬ್ಬರಿಗೆ ಅದು ಪರಕೀಯರಾದ ಬ್ರಿಟೀಷರಿಗೆ ಅವುಗಳನ್ನು ಕೊಡಲು ಅವರು ನಿರಾಕರಿಸಿರಬಹುದು.

"ಎಲ್ಲೆಲ್ಲಿ ಸಾಹಸ ಕಾರ್ಯಗಳು ಜರುಗುತ್ತಿದ್ದವೋ ಅಲ್ಲೆಲ್ಲಾ ನೆರವು ನೀಡುತ್ತಾ ಎಲ್ಲರೊಂದಿಗೂ ಬೆಲ್ಲದಂತಿದ್ದ ಹಲಗಲಿಯ ಮುಗ್ಧ ಬೇಡರ ಮನೋಭಾವನೆಯನ್ನು ಆತ್ಮಾಭಿಮಾನವನ್ನು"[೨೯] ವಸಹಾತುಶಾಹಿಗಳು ತಪ್ಪಾಗಿ ಅರ್ಥೈಸಿಕೊಂಡಿರಬಹುದು ಇಲ್ಲವೆ ಸುರು ಗಟ್ಟಿಮುಟ್ಟಾದ ಈ ಬೇಡರಿಗೆ ಬ್ರಿಟೀಷರು ಹೆದರಿಕೊಂಡು ಶಸ್ತ್ರಾಸ್ತ್ರಗಳು ಅವರಲಿದ್ದರೆ. ಅವರು ತಮಗೆ ಅಪಾಯ ಮಾಡಬಹುದು ಎನ್ನುವ ಅಂಜಿಕೆಯಿಂದ ಹೇಗಾದರೂ ಮಾಡಿ ಬೇಡರಿಂದ ಆ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಳ್ಳಬೇಕು ಎಂದು ಅವರು ಪಣತೊಟ್ಟಿದ್ದಾರೆ ಇಲ್ಲವೆ "ಬೇಡರ ಮನೋಭಾವನೆಯನ್ನು ಸರಕಾರಕ್ಕೆ ಸರಿಯಾದ ರೀತಿಯಲ್ಲಿ ಮಧ್ಯವರ್ತಿಗಳು ವಿವರಿಸಿಲ್ಲ ಎಂದು ಅನಿಸುತ್ತದೆ. ಅದಕ್ಕಾಗಿದನೆ ೧೮೫೭ ನವೆಂಬರ್ ೨೯ರಂದು ಬ್ರಿಟೀಷರು ೬೦೦ ಅಶ್ವದಳ ಸೈನಿಕರೊಂದಿಗೆ ಮಧ್ಯರಾತ್ರಿಯಲ್ಲಿ ಹಲಗಲಿ ಬೇಡರ ಮೇಲೆ ಆಕ್ರಮಣವನ್ನು ಮಾಡಿದರು. ಈ ಆಕ್ರಮಣಕ್ಕೆ ಹಲಗಲಿಯ ಬೇಡರು ಭಯಪಡಲಿಲ್ಲ ಆಂಗ್ಲರ ಮೇಲೆ ಈ ಬೇಡರು ಪ್ರತಿಭಟನೆಯನ್ನು ಮಾಡಿದರು. ಬೇಡರು ಬ್ರಿಟೀಷರ ಮೇಲೆ ಭರ್ಜಿ ಎಸೆದರು. ಕವಣೆಗಲ್ಲು ತೂರಿದರು. ಕುದುರೆಗಳ ಕಾಲು

ಕಡಿದರು. ಇದರಿಂದ ಬ್ರಿಟೀಷರಿಗೂ ಮತ್ತೆ ಹಲಗಲಿ ಬೇಡರಿಗೂ ಹಲವಾರು ತರನಾದ ಅಪಾಯಗಳಾದವು ಅವು ಸಾವು ನೋವುಗಳು ಸಂಭವಿಸಿದವು. ಆದರೂ ಬೇಡರು ಇದಕ್ಕೆ ಸೋಲಲಿಲ್ಲ. ಆಧುನಿಕ ಶಸ್ತ್ರಾಸ್ತ್ರ ಅಪರಿಮಿತ ಬಲ ತಮ್ಮ ಮೇಲೆ ಬಂದೆರಗುತ್ತಿದ್ದರೂ ಹೆದರದೆ ಪ್ರತಿದಾಳಿ ಮಾಡಿದರು, ಈ ದಾಳಿಯಲ್ಲಿ ಫಸ್ಟ್ ಅಸಿಸ್ಟೆಂಟ್ "ಮ್ಯಾಜಿಸ್ಟ್ರೇಟ್ ವಿಲಿಯಂ ಹೆನ್ರಿ ಹರಲಾಕ್" ಗುಂಡೇಟಿನಿಂದ ಮರಣ ಹೊಂದಿದ ಈ ದಾಳಿಗಳಿಂಲೂ ಯಾರು ಹಿಂದೆ ಸರಿಯಲಿಲ್ಲ. ಈ ಸಮರದಲ್ಲಿ ಅಸಂಖ್ಯಾತ ಸಾವು ನೋವು ಸಂಭವಿಸಿದವು. ಎಲ್ಲಿ ನೋಡಿದರೆ ಹೆಣಗಳ ರಾಶಿಯೇ ಕಾಣತೊಡಗಿತು. ಸಮರದಲ್ಲಿ ರಕ್ತ ಮಡುಗಟ್ಟಿ ಹರಿಯ ತೊಡಗಿತು, ಪೂಜಾರಿ ಹನುಮಪ್ಪ ಜಡಗಾ, ಬಾತಾ, ರಾಮ, ಭೀಮ, ಬೇಡರ ಪಡೆಯ ಮುಂದೆ ಇದ್ದು ಎಲ್ಲರಿಗೂ ಧೈರ್ಯ ಹೇಳುತ್ತಾ ಇನ್ನುಳಿದವರನ್ನು ಹುರಿದುಂಬಿಸುತ್ತಿದ್ದರು. ಆದರೆ ಈ ಪ್ರತಿಭಟನೆಯಲ್ಲಿ ಯಾರಿಗೂ ಗೆಲವು ಸಿಗಲಿಲ್ಲ. ಮತ್ತೆ ಸೋಲು ಸಿಗಲಿಲ್ಲ. ಇದಕ್ಕಿಂತ ಹೆಚ್ಚಾಗಿ ಸಾವು ನೋವುಗಳೇ ಹೆಚ್ಚಾಗಿ ಕಂಡು ಬಂದವು. ರಾಜಕೀಯ ಕುತಂತ್ರಕ್ಕೆ ಹೆಸರುವಾಸಿಯಾದ ಬ್ರಿಟೀಷರು ಇಷ್ಟಕ್ಕೆ ಸುಮ್ಮನಾಗದೆ ನಡುರಾತ್ರಿಯಲ್ಲಿ ಹಲಗಲಿ ಊರಿಗೆ ಕೊಳ್ಳಿ ಇಟ್ಟರು, ಸಗಣಿ ಎರಚಿದರು. ಹಲಗಲಿ ಬೆಂಕಿಯಿಂದ ಹೊತ್ತಿ ಉರಿಯತೊಡಗಿತು ಇದನ್ನು ವಿರೋಧಿಸಿದ ಸ್ಥಳೀಯರಿಗೆ ಕ್ರೂರಿ ಆಂಗ್ಲರು ಗುಂಡಿಕ್ಕಿ ಕೊಂದರು, ಬ್ರಿಟೀಷರ ಬರುವಿಕೆಯ ದಾರಿ ಕಾಯುತ್ತಾ ಹತ್ತಿ ಕಟ್ಟಿಗೆಯಲ್ಲಿ ಬಚ್ಚಿಟ್ಟುಕೊಂಡ ಇಪ್ಪತ್ಮೂರು ಜನರನ್ನು ಆಂಗ್ಲರು ಆ ಕಟ್ಟಿಗೆಗಳಿಗೆ ಬೆಂಕಿ ಹಚ್ಚಿದ್ದರು. ಆ ಇಪ್ಪತ್ಮೂರು ಜನ ಸುಟ್ಟು ಕರಕಲಾದರು. ಇಡೀ ಊರನ್ನು ಲೂಟಿ ಮಾಡಿದರು. ವಸ್ತು ಒಡವೆಗಳನ್ನು ಅಷ್ಟೇ ಅಲ್ಲ ತಿನ್ನುವ ದಿನಸುಗಳನ್ನು ತೆಗೆದುಕೊಂಡು ಹೋಗಿದ್ದರು ಅದಕ್ಕಾಗಿನೆ ಲಾವಣಿಕಾರ.

"ಕತ್ತಿ ಕುದರಿ ಮುತ್ತು ಮಾಣಿಕ್ಯ ಯಾವುದು ಬಿಡಲಿಲ್ಲ/ಬೆಳ್ಳಿ ಬಂಗಾರ ಹರಳಿನ ಉಂಗುರ ಹೊನ್ನ ಉಂಗುರ ಗೋಲಾ, ಕುಬಸು, ಸೇರಿ ಹಪ್ಪಳ ಸೆಂಡಿಗೆ, ಕುರ್ಚಗಿ ಕುಡಗೋಲಾ/ ಕೊಡಲಿ ಕುಂಟಿ ಕುಡ ಕಬ್ಬಿಣ ಮಸರು ಬೆಣ್ಣೆ ಹಾಲಾ"[೨೦] ಎಲ್ಲಾನು ಆಂಗ್ಲರು ಲೂಟಿ ಮಾಡಿದರು ಎಂದು ಹೇಳುತ್ತಾನೆ.

ಈ ಪ್ರತಿಭಟನೆಯಲ್ಲಿ ಮುನ್ನೂರಕ್ಕೂ ಹೆಚ್ಚಿನ ಜನರನ್ನು ಬಂದಿಸಲಾಯಿತು. ೧೮೫೭ನೇ ಡಿಸೆಂಬರ್ ೧೧ ರಂದು ಮುಧೋಳದ ಸಂತೆ ಸೇರುವ ಸ್ಥಳದಲ್ಲಿ ೧೯ ಜನರನ್ನು ಡಿಸೆಂಬರ್ ೧೪ರಂದು ಹಲಗಲಿಯಲ್ಲಿ ೧೩ ಜನರನ್ನು ಬ್ರಿಟೀಷರು ಗಲ್ಲಿಗೇರಿಸಿದರು.

ಹೀಗೆ ಹಲಗಲಿಯ ಬೇಡರು ಯಾವ ಅರಸೊತ್ತಿಗೆಯ, ಸಂಸ್ಥಾನಿಕರ ನೆರವು ಇಲ್ಲದೆ ಕೇವಲ ತಮ್ಮ ಆತ್ಮ ಗೌರವಕ್ಕೆ ಸ್ವಾಭಿಮಾನಕ್ಕೆ ಕೈ ಹಚ್ಚಿದ ಆಂಗ್ಲರ ವಿರುದ್ಧ ಸಮರ ಸಾರಿದರು. ಹೀಗೆ ಹಲಗಲಿ ಬೇಡರು ಯಾವ ತಪ್ಪು ಮಾಡದೆ ಬ್ರಿಟೀಷರ ಒಂದು ರಾಜಕೀಯ ಕುತಂತ್ರದಿಂದ ಮಣ್ಣಿನಲ್ಲಿ ಮಣ್ಣಾಗಿ ಹೋಗಿರುವುದನ್ನು ನಾನು ಬಂಡಾಯದಲ್ಲಿ ನೋಡುತ್ತೇವೆ.

**ಲಾವಣಿ ಮುಖೇನ ನಿಶ್ಯಸ್ತ್ರೀಕರಣ ಕಾಯಿದೆ ಹಾಗೂ ಸ್ಥಳೀಯ ಪ್ರತಿರೋಧ**

ಲಾವಣಿ ಸಾಹಿತ್ಯ ಜನಸಾಮಾನ್ಯರ ಮಧ್ಯದಲ್ಲಿ ಜನಿಸಿ ಬಡತನ ಮತ್ತು ತಳಸಮುದಾಯದ ನೋವು ನಲಿವುಗಳ ಸಂವೇದನೆಗೆ ಒಳಗಾದವರಿಂದ ರಚನೆಯಾಗಿದ್ದರಿಂದ ಲಾವಣಿ ಸಾಹಿತ್ಯ ವಸಹಾತುಶಾಹಿಗೆ ವಿರುದ್ಧವಾದ ಸ್ಥಳೀಯ ಪ್ರತಿರೋಧಗಳನ್ನು ಸ್ಪಷ್ಟವಾದ ನೆಲೆಯಲ್ಲಿ ಅಧ್ಯಯನಕ್ಕೆ ಒದಗುತ್ತವೆ ಎನ್ನುವುದು ಇಲ್ಲಿ ತನಕ ಚರಿತ್ರೆ ಎನ್ನುವುದು ಕೇವಲ ಏಕಮುಖವಾಗಿ ಅಂದರೆ ಪ್ರಭುತ್ವದ ಕೇಂದ್ರವಾಗಿ ರಚನೆ ಮಾಡಲಾಗಿದೆ. ಅಲ್ಲಿ ಸಾಮ್ರಾಜ್ಯದ ಅಧ್ಯಯನವಾಗಲಿ ಸ್ಥಳೀಯ ಹೋರಾಟಗಳ ಅಧ್ಯಯನ ಅಲ್ಲಿ ಇಲ್ಲದೆ ಇರುವುದು ಕಂಡುಬರುತ್ತದೆ ಹಾಗಾಗಿ "ಲಿಖಿತ ಅಥವಾ ಆ ಸ್ವರೂಪದ ದಾಖಲೆಗಳ ಮೂಲಕ ಸ್ಥಳೀಯ ಪ್ರಕ್ರಿಯೆ ಹಾಗೂ ಸಂಕಥನಗಳ ಮೂಲಕ ಇಂಥ ಸ್ಥಳೀಯ ಪ್ರತಿಭಟನೆಗಳನ್ನು ಅರ್ಥಮಾಡಿಕೊಳ್ಳಬೇಕಿದೆ" ಚರಿತ್ರೆ ವ್ಯಾಖ್ಯಾನಿಸಿದ ದಾಸ್ಯ ಸ್ಥಿತಿಯನ್ನೇ ಪರಮ ಮೊತ್ತ ಎಂದು ಭಾವಿಸಿಕೊಂಡಿರುವ ಸ್ಥಿತಿ ಈ ಹಿಂದೆ ನಡೆದಿದೆ. ಚರಿತ್ರೆಯನ್ನು ವಿದ್ವಾಂಸರು ತಮ್ಮ ದೃಷ್ಟಿಕೋನದಿಂದ ಬದುಕಿನ ಒಳಗಡೆಯಿಂದ ಒಮ್ಮೆ ನೋಡಿಕೊಳ್ಳುವ ಅವಶ್ಯಕತೆ ಇದೆ. ಆ ಮೂಲಕ ಹಾನಿಗೊಳಗಾದ ಮತ್ತು ಗೈರು ಹಾಜರಾಗಿರುವ ಅನುಭವ ಪ್ರಪಂಚವನ್ನು ಚರಿತ್ರೆಯ ಒಳಗಡೆ ಸೇರಿಸುವ ಅನಿವಾರ್ಯತೆ ಈಗ ಬಂದಿದುದಾಗಿದೆ ಅದಕ್ಕಾಗಿ ಈ ತೆರನಾಧ ಅಧ್ಯಯನಗಳು.

ಬ್ರಿಟೀಷರ ರಾಜಕೀಯ ಅನೈತಿಕತೆಯ ಪರಿಣಾಮದಿಂದ ಉಂಟಾದ ಶಸ್ತ್ರ ನಿಷೇಧ ಕಾಯ್ದೆಯ ವಿರುದ್ಧವಾಗಿ ಸಂಭವಿಸಿದ ಹಲಗಲಿ ಬಂಡಾಯ ಮುಖ್ಯವಾಗಿ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಯ ಆಯಾಮಗಳನ್ನು ಸೃಷ್ಟಿಸುತ್ತವೆ. ಹಾಗಾಗಿ ಭಾರತದ ರಾಜಕೀಯ ಸ್ವಾತಂತ್ರದ ಚೌಕಟ್ಟಿನೊಳಗಷ್ಟೇ ಇಟ್ಟು ನೋಡಿದರೆ ಆ ಪ್ರತಿರೋಧಗಳಿಗಿದ್ದ ಸ್ಥಳೀಯ ತುರ್ತು ಮರೆಮಾಚುತ್ತದೆ. ನಿಶ್ಯಸ್ತ್ರೀಕರಣ ಎನ್ನುವ ರಾಜಕೀಯ ಕುತಂತ್ರದ ಕಾಯಿದೆಯ ಶ್ರಮಿಕ ವರ್ಗಗಳ ಶೋಷಣೆಯ ಪ್ರತೀಕವಾಗಿ ಕಂಡುಬರುತ್ತದೆ. ಬ್ರಿಟೀಷರ ರಾಜಕೀಯ ನೀತಿ ನಿಯಮಗಳ ಗಂದುಗಾಳಿ ಗೊತ್ತಿಲ್ಲದೆ ಇರುವ ದುಡಿವ ವರ್ಗಗಳಿಗೆ ಈ ಕಾಯಿದೆ ದೊಡ್ಡ ಆತಂಕವನ್ನೇ ತಂದೊದಗಿಸುತ್ತದೆ.

ಹಲಗಲಿ ದಕ್ಷಿಣ ಮರಾಠ ನಾಡಿನ ಮುಧೋಳ ಸಂಸ್ತಾನಕ್ಕೆ ಸೇರಿದ ಪುಟ್ಟ ಹಳ್ಳಿಯಾಗಿತ್ತು ೧೮೫೭ರ ಪ್ರತಿಭಟನೆಯ ಪರಿಣಾಮವಾಗಿ ಬ್ರಿಟೀಷ ಜಿಲ್ಲೆಗಳಲ್ಲಿ ಹಾಗೂ ಅವರ ರಾಜಕೀಯದಲ್ಲಿ ಭಾಗಿಯಾದ ಭಾರತೀಯ ಸ್ವದೇಶಿ ಸಂಸ್ಥಾನಗಳಲ್ಲಿ ಈ ಕಾಯಿದೆ ಆಗಲೇ ಸ್ಥಳೀಯರ ಮೇಲೆ ಪರಿಣಾಮ ಬೀರಿತ್ತು. ಸಂಸ್ಥಾನಗಳು ಮತ್ತೆ ಬುದ್ಧಿವಂತರು ಈ ಕಾಯಿದೆ ಕುರಿತು ಯಾವುದೇ ತೆರನಾದ ಪ್ರತಿರೋಧಗಳನ್ನುಂಟು ಮಾಡಲಿಲ್ಲ. ಅದರೆ ಭಾರತೀಯ ಸಂಸ್ಥಾನಗಳಿಗೆ ಬದ್ಧರಾಗಿದ್ದು ಸ್ಥಳೀಯ ವರ್ಗಗಳು ಅಪರಿಚಿತವಾದ ಇಂಥ ರಾಜಕೀಯ ಹುನ್ನಾರದ ಕಾಯಿದೆಗಳಿಂದ ಕಂಗಾಲಾಗಿದ್ದರು. ದುಡಿವ ಜನರನ್ನು ಮತ್ತು ಅವರ ಬದುಕನ್ನು ಅಭಿವೃದ್ಧಿಪಡಿಸುವ ಆಡಳಿತ

ವ್ಯವಸ್ಥೆ ಬ್ರಿಟೀಷರ ಆಡಳಿತದಲ್ಲಿ ಎಲ್ಲಿಯು ಕಾಣಲಿಲ್ಲ. ಕೇವಲ ಸ್ಥಳೀಯ ಸಂಸ್ಥಾನಿಕರು ಬ್ರಿಟೀಷರ ಜೊತೆ ಕೈ ಜೋಡಿಸಿ ಭಾರತೀಯ ಸ್ಥಳೀಯ ಕೆಳವರ್ಗದ ಜನರನ್ನು ನಿರಾಶ್ರಿತರನ್ನಾಗಿ ಮಾಡುವ ನಿಟ್ಟಿನಲ್ಲಿದ್ದರು, ಆದರೆ ಪ್ರತಿಫಲನೆ ನಿಶ್ಯಸ್ತ್ರೀಕರಣ ಕಾಯಿದೆ ಎಂದು ಹೇಳಬಹುದು. ದುಡಿಯುವ ವರ್ಗಗಳ ಹಸಿವು ಮತ್ತು ಹಂಬಲದ ದೋತಕವಾಗಿ ಇಂತಹ ಪ್ರತಿರೋಧಿಗಳು ಅವತ್ತಿನ ಸಂದರ್ಭದಲ್ಲಿ ನಡೆದು ಹೋದವು. ನಿಶ್ಯಸ್ತ್ರೀಕರಣ ಕಾಯಿದೆಯು ಸ್ಥಳೀಯ ಹಲವು ಸಮುದಾಯಗಳ ಅಸ್ತಿತ್ವವನ್ನೇ ಅಡಗಿಸಲು ಪ್ರಯತ್ನ ಮಾಡಿರುವುದು ಗೊತ್ತಾಗುತ್ತದೆ. "ಹೀಗಾಗಿ ಕಂಪನಿ ಸರಕಾರದ ವಿರುದ್ಧ ದಂಗೆಯೆದ್ದರು ಶ್ರೀಮಂತ ವರ್ಗಗಳು ಅಲ್ಲಿ ದೇಶಗತಿಗಳು ಅಲ್ಲಿ ಬದಲಾಗಿ ದಿನನಿತ್ಯ ದುಡಿದು ತಿನ್ನುವ ಶ್ರಮಿಕ ವರ್ಗಗಳು ಎಂಬುದು ಇಲ್ಲಿನ ವಿಶೇಷ ನಿಶ್ಯಸ್ತ್ರೀಕರಣ ಕಾಯಿದೆಯ ಪರಿಣಾಮದಿಂದ ವಸಹಾತುಶಾಹಿಗಳ ವಿರುದ್ಧ ಪ್ರತಿಭಟಿಸಿದ ಹಲಗಲಿ ಬೇಡರ ಪ್ರತಿಭಟನೆಯಾದರೂ ಎಂತದು ಎನ್ನುವುದನ್ನು ಲಾವಣಿಯೊಂದರಲ್ಲಿ ಹೇಳುವಂತೆ.

"ಹಲಗಲಿ ಅಂಬುವ ಹಳ್ಳಿ ಮುಧೋಳರಾಜ್ಯದಾಗ ಇತ್ತು"
ಪುಜೇರಿ ಹಣಮ ಬಾಲ ಜಡಗ ರಾಮ ಮಾಢ್ಯರ ಮಸಲತ್ತು
ಕೊನ ಹತಾರ ಕೊಡಬಾರದೊ ನಾವು ನಾಲ್ಕು ಮಂದಿ ಜತ್ತು
ಹತಾರ ಹೋದೆ ಇಂದ ಬಾರದ ನಮ್ಮ ಜೀವ ಸತ್ ಓಗುದಾಗುತ್ತ
ಸುತ್ತಿನ ಹಳ್ಳಿ ಮತ್ತ ಧೋರಿಗಳಿಗೆ ತಿಳಿದರೆ ಹೀಂಗ್ ಅಂತು
ಮಾಡರಿ ಜಗಳಾ ಕೂಡ ಇರತೇವು ಕುಮುಕಿ ಯಾವತ್ತು
ವೊಳಗಿಂದ್ ಒಳಗ ವಚನ ಕೊಟ್ಟರೊ ಬ್ಯಾಡರ್‌ವಲ್ಲಿ ಕುರಿತು
ಕಾರಕೂನನ ಕಪಾಳಕ ಬಡಿದರೆ ಶಿಪಾಯ ನೆಲಕ ಬಿತ್ತು

ಹಲಗಲಿ ಬಂಡಾಯದ ಪ್ರಮುಖ ಪಾತ್ರಧಾರಿಗಳಾದ ಬಾಲ, ಜಡಗ ಹಾಗೂ ರಾಮ ಇವರು ಶಸ್ತ್ರಾಸ್ತ್ರ ನಿಷೇಧ ಕಾಯಿದೆಯನ್ನು ಎದುರಿಸಲು ಸಜ್ಜುಗೊಂಡ ಪರಿಯಿದು ಈ ಒಂದು ಸಂದರ್ಭ ಕೆಳ ಸಮುದಾಯದ ಅಂತರ ಶಕ್ತಿ ಮತ್ತು ಅವರ ತಲ್ಲಣಗಳಿಗೆ ಪ್ರಮುಖ ಸಾಕ್ಷಿಯಾಗಿರುವುದು ಕೆಳವರ್ಗದ ದುಡಿಯುವ ಶ್ರಮಿಕ ವರ್ಗದ ಅಸ್ತಿತ್ವವನ್ನು ಈ ದಂಗೆ ಅಡಗಿಸುತ್ತದೆ. ಸ್ಥಳೀಯ ಯಜಮಾನಿಕೆ ಮತ್ತು ವಸಹಾತುಶಾಹಿಗಳು ಇವರ ಆತ್ಮಸ್ಥೈರ್ಯವನ್ನೆ ಅಡಗಿಸಲು ಪ್ರಯತ್ನಿಸಿದ ಪ್ರಭುತ್ವದ ಒಂದು ಹುನ್ನರ ಎಂದು ಅನಿಸುತ್ತದೆ. ಅದಕ್ಕಾಗಿ ಅಂತಹ ಒಂದು ರಾಜಕೀಯ ಹುನ್ನಾರದ ವಿರುದ್ಧ ನಡೆದ ಒಂದು ಸಂದರ್ಭ ಭಾರತದ ಅವತ್ತಿನ ಸಂದರ್ಭದ ಒಂದು ಪರಿಕಲ್ಪನೆ ಗೊತ್ತಿರದ ಒಂದು ಮುಗ್ಧ ಜನ ಅವರಿಗೆ ಯಾವುದೇ ರಾಷ್ಟ್ರೀಯತೆ ಸ್ವಾತಂತ್ರತೆ ಪರಕೀಯತೆಯ ಕಲ್ಪನೆ ಇರದ ಅವರು ಈ ತೆರನಾಗಿ ಬ್ರಿಟೀಷರ ವಿರುದ್ಧ ಸಿಡಿದೇಳಲು ಕಾರಣ ಬ್ರಿಟೀಷರ ಒಂದು ರಾಜಕೀಯ ಕುತಂತ್ರದ ಪರಿಣಾಮವಾಗಿ ಒಂದು ಶಸ್ತ್ರಾಸ್ತ್ರ ನಿಷೇಧ ಕಾಯಿದೆ. ಇದೊಂದು ಕಾಯಿದೆ ಅಂತನು ಕೂಡ ಅವರಿಗೆ ತಿಳಿದಿರಲಿಲ್ಲ. ಅಂತ ಅನಿಸುತ್ತದೆ. ಕೇವಲ ಅವರು ಈ ಕಾಯಿದೆಯ ವಿರುದ್ಧ ಪ್ರತಿಭಟಿಸಿರುವುದು

ತಮ್ಮ ವಸ್ತುಗಳನ್ನು ಸುಮ್ಮನೆ ಇನ್ನೊಬ್ಬರಿಗೆ ಕೊಡಲು ಅವರ ಮನಸ್ಸು ಒಪ್ಪದೆ ಇರುವುದು ಎಂದು ಹೇಳಬಹುದು. ಹೀಗೆ ಅವರ ಸ್ವಾವಲಂಬಿ ಬದುಕಿಗೆ ಈ ಕಾಯಿದೆ ಮಾರಕವಾಗಿರುವುದರಿಂದ ಇವರು ಬ್ರಿಟೀಷರನ್ನು ವಿರೋಧಿಸಲು ಸಜ್ಜಾಗಿದ್ದು.

ಬೇಡರ ಪ್ರತಿಭಟನೆ ಇಷ್ಟಕ್ಕೆ ನಿಲ್ಲದೆ ಬ್ರಿಟೀಷರ ಸೊಕ್ಕು ಮುರಿದು ಅವರ ಮೋಸದಿಂದ ಮಾಡುವ ಆಡಳಿತಕ್ಕೆ ಮುಕ್ತಿ ಕೊಡಬೇಕು ಎಂದು ಇನ್ನು ಎದೆ ಸೆಟಸಿ ಅವರ ವಿರುದ್ಧ ನಿಂತರು, ತಮ್ಮ ಶಸ್ತ್ರಾಸ್ತ್ರಗಳನ್ನು ಬ್ರಿಟೀಷರಿಗೆ ಕೊಟ್ಟರೆ ತಮ್ಮ ಸ್ಥಿತಿ ಏನಾಗುತ್ತದೆ ಎನ್ನುವ ಅರಿವು ಅವರಿಗೆ ಇತ್ತು ಅದಕ್ಕಾಗಿನೆ ಅವರು ತಾವು ಯಾಕೆ ಕೊಡಬೇಕು ಎಂದು ಪ್ರಶ್ನಿಸಿದ್ದು.

"ಹತಾರ ಕೊಡಲಿಕೆ ಹೆಂಗಸ್ ಆಗಿ ಬಳಿಯ ಇಟ್ಟಿಲ್ಲ ಕೈಯಾಗ
ಯಾವ ಬಂದಾರಿ ಜೀವಹೋದರು ಕೊಡುದಿಲ್ಲ
ಸುಮ್ಮನೆ ಹೋಗರಿ ಈಗ" ಎಂದು ಕೊನೆಯ

ತನಕ ಇವರು ತಮ್ಮ ಶಸ್ತ್ರಾಸ್ತ್ರಗಳನ್ನ ಒಪ್ಪಿಸಲು ನಿರಾಕರಿಸಿದರು ಇದನ್ನು ಅರಿತ ಸ್ಥಳೀಯ ಸಂಸ್ಥಾನಿಕರು ಮಧ್ಯಸ್ತಿಕೆ ವಹಿಸಿ ಸಂಧಾನ ಮಾಡಲು ಯತ್ನಿಸಿದರು. ಇವರು ಒಪ್ಪಲಿಲ್ಲ. ಸ್ಥಳೀಯ ಮುಧೋಳ ಸಂಸ್ಥಾನಿಕನ ರಾಜಕೀಯ ಕುತಂತ್ರನು ಕೂಡಾ ಈ ಮುಗ್ಧ ಬೇಡರಿಗೆ ತಿಳಿಯಲಿಲ್ಲ. ಅವರಿಗೂ ಬಿಟ್ಟು ಇರುವುದೆ ತಮ್ಮ ವಸ್ತುಗಳನ್ನು ಯಾಕೆ ಕೊಡಬೇಕು ಎನ್ನುವಂತ ಸ್ವಾಭಿಮಾನ ಅಷ್ಟೇ

ಇಷ್ಟಕ್ಕೂ ಈ ಬೇಡರು ವಸಹಾತುಶಾಹಿಗಳಿಗೆ ಪ್ರತಿಕ್ರಿಯಿಸಿದರು. ಅವರ ಮೋಸದ ಕುತಂತ್ರಕ್ಕೆ ಇವರು ಪ್ರತಿಕ್ರಿಯಿಸಿದ ಆಕ್ರೋಶ ಎಂತದು ಎಂಬುದನ್ನು ಲಾವಣಿಯೆಂದಲೆ ನೋಡಬಹುದು.

"ಜಡಗ ಹೇಳತನ ಹೋಡಿ ಇವರನಾ ಈಗ ಘಾತಕರೊಯವರ
ಇಸವಸ ಘಾತಾ ಮಾಡಿನೆಂಬಗಿಲೆ ಮಾಡತಾರಂ ಪಿತುರಾ
ಮೊಸ ಮಾಡಿ ಬಲ ದೇಶ ತಗೋತರ ಮುಂದ ನಮಗ
ಗೋರಾ ಅಂದ ಹೊಡದಾರೊವೊಂದು ಗುಂಡಿಗೆ ಆದ
ಸಾಹೇಬ ಬಾರಾ ಕಾರ್, ಸಾಹೇಬ ಬೆಂಕಿ-ಚೂರ ಆಗಿ
ತಾನು ಲೂಟಿ ಮಾಡ್ ಅಂದ ವೊರ
ಹುರಪಿಲಿ ಹೊಡೆದರ ಮಳಿ ಆದ ಹಾಂಗ ಗುಂಡ ಸುರದವು ಬರಪೂರ
ಹಣಮ ಹೇಳತನ ಗುಂಡ ಹೊಡದಕ್ಕೆ ಕೆಡವುನ ಅಷ್ಟು ಬಾರಾ
ಮುನ ನೂರ ಸಮಂದಿಯನ್ನ ಮೇಗೆ ಬಿಟ್ಟಿ ಆಗ ನೋಡರಿ ಜೋರಾ

ಹೀಗೆ ಈ ಬೇಡರ ಪ್ರತಿಭಟನೆ ಎಷ್ಟೊಂದು ತೀವ್ರವಾಗಿತ್ತು ಎನ್ನುವುದು ಜಡಗ ಮತ್ತು ಹಣಮನು ಹೇಳಿರುವ ಮಾತಿನಿಂದ ತಿಳಿಯುತ್ತದೆ. ಜಡಗ ಹೇಳುವುದು ಏನೆಂದರೆ ಬ್ರಿಟೀಷರು

ಘಾತಕರೋ ಅವರು ಇಸ್ವಾಸ ಮಾಡಿ ಮೋಸ ಮಾಡಿ ನಂಬಿಕೆಗೆ ದ್ರೋಹ ಮಾಡುವರು ಎಂದು ಹೇಳುತ್ತಾನೆ. ಅಂದರೆ ಬ್ರಿಟೀಷರ ಒಂದು ಮೊಸತನದ ಆಡಳಿತ ವ್ಯವಸ್ಥೆ ಇವರಿಗೆ ತಿಳಿದಿತ್ತು ಎನಿಸುತ್ತದೆ ಹಾಗೆ ನೆಮ್ಮ ಹಣಮ ಹೇಳುವುದು ಏನೆಂದರೆ ಗುಂಡ ಹೊಡೆದು ಎಲ್ಲಾ ೩೦೦ ದಂಡಿನ ಸೈನ್ಯವನ್ನು ನೆಲಕ್ಕೆ ಕೆಡುಯೋಣ ಎಂದು ಹೇಳುತ್ತೇನೆ ಇದರಿಂದ ಅವರ ಪ್ರತಿಭಟನೆಯ ಸ್ವರೂಪ ಎಂತದಿತ್ತು ಎಂದು ತಿಳಿಯುತ್ತದೆ.

ಹಾಗೆ ಮುನ್ನೂರ ಜನ ಬ್ರಿಟೀಷ ಸೈನಿಕರನ್ನು ಇವರು ಹೇಗೆ ಅವೇಶ ಅಬ್ಬರವನ್ನು ಇವರು ಹೇಗೆ ಎದುರಿಸಿದರು ಎನ್ನುವುದನ್ನು ಲಾವಣಿನೆ ಹೇಳುವ ಹಾಗೆ

ಭೀಮನು ಇದುರಿಗೆ ನಿಂತಾ
ಐ–ನೂರ ಮಂದಿಗೆ ಮಲಲಾ
ಬಾಲನು ಮಾಡಿದ ಕಸರತ್ತು
ಕುದುರಿಯ ಕಡದನೂ ಹತ್ತಾ
ರಾಮನ ಕಡತ ವಿಪರೀತಾ
ಕಾವಲಿ ಹರಿತೊ ರಕ್ತಾ
ಸಾವಿರ ಆಳಿಗೆ ವೊಬ್ಬ ಮಲತಾ
ಕೂಗುತಾನೊ ಕಡಿ ಕಡಿರ್ ಎಂತ

ಹೀಗೆ ಹಲಗಲಿಯ ಬೇಡರು ಇಡಿ ಬ್ರಿಟೀಷ ಸೈನ್ಯವನ್ನು ಎದುರುಗೊಳ್ಳುವ ಪರಿ ತುಂಬಾ ಭಯನಕವಾಗಿರುವುದು. ಭೀಮನು ಐ–ನೂರ ಮಂದಿಸಗೆ ಎದುರು ನಿಂತು ಹೋರಾಡಿದರೆ ಬಾಲ ಬ್ರಿಟೀಷ ಸೈನ್ಯದ ಕುದರಿಗಳನ್ನು ಕತ್ತರಿಸುತ್ತಾ ಹೋಗುತ್ತಾನೆ ರಾಮನ ಒಂದು ಆಕ್ರೋಶದಿಂದ ಬ್ರಿಟೀಷ ಸೈನ್ಯದ ರಕ್ತದ ಕಾಮನ ಹರಿಯುತ್ತಂತೆ ಆದರು ಎಲ್ಲಿಯ ಕಡಿ–ಕಡಿ ಎನ್ನುಂವತ ಶಬ್ದವನ್ನು ಅವರು ಹೇಳುವುದರಿಂದ ಅವರ ಒಂದು ಆಕ್ರೋಶ ಇಲ್ಲಿ ತಿಳಿಯುತ್ತದೆ ಏನು ಅರಿಯದ ಈ ಮುಗ್ಧಾ ಬೇಡರು ಅನ್ಯಾಯವಾಗಿ ಯಾವ ತಪ್ಪು ಮಾಡದೆ ಬ್ರಿಟೀಷರ ಈ ಒಂದು ಗೋಲಿಬಾರ್ ಅನ್ಯಾಯದ ಶೋಷಣೆಗೆ ಒಳಗಾಗಬೇಕಾಯಿತು.

ಇಷ್ಟೊಂದು ತೀವ್ರವಾಗಿ ಬ್ರಿಟೀಷರನ್ನು ಎದುರುಗೊಂಡರು ಈ ಹಲಗಲಿ ಬೇಡರಿಂದ ಆಧುನಿಕ ಶಸ್ತ್ರಾಸ್ತ್ರಗಳನ್ನು ಹೊಂದಿ ತುಂಬಾ ಬೃಹತ್ ಪ್ರಮಾಣದ ಬ್ರಿಟೀಷ ಸೈನ್ಯವನ್ನು ಇವರಿಂದ ಎದುರಿಸುವುದು ಸಾಧ್ಯವಾಗಲಿಲ್ಲ. ಕೋನೆ ಆ ವೇಳೆಯಲ್ಲಿ ಬೇಡರು ಬ್ರಿಟೀಷರ ಶೋಷಣೆಗೆ ಪ್ರಾಣ ಕೊಡುವ ಸಂದರ್ಭ ಬರುತ್ತದೆ ಇದನ್ನು ಲಾವಣಿಯೇ ಗುರುತಿಸುವ ಹಾಗೆ

"ಯಾರು ಕೇಳಲಿಲ್ಲ ಆರು ಗುಂಡ ತಾಕಿ ಹೆಣ ಬಿದ್ದಾನೆಲಕ
ಬೇರಿ–ಆಡುತ ಜನ ಸುತ್ತಗಟ್ಟಿತೊ ಅಂಜಿ–ಕೊಂಡ ಜೀವಕ"

ಯಾರ್ ಯಾರು ಇಲ್ಲಿದ್ ಆದೀತು
ಊರ್ ಎಲ್ಲಾ ಲೂಟಿ ಆಗಿ ಹೋತು

ಹೀಗೆ ಬ್ರಿಟೀಷರು ಹಲಗಲಿಯ ಬೇಡರನ್ನು ಒಬ್ಬರನ್ನು ಬಿಡದೆ ಕೊಂದು ಹಾಕಿದರು. ಎಲ್ಲಿ ಈ ಬೇಡರನ್ನು ಬದುಕಿಸಿದರೆ ಒಂದಲ್ಲ ಒಂದು ದಿನ ಇವರು ತಮಗೆ ಅಪಾಯವನ್ನು ಒಡ್ಡುತ್ತಾರೆ ಎನ್ನುವ ಒಂದು ಭಯ ಆತುರ ಆ ಬ್ರಿಟೀಷರಲ್ಲಿ ಇತ್ತು ಎನಿಸುತ್ತದೆ ಅದರೊಳಗಿನ ಅವರುತಮ್ಮ ಅಸ್ತಿತ್ವವನ್ನು ಭಾರತದಲ್ಲಿ ಉಳಿಸಿಕೊಳ್ಳುವ ಒಂದು ಸ್ವಾರ್ಥ ಆಡಳಿತದಿಂದ ಈ ಮುಗ್ಧ ಜನ ಅವರಿಂದ ಬಲಿಯಾಗಿರುವುದು ಕಂಡುಬರುತ್ತದೆ. ಹೀಗೆ ಹಲಗಲಿಯ ಬೇಡರು ಅನ್ಯಾಯವಾಗಿ ಬಲಿಯಾಗಿರುವುದು. ಇಲ್ಲಿ ಕಂಡುಬರುತ್ತದೆ ಇಷ್ಟಕ್ಕೆ ಅವರ ಪ್ರಾಣ ತೆಗೆದುಕೊಂಡು ಬಿಡಲಿಲ್ಲ ಬ್ರಿಟೀಷರು ಅವರು ತಿನ್ನುವ ವಸ್ತುಗಳನ್ನು ಲೂಟಿ ಮಾಡಿರುವುದನ್ನು ಲಾವಣಿಕಾರ ತನ್ನ ಲಾವಣಿಯಿಂದ ಧ್ವನಿಗೊಳಿಸುತ್ತಾನೆ.

"ಕುಬಸು ಸಿರೆ ಹಪ್ಪಳ ಕಾಂಡಿಗೆ ಕುರ್ಚಿಗೆ ಕುಡಗೊಲಾ
ಕೊಡಲಿ ಕೋತಿ ಕುಡ ಕಬ್ಬಿಣಾ ಮಸರು ಬೆಣ್ಣೆ ಹಾರಾ
ಉಪ್ಪ ಎಣ್ಣೆ ಅರಿಶಿಣ ಜೀರಿಗೆ ಅಕ್ಕಿ ಸಕ್ಕರಿ ಬೆಲ್ಲಾ
ಗಂಗಳ ಚರಗಿ ಮಂಗಳ ಸೂತ್ರ ತಕ್ಕೊಂಡ ಹೋದರ
ಬೀಸುಕಲ್ಲು ಎಲ್ಲಾ ತಗೊಂಡ್ರೆ ಸಿಕಪ್ಪ ಸರ್ಪನಿಂತ
ಊರಿಗೆ ಕೊಳ್ಳಿ ಕೊಟ್ಟು ಬೂದಿ ಮಾಡ್ಯಾರ ಹಲಗಲಿ
ಸುಟ್ಟು ಗುರ್ತ ಎಳ್ಳಷ್ಟು ಸಿಗದಷ್ಟು"

ಹೀಗೆ ಹಲಗಲಿ ಬೇಡರು ಅಲ್ಲಿ ಇಲ್ಲಿ ಒಬ್ಬರು ಬದುಕಿದರುಸಹ ಅವರ ಜೀವನಕ್ಕೆ ಏನು ಆಧಾರ ಇರಬಾರದು ಎನ್ನುವಂತ ಒಂದು ಉದ್ದೇಶದಿಂದ ಬ್ರಿಟೀಷರು ಅವರು ಎಲ್ಲಾ ವಸ್ತುಗಳನ್ನು ಅದರಲ್ಲೂ ತಿನ್ನುವ ಪದಾರ್ಥ ಅಡಿಗೆ ಪಾತ್ರೆಗಳು ಎಲ್ಲವನ್ನು ಲೂಟಿ ಮಾಡುತ್ತಾರೆ.

ಇಷ್ಟೆಲ್ಲ ಆಗಿರುವುದು ಬೇಡರು ಶಸ್ತ್ರಾಸ್ತ್ರಗಳನ್ನು ಬ್ರಿಟೀಷರಿಗೆ ಒಪ್ಪಿಸದೆ ಇರುವುದು ಅವರು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದ ತಮ್ಮ ಶಸ್ತ್ರಾಸ್ತಗಳು ಅಂತ ಶಸ್ತ್ರಾಸ್ತ್ರಗಳಾದರೂ ಯಾವು ಎಂದು ಕೊನೆಯದಾಗಿ ನೋಡೋಣ ಅದು ಲಾವಣಿಕಾರನೆ ಗುರುತಿಸಿರುವ ಹಾಗೆ.

"ಕತ್ತಿ ಕವಾರಿ, ಚೂರಿ, ಚಾಕು, ಗುದ್ಲಿ, ಸುರಾಯಿ
ಚಕ್ರಾ ಬರ್ಜಿ, ಬಿಚ್ಚುಗತ್ತಿ ಬಾಣ ಬಿಲ್ಲಿನವಣ
ಪಟಾಡ ಪಿಸ್ತೂಲ ಕುರಲಿ ತೇಗಾ ಚಾಪ ಗೊಡ್ಡಿ
ಶಾಸ್ತ್ರಾ ತೋಪು ತುಬಾಕಿ ಹೊಡೆವ ಮದ್ದು
ಗುಂಡಾ ಬಿಡಬ್ಯಾಡರಿ ಚೂರಾ"

ಹೀಗೆ ಲಾವಣಿಕಾರನು ಗುರುತಿಸಿರುವ ಈ ಅಸ್ತ್ರಗಳ ವಿವರ ತುಂಬಾ ಕುತೂಹಲಕಾರಿಯಾಗಿದೆ ಇವಲ್ಲಿ ಅವರ ಬದುಕನ್ನು ಸಾಗಿಸಿಕೊಳ್ಳಲು ಬಳಸಿಕೊಳ್ಳುವಂತವುಗಳ ಇವರು ದುಡಿಯುವ ಶ್ರಮಿಕ ವರ್ಗದವರಾಗಿದ್ದರಿಂದ ತಮ್ಮ ದುಡಿಮೆಗೆ ಬೇಕಾದ ಸಾಧನಗಳು ಇವು ಆಗಿದ್ದವು

ಗುರ್ದಿ ಇದು ಮಣ್ಣನು ಹುಳುವ ಸಾಧನ, ಚೂರಿ ಮತ್ತು ಕತ್ತಿ ಇವು ಪ್ರಾಣಿಗಳನ್ನು ಕತ್ತರಿಸಲು ಬಳಸುವ ವಸ್ತುಗಳು, ಹೀಗೆ ಇವರು ದಿನ ನಿತ್ಯ ತಮ್ಮ ದುಡಿಮೆಗೆ ಸಹಾಯಕವಾಗಿ ಬಳಸುವ ಈ ವಸ್ತುಗಳನ್ನು ಅವರು ಕೊಡಲು ನಿರಾಕರಿಸಿರುವುದು ಸಹಜವಾಗಿ ಕಂಡುಬರುತ್ತದೆ.

ಹೀಗೆ ಹಲಗಲಿಯ ಬೇಡರು ಬ್ರಿಟೀಷರ ಆಡಳಿತದ ಪ್ರತಿಬಿಂಬವಾದ ಶಸ್ತ್ರಾಸ್ತ್ರ ನಿಷೇಧ ಕಾಯಿದೆಗೆ ಅನುಗುಣವಾಗಿ ತಮ್ಮಲ್ಲಿದ್ದ ಅಸ್ತ್ರಗಳನ್ನು ಬ್ರಿಟೀಷರಿಗೆ ಒಪ್ಪಿಸಲು ನಿರಾಕರಿಸಿದ ಪರಿಣಾಮವಾಗಿ ಈ ಪ್ರತಿಭಟನೆ ನಡೆದಿರುವುದು ಕಂಡುಬರುತ್ತದೆ.

**೫.೨.೨. ದತ್ತು ಪದ್ಧತಿಯ ನೆಲೆಯ ಪ್ರತಿರೋಧಗಳು**

ಭಾರತದ ರಾಜಕೀಯ ಸ್ವಾತಂತ್ರ್ಯದ ಪೂರ್ವ ಕಾಲಘಟ್ಟದಲ್ಲಿ ಭಾರತದಾದ್ಯಂತ ವಿವಿಧ ರೀತಿಯಲ್ಲಿ ನಡೆದ ಸ್ಥಳೀಯ ಪ್ರತಿಭಟನೆಗಳನ್ನು, ಭಾರತದ ರಾಜಕೀಯ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ಮುಖ್ಯ ಗುರಿಯಿಂದಲೇ ಸಂಭವಿಸಿರುವಂತವು ಭಾರತದಲ್ಲಿ ಬ್ರಿಟೀಷರು ತಮ್ಮ ಇಷ್ಟ ಇಂಡಿಯಾ ಕಂಪನಿಯನ್ನು ಸ್ಥಾಪನೆ ಮಾಡಿ ತಮ್ಮ ಆಡಳಿವನ್ನು ಮುಂದುವರಿಸಿದರು ಹಾಗಾಗಿ ಅವರು ತಮ್ಮ ಅಸ್ತಿತ್ವವನ್ನು ಭಾರತದಲ್ಲಿ ಉಳಿಸಿಕೊಳ್ಳಲು ಹಲವಾರು ರಾಜಕೀಯ ತಂತ್ರಗಳನ್ನು ಬಳಸಿಕೊಂಡರು ಇಂತಹ ರಾಜಕೀಯ ತಂತ್ರಗಳ ಪ್ರತಿಫಲದಿಂದ ಅವರು ಭಾರತದಲ್ಲಿ ಸಹಾಯಕ ಸೈನ್ಯ ಪದ್ಧತಿ ಮತ್ತು ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವಂತ ಹಾಗೂ ಶಸ್ತ್ರಾಸ್ತ್ರ ನಿಷೇಧ ಕಾಯಿದೆ ಮುಂತಾದ ಕಾಯಿದೆಗಳನ್ನು ಜಾರಿಗೆ ತಂದರು ಈ ತರದ ರಾಜಕೀಯ ಮತ್ತು ಆಡಳಿತ ನೀತಿಗಳಿಂದ ಭಾರತೀಯ ಹಲವಾರು ಸಂಸ್ಥಾನಗಳನ್ನು ತಾವು ವಶಪಡಿಸಿಕೊಳ್ಳಬೇಕೆಂಬ ದುರಾಸೆಯಿಂದ ಎಂದು ಹೇಳಬಹುದು. ಇದರಿಂದ ಭಾರತೀಯರು ಅಸಮಾಧಾನಗೊಂಡರು. ಬ್ರಿಟೀಷರ ಆಡಳಿತದ ಬಗ್ಗೆಯೂ ಕೂಡಾ ಜನರಲ್ಲಿ ಅಸಮಾಧಾನವಿತ್ತು. ಹೀಗಾಗಿ ಅವರು ಭಾರತೀಯ ಸ್ಥಳೀಯ ಸಂಸ್ಥಾನಗಳು ಪ್ರಾರಂಭದಿಂದಲೂ ಅವರನ್ನು ಪ್ರತಿಭಟಿಸುತ್ತಾ ಬಂದರು ಹಾಗಾಗಿ ಅವರು ಸ್ಥಳೀಯ ಸಂಸ್ಥಾನಿಕ ಶೌರ್ಯ, ಸಾಮರ್ಥ್ಯವನ್ನು ಗಮನಿಸಿದ ಬ್ರಿಟೀಷರು ಭಾರತದ ಆಯಾ ಸಂಸ್ಥಾನದಲ್ಲಿರುವ ಸಮಸ್ಯೆಗಳನ್ನು ಹಿಡಿದುಕೊಂಡು 'ದತ್ತು ಮಕ್ಕಳಿಗೆ ಹಕ್ಕಿಲ್ಲ' ಎನ್ನುವಂತ ಕಾಯಿದೆಗಳನ್ನು ಜಾರಿಗೆ ತಂದರು ಇದರಿಂದ ಅವರ ಮುಖ್ಯ ಉದ್ದೇಶ ಸಂಪೂರ್ಣವಾಗಿ ಮಾಡಿತು.

ಭಾರತದ ಆಡಳಿತ ಚುಕ್ಕಾಣಿಯನ್ನು ಹಿಡಿಯುವ ಉದ್ದೇಶವಾಗಿತ್ತು. ಅದಕ್ಕಾಗಿನೆ ಅವರು ಇಂತಹ ರಾಜಕೀಯ ನೀತಿಗಳನ್ನು ತಂದಿರುವುದು.

ಹೀಗೆ ಬ್ರಿಟೀಷರು ಭಾರತದಲ್ಲಿ ತಮ್ಮ ರಾಜಕೀಯ ಸ್ಥಾನಮಾನ ಉಳಿಸಿಕೊಳ್ಳಲು, ಅದಕ್ಕನುಗುಣವಾಗಿ ಸ್ಥಳೀಯ ಸಂಸ್ಥಾನಗಳನ್ನು ವಶಪಡಿಸಿಕೊಳ್ಳಲು ಅವರು ಜಾರಿಗೆ ತಂದ ಕಾಯಿದೆಗಳಲ್ಲಿ 'ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವಂತಹ ಕಾಯಿದೆಯು ಕೂಡಾ, ಅದಕ್ಕಾಗಿ ಬ್ರಿಟೀಷರ ಆಡಳಿತ ಅಧಿಕಾರಿಯಾದ 'ಡಾಲ್‌ಹೌಸಿಯು' ಜಾರಿಗೆ ತಂದ 'ದತ್ತುಮಕ್ಕಳಿಗೆ

ಹಕ್ಕಿಲ್ಲ' ಎನ್ನುವಂತಹ ಕಾಯಿದೆ ನೆಲೆಯಿಂದ ಬ್ರಿಟೀಷರ ವಿರುದ್ಧ ನಡೆದ ಸ್ಥಳೀಯ ಪ್ರತಿರೋಧಗಳನ್ನು ಕುರಿತು ಅಧ್ಯಯನ ಮಾಡುವುದು ಈ ಒಂದು ಅಧ್ಯಾಯದ ಮುಖ್ಯ ಉದ್ದೇಶ.

ಹೀಗೆ ಡಾಲ್‌ಹೌಸಿಯು ಜಾರಿಗೆ ತಂದ 'ದತ್ತುಮಕ್ಕಳಿಗೆ ಹಕ್ಕಿಲ್ಲ' ಎನ್ನುವಂತಹ ಕಾಯಿದೆ ವಿರುದ್ಧ ಭಾರತದಲ್ಲಿ ಎರಡು ಸಂಸ್ಥಾನಗಳಲ್ಲಿ ಬ್ರಿಟೀಷರ ವಿರುದ್ಧ ಪ್ರತಿಭಟನೆ ನಡೆದಿರುವುದನ್ನು ನಾನು ನನ್ನ ಅಧ್ಯಯನದಿಂದ ಗುರುತಿಸುತ್ತೇನೆ. ಕರ್ನಾಟಕದಲ್ಲಿ ಎರಡು ಸಂಸ್ಥಾನಗಳಲ್ಲಿ ನಡೆದಿರುವುದನ್ನು ಗಮನಿಸಿ. ಆ ಎರಡು ಸಂಸ್ಥಾನಗಾಳಲ್ಲಿ ದತ್ತುಮಕ್ಕಳಿಗೆ ಹಕ್ಕಿಲ್ಲ ಎನ್ನುವಂತ ಕಾಯಿದೆಯನ್ನು ವಿರೋಧಿಸಿ ಈ ಎರಡು ಸಂಸ್ಥಾನಗಳು ಹೇಗೆ ಬ್ರಿಟೀಷರನ್ನು ಪ್ರತಿಭಟಿಸಿದವು ಎಂದು ನಾನು ಲಾವಣಿಯ ಮೂಲಕ ಅವುಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಿದ್ದೇನೆ.

'ದತ್ತುಮಕ್ಕಳಿಗೆ ಹಕ್ಕಿಲ್ಲ' ಎನ್ನುವ ಕಾಯಿದೆಯ ನೆಲೆಯಿಂದ ನಡೆದ ಪ್ರತಿಭಟನೆಗಳನ್ನು ತಿಳಿಯುವ ಮುಂಚೆ 'ದತ್ತು ಮಕ್ಕಳಿಗೆ ಹಕ್ಕಿಲ್ಲ' ಎನ್ನುವ ಕಾಯಿದೆ ಎಂದರೇನು? ಮತ್ತು ಈ ಕಾಯಿದೆಯಿಂದ ಕರ್ನಾಟಕದಲ್ಲಿ ಬ್ರಿಟೀಷರನ್ನು ಪ್ರತಿಭಟಿಸಿದ ಪ್ರತಿಭಟನಾಕಾರರಾದ ಕಿತ್ತೂರು ಚೆನ್ನಮ್ಮ ಮತ್ತು ನರಗುಂದ ಬಾಬಾಸಾಹೇಬ ಇವರ ಬಗ್ಗೆ ಸಂಕ್ಷಿಪ್ತವಾಗಿ ತಿಳಿದುಕೊಳ್ಳುವ ಅವಶ್ಯಕತೆ ಇದೆ ಎಂದೆನಿಸುತ್ತದೆ.

### "ದತ್ತು ಮಕ್ಕಳಿಗೆ ಹಕ್ಕಿಲ್ಲ" ಎನ್ನುವ ಕಾಯಿದೆ

'ದತ್ತು ಮಕ್ಕಳಿಗೆ ಹಕ್ಕಿಲ್ಲ' ಎನ್ನುವಂತಹ ಕಾಯಿದೆ ಭಾರತದ ಸಂಸ್ಥಾನಗಳಲ್ಲಿ ಆಯಾ ಸಂಸ್ಥಾನಿಕರೆ ಪಿಳಿಗಿಯವರೆ ಮುಂದುವರಿಸಿಕೊಂಡು ಹೋಗಬೇಕು ಒಂದು ಆಯಾ ಸಂಸ್ಥಾನದಲ್ಲಿ ಅರಸರಿಗೆ ಮಕ್ಕಳು ಇಲ್ಲದೆ ಇದ್ದಾಗ ಬೇರೆಯವರನ್ನು ದತ್ತು ತೆಗೆದುಕೊಂಡು ಆಡಳಿತವನ್ನು ಮುಂದುವರೆಸುವ ಹಾಗಿಲ್ಲ ಒಂದು ವೇಳೆ ದತ್ತಕ ಪಡಕೊಂಡು ಆಡಳಿತ ಮುಂದುವರಿಸಿದರೆ ಆಯಾ ಆಸ್ಥಾನದ ಯಾವುದೇ ಹಕ್ಕು ಆ ದತ್ತು ಮಕ್ಕಳಿಗೆ ಇರುವುದಿಲ್ಲ ಅದು ಬ್ರಿಟೀಷರ ನೇರ ಆಡಳಿತ ವ್ಯವಸ್ಥೆಗೆ ಸೇರುತ್ತದೆ. ಸಂಪೂರ್ಣ ಆ ಸಂಸ್ಥಾನವನ್ನು ಬ್ರಿಟೀಷ್ ಸರಕಾರ ವಶಪಡಿಸಿಕೊಳ್ಳಲಾಗುತ್ತದೆ ಎಂದು ಈ ಕಾಯಿದೆಯನ್ನು ಜಾರಿಗೆ ತರಲಾಯಿತು.

ಇಲ್ಲಿಯವರೆಗೆ ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವ ಕಾಯಿದೆ ಎಂದರೇನು? ಎಂದು ತಿಳಿಯಲಾಯಿತು, ಇವಾಗ ಈ ಕಾಯಿದೆಯ ನೀತಿಯಿಂದಕ ವಸಹಾತುಶಾಹಿಗಳ ವಿರುದ್ಧ ಹೋರಾಟ ಮಾಡಿದ ಕಿತ್ತೂರು ಬಂಡಾಯ ಮತ್ತು ನರಗುಂದ ದರ್ಶನದ ಕುರಿತು ತಿಳಿಯುವುದು ಅವಶ್ಯಕ.

### ಕಿತ್ತೂರು ಬಂಡಾಯ

ಕಿತ್ತೂರು ಬಂಡಾಯ ಕ್ರಿ.ಶ.೧೮೨೪ರಲ್ಲಿ ವಸಹಾತುಶಾಹಿಗಳ ವಿರುದ್ಧ ನಡೆದ ೧೮೨೪ರ ಪ್ರಮುಖ ಪ್ರತಿಭಟನೆಯಾಗಿ ಕಂಡುಬರುತ್ತದೆ. ಬೆಳಗಾವಿ ಜಿಲ್ಲೆಯ ಕಿತ್ತೂರು ದೇಸಗತಿಯ

ರಾಣಿಚೆನ್ನಮ್ಮ ದತ್ತುಮಕ್ಕಳಿಗೆ ಹಕ್ಕಿಲ್ಲ ಎನ್ನುವ ಬ್ರಿಟೀಷರ ರಾಜತಾಂತ್ರಿಕ ಕಾಯಿದೆಯ ವಿರುದ್ಧ ಹೋರಾಟ ಮಾಡಿದ ಪ್ರತಮ ದಿಟ್ಟ ಧೀರ ಮಹಿಳೆ ಅವಳು ಆರಂಭಿಸಿದ ಬ್ರಿಟೀಷ್ ವಿರೋಧಿ ಸಂಗ್ರಾಮವು ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳಾದ್ಯಂತ ಜನರಲ್ಲಿ ಬ್ರಿಟೀಷ್ ವಿರೋಧದ ಭಾರೀ ಅಲೆಗಳನ್ನು ಎಬ್ಬಿಸಿತು. ವಾಸ್ತವವಾಗಿ ಕಿತ್ತೂರು ಚನ್ನಮ್ಮನ ಮಾವ ಮಲ್ಲಸರ್ಜ ದೊರೆ ಕ್ರಿ.ಶ. ೧೮೧೬ರಲ್ಲಿ ಕೊನೆಯುಸಿರೆಳದರು. ಆವಾಗ ಇವನ ಹಿರಿಯ ಮಗ ಶಿವಲಿಂಗರುದ್ರಸರ್ಜ ಕಿತ್ತೂರು ದೊರೆಯಾದನು. ೧೮೧೭ ಮತ್ತು ೧೮೧೮ರಲ್ಲಿ ಅವನು ಮರಾಠರ ಪ್ರಭುತ್ವವನ್ನು ಹತ್ತಿಕ್ಕಲು ಬ್ರಿಟೀಷರಿಗೆ ಸಹಾಯ ಮಾಡಿದ್ದನು. ನೋಡಿ ಹೀಗೆ ರುದ್ರಸರ್ಜ ಸ್ಥಳೀಯ ಮರಾಠರನ್ನು ಹತ್ತಿಕ್ಕಲು ಬ್ರಿಟೀಷರ ಸಹಾಯ ತೆಗೆದುಕೊಂಡಿದ್ದಕ್ಕೆ ಬ್ರಿಟೀಷರಿಗೆ ಭಾರತೀಯರ ಒಗ್ಗಟ್ಟಿನಲ್ಲಿ ಕೊರತೆಯಿರುವುದನ್ನು ಅರಿತ ಅವರು ಕಿತ್ತೂರು ಮೇಲೆ ಆಕ್ರಮಣ ಮಾಡಲಿಕ್ಕೆ ಅವರಿಗೆ ಯಾವುದೇ ಅಂಜಿಕೆ ಆತಂಕ ಇರಲಿಲ್ಲ ಎಂದೆನಿಸುತ್ತದೆ. ಹಾಗೆನೆ ಈ ರುದ್ರಸರ್ಜನು ಸಲ್ಲಿಸುತ್ತಿದ್ದ ಅಪಾರ ಸಹಾಯ ಸಹಕಾರಗಳನ್ನು ಬ್ರಿಟೀಷರು ನೆನಪಿಸಿಕೊಳ್ಳುತ್ತಾ ಅವರಿಗೆ ೧೮೧೮ರ ಜುಲೈ ೨೮ರಂದು ಥಾಮಸ್ ಮನ್ರೋ ಸನ್ನದನ್ನು ನೀಡಿದನು. ಆ ಸನ್ನದಿನ ೧೦ನೇ ಪ್ಯಾರಾದಲ್ಲಿ ಈ ರೀತಿ ಹೇಳಲಾಗಿದೆ.

"ವಂಶಪಾರಂಪರ್ಯವಾಗಿ ಈ ಸಂಸ್ಥಾನವನ್ನು ನಿಮಗೆ ಕೊಡಲಾಗಿದೆ. ಇದನ್ನು ನಿಮ್ಮ ಮಕ್ಕಳು ಮತ್ತು ಅವರ ಮಕ್ಕಳು ಅನುಭವಿಸುತ್ತಾ ಹೋಗಬೇಕು, ಇದಕ್ಕಾಗಿ ೧.೭೦.೦೦೦ರೂ.ಗಳ ವಾರ್ಷಿಕ ಕಾಣಿಕೆಯನ್ನು ನಿಮ್ಮಿಂದ ಪಡೆಯಲಾಗುವುದು."[೫]

ಹೀಗೆ ಬ್ರಿಟೀಷರ ಬೆಂಬಲದಿಂದ ಶಿವಲಿಂಗರುದ್ರಸರ್ಜನು ನಿರಾತಂಕವಾಗಿ ರಾಜ್ಯಭಾರ ಮಾಡುತ್ತ ಇರಲು, ಅವನಿಗೆ ಸಂತಾನ ಪ್ರಾಪ್ತಿಯಾಗಲಿಲ್ಲ. ಖಾಯಿಲೆಯಿಂದ ಬಳಲುತ್ತಿದ್ದ ಅವನು ವಾರಸುದಾರರಿಲ್ಲದೆ ರಾಜ್ಯ ನಾಶವಾಗುತ್ತದೆ ಎನ್ನುವ ಆತಂಕದಿಂದ ಅವನು ದತ್ತಕ ತೆಗೆದುಕೊಳ್ಳಲು ನಿರ್ಧರಿಸಿದನು. ಅದಕ್ಕಾಗಿ ಗುರುಸಿದ್ಧಪ್ಪ ಎನ್ನುವಂತಹ ವ್ಯಕ್ತಿಯನ್ನು ದತ್ತಕಕ್ಕೆ ಹುಡುಗರನ್ನು ಆಯ್ಕೆಮಾಡಲು ನೇಮಿಸಿದನು. ನಂತರ ಮಾಸ್ತಮರಡಿ ಬಾಳಪ್ಪಗೌಡನ ಮಗ 'ಶಿವಲಿಂಗಪ್ಪ' ಎಂಬ ಬಾಲಕನನ್ನು ದತ್ತು ತೆಗೆದುಕೊಳ್ಳಲು ಆಯ್ಕೆ ಮಾಡಲಾಯಿತು. ಶಿವಲಿಂಗರುದ್ರ ಸರ್ಜ ತನ್ನ ಜೀವನದ ಕೊನೆಯ ಕಾಲದಲ್ಲಿ ಆ ಬಾಲಕನನ್ನು ಮಲ್ಲಸರ್ಜನೆಂದು ಹೆಸರಿಸಿ ಕಿತ್ತೂರಿನ ಸಾರ್ವಭೌಮಾಧಿಕಾರಿಗಳನ್ನು ಅವನಿಗೆ ನೀಡಿ ಸಂಸ್ಥಾನದ ಕಾಯಿದೆ ಬದ್ಧ ಉತ್ತರಾಧಿಕಾರಿಯನ್ನಾಗಿ ಮಾಡಲಾಯಿತು. ನಂತರ ಶಿವಲಿಂಗರುದ್ರಸರ್ಜನು ಕ್ರಿ.ಶ.,೧೮೨೪ ಸೆಪ್ಟೆಂಬರ್ ೧೧ರಂದು ಮರಣ ಹೊಂದಿದನು ದತ್ತಕನ ಹೆಸರಿನಲ್ಲಿ ರಾಣಿ ಚೆನ್ನಮ್ಮಾಜಿ ಆಳ್ವಿಕೆ ನಡೆಸತೊಡಗಿದ ಶಿವಲಿಂಗಪ್ಪ ಎಂಬ ಹೆಸರಿನ ಹುಡುಗನನ್ನು ದತ್ತಕ ಪಡೆದುದನ್ನು ಅಂದಿನ ಧಾರವಾಡದ ಕಲೆಕ್ಟರನು ಮತ್ತು ಮುಖ್ಯಪೊಲಿಟಿಕಲ್ ಏಜೆಂಟನೂ ಆಗಿದ್ದ ಥ್ಯಾಕರೆ ನಿರಾಕರಿಸಿದನು ಇದಲ್ಲದೆ ಕಿತ್ತೂರಿನ ಆಡಳಿತದ ಬಗೆಗೆ ಡೆಕ್ಕನ್ನಿನ ಬ್ರಿಟೀಷ್ ಕಮೀಷನರ್ ಚಾಪ್ಲಿನ್ನ ಸಹಕಾರದೊಂದಿಗೆ ಸುಳ್ಳುವರದಿಯನ್ನು ತಯಾರಿಸಿ ಮೇಲಧಿಕಾರಿಗಳಿಗೆ ಕಳುಹಿಸಿದರು. ಆ

ವರದಿಯಲ್ಲಿ "ಗಂಡು ಸಂತಾನವಿಲ್ಲದ ನೆಪದತ್ತಕ ಪುತ್ರ ದೇಸಾಯಿ ಮನೆತನದ ಸಮೀಪ ಬಂಧುವಲ್ಲ ಹಾಗೂ ತೀರಾ ಬಾಲಕ ಎಂಬ ನೆಪಗಳೂ "ದತ್ತು ಮಕ್ಕಳಿಗೆ ಹಕ್ಕಿಲ್ಲ" ಎಂಬ ತತ್ವದ ಆಧಾರದ ಮೇಲೆ ಬ್ರಿಟೀಷ್ ಸರ್ಕಾರವೆ ಆಡಳಿತ ನಡೆಸಬೇಕು" ಎಂಬ ಅಂಶಗಳಿದ್ದವು. ಹೀಗೆ ಈ ವಂಚಕರು ಗವರ್ನರ್ ಎಲ್ಫನ್‌ಸ್ಟನ್‌ನನ್ನು ತಪ್ಪುದಾರಿಗೆಳೆದರು, ನಂತರ ಥ್ಯಾಕರೆಯು ಕಿತ್ತೂರಿನ ಬೊಕ್ಕಸ ಭದ್ರವಿಲ್ಲ ಅದು ಲೂಟಿ ಆದೀತು ಎಂಬ ನೆಪಹೂಡಿ ಬೊಕ್ಕಸವನ್ನು ಸೀಲುಮಾಡಿ ತನ್ನ ಕಡೆಯವರನ್ನು ಮೇಲ್ವಿಚಾರಣೆಗೆ ನೇಮಕ ಮಾಡಿದನು. ಕೋಟೆ ಬಾಗಿಲುಗಳ ಕಾವಲಿಗೆ ತನ್ನ ಸಿಪಾಯಿಗಳನ್ನಿರಿಸಿದನು ಬೊಕ್ಕಸದ ಸುರಕ್ಷತೆಗೆ ಕಿತ್ತೂರಿನ ಮುಖ್ಯಸ್ಥರನ್ನು ಜಾಮಿನಿಗೆ ಕೇಳಿದನು. ಅವನು ಒಪ್ಪಲಿಲ್ಲ. ಆಡಳಿತಕ್ಕೆ ತನ್ನ ಕಡೆಯ ಬನ್ನೂರ ಮಲ್ಲಪ್ಪಶೆಟ್ಟಿ ಮತ್ತು ವೆಂಕಟರಾವ್ ಎಂಬ ಕಾರಭಾರಿಗಳನ್ನರಿಸಿದ, ಥ್ಯಾಕರೆಯ ಈ ವರ್ತನೆಗಳು ಜನತೆಗೆ ಬೇಸರ ಮೂಡಿಸಿದವು. ಅವರು ಮುಂಬೈ ಸರ್ಕಾರಕ್ಕೆ ದೂರನ್ನು ನೀಡಿದರೂ ಪ್ರಯೋಜನ ವಾಗಲಿಲ್ಲ. ಕಿತ್ತೂರಿನ ಜನ ಮುಂದಿನ ತ್ಯಾಗಕ್ಕೆ ಸಿದ್ಧರಾದರು. ರಾಣಿಚೆನ್ನಮ್ಮ ಈ ಗಂಡಾಂತರ ಹೋಗಲಾಡಿಸಲು ತಾಳ್ಮೆಯಿಂದ ಪ್ರಯತ್ನಿಸಿದರೂ ಆಗಲಿಲ್ಲ. ಕಿತ್ತೂರು ಸಂಸ್ಥಾನದ ಪರವಾಗಿ ಲಿಂಗಭಟ್ಟ ಮತ್ತು ರಾಚಪ್ಪ ಎಂಬಿಬ್ಬರು ವಕೀಲರನ್ನು ಕಂಪನಿ ಸರಕಾರಕ್ಕೆ ಕಳುಹಿಸಿದಳು ಅದರ ಜೊತೆ ಕಿತ್ತೂರಿನ ಕೋಟೆ ಕೊತ್ತಲುಗಾಳನ್ನು ಭದ್ರಗೊಳಿಸಿ ಸೈನ್ಯವನ್ನು ಸಜ್ಜುಗೊಳಿಸಿದಳು. ಈ ಸಿದ್ಧತೆ ಥ್ಯಾಕರೆಯನ್ನು ಬೆಚ್ಚಿಬೀಳಿಸಿತು. ಸಂಧಾನಕ್ಕಾಗಿ ಭೇಟಿ ಮಾಡಲು ಇಚ್ಛಿಸಿದ ರಾಣಿ ಚೆನ್ನಮ್ಮ ಒಪ್ಪಲಿಲ್ಲ. ಆಗ ಥ್ಯಾಕರೆ ಫಿರಂಗಿಗಳನ್ನು ಕೋಟೆಯ ಪ್ರತಿಬಾಗಿಲು ಮುಂದೆ ಕಾವಲು ಸಹಿತವಾಗಿ ಇರಿಸಿದನು. ಸರಕಾರ ಗುರುಸಿದ್ಧಪ್ಪನ ನಾಯಕತ್ವದಲ್ಲಿ ಕಿತ್ತೂರು ಸೈನಿಕರು ಕೋಟೆಯ ಒಳಗಡೆ ಸಜ್ಜಾಗುತ್ತಿದ್ದರು, ಬ್ರಿಟೀಷರು ತಮ್ಮ ಸೈನ್ಯವನ್ನು ಜಮಾವಣೆ ಮಾಡುತ್ತಿದ್ದ ಸಂದರ್ಭದಲ್ಲಿಯೇ ಕಿತ್ತೂರು ಸೈನಿಕರು ಅವರ ಮೇಲೆ ಎರಗಿದರು. ಚೆನ್ನಮ್ಮರಾಣಿ ಆಳುವೇರಿಯ ಮೇಲೆನಿಂತು ಸೈನಿಕರಿಗೆ ನಿರ್ದೇಶನ ನೀಡತೊಡಗಿದಳು. ಅಮಟೂರ್ ಸಯ್ಯದ್ ನವರ ಬಾಳಾಸಾಹೇಬನು ಚನ್ನಮ್ಮಾಜಿ ಮೈಗಾವಲಿದ್ದ ಸೈನ್ಯ ಕೂಡಿಕೊಂಡು ಮುನ್ನುಗ್ಗಿದನು. ರಾಣಿಯ ಸೂಚನೆ ಮೇರೆಗೆ ಬಾಳಾಸಾಹೇಬನು ಸೇನಾ ಸಮೇತನಾಗಿ ಮುನ್ನುಗ್ಗುತ್ತಿದ್ದ ಥ್ಯಾಕರೆಯ ಮೇಲೆ ಗುಂಡು ಹಾರಿಸಿದನು. ಕ್ರಿ.ಶ. ೧೮೨೪ರ ಅಕ್ಟೋಬರ ೨೩ರಂದು ಥ್ಯಾಕರೆ ಯುದ್ಧದಲ್ಲಿ ಗುಂಡಿಗೆ ಬಲಿಯಾದನು. ಅಂದೇ ಇಂಗ್ಲೀಷರ ಕ್ಯಾಪ್ಟನ್ ಬ್ಲ್ಯಾಕ್ ಸ್ಟೀವನ್‌ಸನ್ ಹಾಗೂ ಲೆಫ್ಟೆನೆಂಟ್ ಡಿಗ್ಲನ್ ಕೂಡಾ ಕಾಳಗದಲ್ಲಿ ಮಡಿದರು, ಬ್ರಿಟೀಷರಿಗೆ ಸೋಲಾಯಿತು. ಅನೇಕರನ್ನು ಸೆರೆಹಿಡಿಯಲಾಯಿತು.

ಕಿತ್ತೂರ ಕಾಳಗದ ಅಪಜಯದಿಂದ ಮುಖಭಂಗಕ್ಕಿಡಾದ ಬ್ರಿಟೀಷರು ಮೈಸೂರು, ಸೊಲ್ಲಾಪುರ, ಮುಂಬಯಿ ಹಾಗೂ ಇನ್ನಿತರೆ ಕಡೆಗಳಿಂದ ಸೈನ್ಯವನ್ನು ತರಿಸಿಕೊಂಡರು ಆಂಗ್ಲರು ಕಿತ್ತೂರು ಮೇಲೆ ಏರಿಬಂದರೆ ಮೊದಲು ಸೆರೆಯಾಳುಗಳನ್ನು ಕೊಲ್ಲುವುದಾಗಿ ಜೀವದ ಹಂಗುತೊರೆದು ಹೋರಾಡುವುದಾಗಿ ಕಿತ್ತೂರು ರಾಣಿ ಬ್ರಿಟೀಷರಿಗೆ ಎಚ್ಚರಿಕೆ ನೀಡಿದಳು. ಇದರಿಂದ ಬ್ರಿಟೀಷರು

ದಾಳಿ ಮಾಡುವ ಯೋಜನೆಯನ್ನು ಮುಂದೂಡಿದರು. ದಕ್ಷಿಣ ಭಾರತದ ಚಾಪ್ಲಿನ್‌ನು ರಾಣಿಚೆನ್ನಮ್ಮನಿಗೆ ತಾವು ಆಂಗ್ಲ ಸೆರೆಯಾಳುಗಳನ್ನು ಬಿಟ್ಟರೆ ಸರದಾರ ಗುರುಸಿದ್ಧಪ್ಪನೊಬ್ಬನನ್ನು ಒಟ್ಟು ಮಿಕ್ಕವರೆಲ್ಲರನ್ನು ಕ್ಷಮಿಸಲಾಗುವುದು ಎಂದು ಹೇಳಿ ಕಳಿಸಿದನು. ಇದನ್ನು ನಂಬಿದ ರಾಣಿ ಆಂಗ್ಲ ಸೇರೆಯಾಳುಗಳನ್ನು ಬಿಡುಗಡೆ ಮಾಡಿದಳು. ಆದರೆ ರಾಜಕೀಯ ತಂತ್ರಗಳನ್ನು ರೂಢಿಸಿದ ಚಾಪ್ಲಿನ್ ಕೊಟ್ಟ ಮಾತಿನಂತೆ ನಡೆಯದೆ ಚೆನ್ನಮ್ಮನಿಗೆ ಮೋಸಮಾಡಿದನು. ಆನಂತರ ಬ್ರಿಟೀಷರು ಲೆ॥ ಕರ್ನಲ್ ಡಿಕನ್‌ನ ನೇತ್ರತ್ವದಲ್ಲಿ ಬ್ರಿಟೀಷ್ ಸೈನಿಕರು ಕಿತ್ತೂರು ಕೋಟೆಗೆ ಮುತ್ತಿಗೆ ಹಾಕಲು ಆದೇಶ ದೂಡಿದರು. ಇದರ ಪ್ರತಿಫಲವಾಗಿ ೧೮೨೪ ಡಿಸೆಂಬರ್ ೩ ರಂದು ಬ್ರಿಟೀಷರ ಸೈನ್ಯ ಕೋಟೆಗೆ ಮುತ್ತಿಗೆ ಹಾಕಿತು. ಎರಡು ಬಣಗಳ ನಡುವೆ ಘೋರವಾದ ಕಾಳಗ ನಡೆಯಿತು. ಕಿತ್ತೂರು ಸೈನಿಕ ಸತತವಾಗಿ ಮೂರು ದಿನಗಳ ಕಾಲ ಶೌರ್ಯದಿಂದ ಹೋರಾಡಿದರು. ಆದರೆ ಮಿತ್ರದ್ರೋಹಿಗಳು ಕಿತ್ತೂರಿನ ಮದ್ದುಗುಂಡಗಳಿಗೆ ಸಗಣಿ ಸುರಿದಿದ್ದರು. ಇದು ಬ್ರಿಟೀಷರ ಒಂದು ರಾಜಕೀಯ ಅನ್ಯತ್ಯಕ ಕೃತ್ಯವಾಗಿ ಕಂಡುಬರುತ್ತದೆ. ಡಿಸೆಂಬರ್ ೫ರಂದು ಕಿತ್ತೂರು ಕೋಟೆ ಬ್ರಿಟೀಷರ ಪರವಾಯಿತು. ಆವಾಗ ವೀರರಾಣಿ ಚೆನ್ನಮ್ಮ ಬ್ರಿಟೀಷರ ಕೈಗೆ ಸಿಗಬಾರದು ಎಂದು ಸಂಗೊಳ್ಳಿ ಹಾದಿ ಹಿಡಿದಳು. ಆದರು ಬ್ರಿಟೀಷರು ಅವಳನ್ನು ಬೆನ್ನಟ್ಟಿ ಸೆರೆಹಿಡಿದರು. ಕಿತ್ತೂರು ಡಿಸೆಂಬರ್ ೧೮ ರಂದು ಸಂಪೂರ್ಣವಾಗಿ ಬ್ರಿಟೀಷರ ವಶವಾಯಿತು. ಇದರಿಂದ ರಾಣಿಚೆನ್ನಮ್ಮ, ವೀರಮ್ಮ ಮೊದಲಾದವರು ಬೈಲಹೊಂಗಲ ಜೈಲು ಸೇರಬೇಕಾಯಿತು. ಇವರು ನಾಲ್ಕು ವರ್ಷ ಒಂದು ತಿಂಗಳು ಹದಿಮೂರು ದಿನ ಬಂಧನದಲ್ಲಿದ್ದು ಕ್ರಿ.ಶ. ೧೮೨೯ರ ಫೆಬ್ರವರಿ ೨ ರಂದು ಶನಿವಾರ ಮರಣ ಹೊಂದಿದಳು. ಹೀಗೆ ನಾಡಿನ ಇತಿಹಾಸದಲ್ಲಿ ಚೆನ್ನಮ್ಮ ಬ್ರಿಟೀಷರನ್ನು ವಿರೋಧಿಸಿ ಅವರ ಜೊತೆ ಯುದ್ಧಕ್ಕೆ ಇಳಿದು ಕೊನೆಗೆ ಮರಣಹೊಂದಿದಳು.

ಹೀಗೆ ರಾಣಿ ಚೆನ್ನಮ್ಮ ೧೮೫೭ಕ್ಕೂ ಮೊದಲು ಬ್ರಿಟೀಷರು ಪ್ರತಿಭಟಿಸಿದ ಮೊದಲ ಮಹಿಳೆಯಾಗಿದ್ದಳು; ಚೆನ್ನಮ್ಮನ ಪ್ರತಿರೋಧ ಸ್ಥಳೀಯವಾಗಿದ್ದರೂ ಸಹಿತ ಅವಳ ಪರಿಣಾಮ ಇತಿಹಾಸದಲ್ಲಿ ಅಪಾರವಾಗಿದೆ. ಅಂದಿನ ದಿನ ಚೆನ್ನಮ್ಮನಿಗೆ ತನ್ನ ರಾಜ್ಯವನ್ನು ಉಳಿಸಿಕೊಳ್ಳಲು ಬ್ರಿಟೀಷರ ಜೊತೆ ಪ್ರತಿರೋಧವನ್ನು ಒಡ್ಡುವುದು. ಅವಳಿಗೆ ಅನಿವಾರ್ಯವಾಗಿತ್ತು ಆದರೆ ಆ ಹೋರಾಟ ರಾಜಕೀಯ ಉದ್ದೇಶವನ್ನು ಪ್ರತಿಬಿಂಬಿಸಿತು.

ನಂತರ ಕಿತ್ತೂರಿನ ವೀರರು ದತ್ತಕಪುತ್ರ ಮಾಸ್ತಮುಡಿಯ ಶಿವಲಿಂಪ್ಪನನ್ನೇ ನಾಯಕನನ್ನಾಗಿ ಮಾಡಿಕೊಂಡು ಸಂಘಟಿತರಾಗಿ ೧೮೨೯ರವರೆಗೂ ಹೋರಾಟ ಮುಂದುವರಿಸಿದರು, ಹೀಗೆ ನಾವು ಕಿತ್ತೂರಿನ ದುರಂತದ ಬಗ್ಗೆ ವಿವರಿಸಬಹುದು.

**ನರಗುಂದದ ಬಂಡಾಯ**

ದತ್ತುಮಕ್ಕಳಿಗೆ ಹಕ್ಕಿಲ್ಲ ಎನ್ನುವ ಕಾಯಿದೆಯ ವಿರುದ್ಧ ಹೋರಾಡಿದ ಕರ್ನಾಟಕದ ಮತ್ತೊಬ್ಬ ಸ್ಥಳೀಯ ಸಂಸ್ಥಾನಿಕ ನರಗುಂದ ಬಾಬಾಸಾಹೇಬ, ಇವನು ಈ ಕಾಯಿದೆಯನ್ನು

ವಿರೋಧಿಸಿ ಬ್ರಿಟೀಷರ ಜೊತೆ ಹಲವಾರು ಸಲ ಪ್ರತಿರೋಧಿಸಿರುವುದು ತಿಳಿದುಬರುತ್ತದೆ. ನರಗುಂದ ಎಂಬ ಸಂಸ್ಥಾನ ಗದಗ ಜಿಲ್ಲೆಯಲ್ಲಿ ಬರುತ್ತದೆ. ಈ ಸಂಸ್ಥಾನ ೧೯ನೇ ಶತಮಾನದಲ್ಲಿ ಮರಾಠಿ ಪೇಶ್ವೆಗಳ ಅಧೀನದಲ್ಲಿತ್ತು. ಅಲ್ಲಿ ಬಾಬಾಸಾಹೇಬನೆಂದೇ ಜನರಿಂದ ಕರೆಸಿಕೊಳ್ಳುತ್ತಿದ್ದ ಬಾಸ್ಕರರಾವ್ ಭಾವೆ ನರಗುಂದ ಕೋಟೆಯ ಸಂಸ್ಥಾನಿಕನಾಗಿದ್ದನು. ಅವರ ತಂದೆ ದಾದಾಜಿ ಕಾಲದಿಂದಲೂ ದಿವಾನನಾಗಿದ್ದ ಅವರ ಬಂಧು ದಾದಾಲಿಮೆಯ ಸಂಸ್ಥಾನವನ್ನು ದುಸ್ಥಿತಿಗೆ ತಂದಿದ್ದನು. ದಾದಾಜಿ ಮರಣ ಹೊಂದಿದ ನಂತರ ಅವರ ಮಗನಾದ ಭಾಸ್ಕರರಾಯ ಭಾವೆ ಪಟ್ಟಕ್ಕೆ ಬಂದನು, ಇವನು ಉತ್ತಮ ಆಡಳಿತಗಾರನಾಗಿದ್ದು ತನ್ನ ಆಳ್ವಿಕೆಯಲ್ಲಿ ಸಂಸ್ಥಾನವನ್ನು ಸುಧಾರಿಸಿ ಅತ್ಯಂತ ಜನಪ್ರಿಯನಾದನು. ಭಾಸ್ಕರರಾವ್ ಕ್ರಿ.ಶ. ೧೮೪೨ರಲ್ಲಿ ಅಧಿಕಾರವನ್ನು ಹಿಡಿದರೂ ಅದನ್ನ ಮುಂದುವರಿಸುವ ಸಾಂತಾನವೇ ಇಲ್ಲವಲ್ಲ ಎಂಬ ಕೊರಗು ಅವನನ್ನು ಕಾಡುತ್ತಿತ್ತು. ಆದುದರಿಂದ ತನ್ನ ಪರಂಪರೆಯನ್ನು ಮುಂದುವರಿಸಲು ದತ್ತುಸಮಗುವೊಂದನ್ನು ತೆಗೆದುಕೊಳ್ಳಲು ಬ್ರಿಟೀಷರ ಅನುಮತಿ ಕೋರಿದನು. ಆದರೆ ಅವನಿಗೆ ಬ್ರಿಟೀಷರು ಅನುಮತಿ ಕೊಡಲಿಲ್ಲ. ಕ್ರಿ.ಶ. ೧೮೫೯ರಲ್ಲಿ ಬ್ರಿಟೀಷರಿಗೆ ಬಹುವಿಧೇಯರಾಗಿದ್ದ ರಾಮದುರ್ಗದ ಸಂಸ್ಥಾನಿಕರಲ್ಲಿ ಬಂದ ರಾಮದುರ್ಗದ ರಾಣಿ ರಾಧಾಬಾಯಿಗೆ ದತ್ತಕಕ್ಕೆ ಅವಕಾಶ ಕೊಟ್ಟಿದ್ದರು ತನ್ನ ಮನವಿಯನ್ನು ನಿರಾಕರಿಸಿದ ಬ್ರಿಟೀಷರ ಬಗ್ಗೆ ಸಹಜವಾಗಿಯೇ ಬಾಬಾಸಾಹೇಬನಿಗೆ ದ್ವೇಷ ಮೂಡತೊಡಗಿತು. ಇದರ ಜೊತೆಗೆ ಶಸ್ತ್ರಾಸ್ತ್ರಗಳನ್ನು ನಿಶಸ್ತ್ರೀಕರಣದ ಕಾಯಿದೆಯ ಪ್ರಕಾರ ಅವುಗಳನ್ನು ಬ್ರಿಟೀಷರಿಗೆ ಒಪ್ಪಿಸಬೇಕು ಬ್ರಿಟೀಷರು ಆಜ್ಞೆ ಮಾಡಿರುವುದನ್ನು ಕಂಡು ಅವನಿಗೂ ಬ್ರಿಟೀಷರ ರಾಜಕೀಯ ಕುತಂತ್ರಗಳ ಪ್ರತಿಫಲವಾಗಿ ಬಂದ ಇಂತಹ ಕಾಯಿದೆಗಳು ಇನ್ನು ಹೆಚ್ಚು ಕೇಳಿಸಲು ಸಹಾಯಕವಾದವು. ಇದಲ್ಲದೆ 'ಇನಾಂಭೂಮಿಯನ್ನು ಹೊಂದಿದವರು ಬ್ರಿಟೀಷರ ಮತ್ತೊಂದು ರಾಜಕೀಯ ನೀತಿಯಿಂದ ಅದನ್ನು ಬ್ರಿಟೀಷರಿಗೆ ಒಪ್ಪಿಸಬೇಕು ಎಂದು ತಿಳಿಸಿದಾಗ ಇದರಿಂದ ಇನಾಮ್ ಕಮೀಷನ್ ಭಾಸ್ಕರರಾವ್ ಭಾವೆಗೆ ಇನಾಂ ಜಮೀನ್ ವಾಪಸ್ ನೀಡುವಂತೆ ಕೋರಿತು, ಇದರಿಂದ ಅವನಿಗೆ ಬ್ರಿಟೀಷರ ವಿರುದ್ಧದ ದ್ವೇಷ ಹೆಚ್ಚಾಗಿ ಅವರನ್ನು ಗೋರವಾಗಿ ಪ್ರತಿಭಟಿಸಲು ಕಾಯುತ್ತಿದ್ದನು ಇದರಿಂದ ರಹಸ್ಯವಾಗಿ ಅವನು ದಕ್ಷಿಣ ಭಾರತದ ಸಂಸ್ಥಾನಿಕರೊಡನೆ ಸಂಪರ್ಕ ಸಾಧಿಸಲಾರಂಭಿಸಿದನು. ಮುಂಡರಗಿ ಭೀಮರಾಯ, ಹೆಮ್ಮಿಗೆ ಕೆಂಚನಗೌಡ, ಸೂರಬೂರು ಗೋವಿನಕೊಪ್ಪದ ದೇಸಾಯಿ, ದೋಸಿ ಇನಾಮದಾರ, ಆನೆ ಗೊಂದಿಯ ಶ್ರೀರಂಗರಾಯ, ಧಾರವಾಡದ ನೆರೆಯ ದೇಸಾಯಿಗಳು, ಜಮಖಂಡಿ, ಮೀರಜ್, ತೋರಗಲ್ ಮಹಾರಾಜರು ಹಾಗೂ ಸುರಪುರದ ವೆಂಕಟಪ್ಪನಾಯಕ ಇವರೆಲ್ಲರನ್ನು ಸಂಪರ್ಕಿಸಿ ಏಕಕಾಲಕ್ಕೆ ಬಂಡಾಯವೇಳಲು ಕೇಳಿಕೊಂಡನು ಈ ವ್ಯವಸ್ಥಿತ ಯೋಜನೆಯಲ್ಲಿ ಸೇರಲು ಮುಂಬಯಿಯ ಠಾಣ ಸಂಸ್ಥಾನದಿಂದ ಭಾಸ್ಕರರಾವ್ ಭಾವೆಯ ಸ್ನೇಹಿತನಾಗಿದ್ದ ಕೇಶವ ದಯಾಳ್ ತಿವಾರಿಯು ಲಾವಣಿ ಸಾಹಿತ್ಯದ ಮುಖೇನ ದತ್ತುಮಕ್ಕಳಿಗೆ ಹಕ್ಕಿಲ್ಲ ಎಂಬ ಕಾಯಿದೆಯನ್ನು ವಿರೋಧಿಸಿ ವಸಹಾತುಶಾಹಿಗಳ ವಿರುದ್ಧ ನಡೆದ ಸ್ಥಳೀಯ ಪ್ರತಿರೋಧಗಳು.

## ನರಗುಂದ ಬಾಬಾಸಾಹೇಬ ಮತ್ತು ಲಾವಣಿ ಸಾಹಿತ್ಯ

೧೮೨೪ರ ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವ ಕಾಯಿದೆಯ ಬ್ರಿಟೀಷರ ರಾಜಕೀಯ ಕುತಂತ್ರದ ಪ್ರತಿಫಲವಾಗಿ ಬಂದ ಈ ಕಾಯಿದೆಗೆ ಅನುಗುಣವಾಗಿ ಸ್ಥಳೀಯವಾಗಿ ಬ್ರಿಟೀಷರ ವಿರುದ್ಧ ನಡೆದ ಹೋರಾಟಗಳಲ್ಲಿ ನರಗುಂದ ಬಾಬಾಸಾಹೇಬನ ಪ್ರತಿರೋಧ ಮತ್ತು ಕಿತ್ತೂರು ಸಂಸ್ಥಾನದ ಕಿತ್ತೂರು ಚೆನ್ನಮ್ಮನ ಪ್ರತಿಭಟನೆ ಈ ಎರಡು ಪ್ರತಿಭಟನೆಗಳು ಚರಿತ್ರೆಯಲ್ಲಿ ಮುಖ್ಯವಾಗಿ ಕಂಡುಬರುತ್ತವೆ. ಈ ಎರಡು ಪ್ರತಿಭಟನೆಗಳನ್ನು ನಾವು ಕೇವಲ ಚರಿತ್ರೆಯಲ್ಲಿ ಅಷ್ಟೇ ಅಲ್ಲ ಸ್ಥಳೀಯ ಜನರ ಸಂವೇದನೆಗೆ ಅನುಗುಣವಾದ ಜನಪದೀಯ ಸಾಹಿತ್ಯದಲ್ಲಿ ಹುಟ್ಟಿದ ಲಾವಣಿ ಸಾಹಿತ್ಯವು ಮುಖ್ಯವಾದ ಪ್ರಕಾರವಾಗಿ ಕಂಡುಬರುತ್ತದೆ.

ಈ ಎರಡು ದುರಂತಗಳನ್ನು ಕಣ್ಣಾರೆ ಕಂಡು ಪರಿತಪಿಸಿ ಮಮ್ಮಲ ಮರಗಿ ತಮ್ಮದೆನ್ನುವುದೆಲ್ಲವನ್ನೂ ಹುಡುಗೂಡಿಸಿಕೊಂಡದ್ದರಿಂದ ಆ ಇತಿಹಾಸದ ಕಥೆಯೇ ವ್ಯಥೆಯಾಗಿ ಹಲವಾರು ಹತ್ತಾರು ಬಗೆಯ ವೈವಿಧ್ಯಪೂರ್ಣ ಜನಪದ ಹಾಡುಗಳಿಗೆ ಜನ್ಮಕೊಟ್ಟಿದೆ ನರಗುಂದ ಪ್ರತಿರೋಧ ಮತ್ತು ಕಿತ್ತೂರು ಚೆನ್ನಮ್ಮನ ಪ್ರತಿರೋಧ ಹಾಗೂ ಭೀಕರ ಪ್ರತಿರೋಧವನ್ನು ಚಿತ್ರಿಸುವುದೇ ಎಲ್ಲ ಹಾಡುಗಳ ಪ್ರಮುಖ ಆಶಯವಾಗಿದೆ. ದತ್ತುಮಕ್ಕಳಿಗೆ ಹಕ್ಕಿಲ್ಲ ಎಂಬುದರ ವಿರೋಧಿಸಿ ಬ್ರಿಟೀಷರ ವಿರುದ್ಧ ಪ್ರತಿಭಟಿಸಿದ ಈ ಪ್ರತಿರೋಧಗಳನ್ನು ಈ ಲಾವಣಿಗಳು ಜೀವಂತವಾಗಿ ಇಟ್ಟಿರುವುದರಿಂದಲೇ ಅವುಗಳ ಅಧ್ಯಯನ ಇವತ್ತು ತುಂಬಾ ಅವಶ್ಯವಾಗಿರುವುದ. ಲಾವಣಿಗಳಲ್ಲಿ ಅಭಿವ್ಯಕ್ತವಾಗಿರುವ ಎಲ್ಲ ಹಾಡುಗಳ ಮೂಲ ಸ್ಥಾಯಿ ಒಂದೇ ಆಗಿದೆ. ಅವುಗಳಲ್ಲೆಲ್ಲಾ ಮಿಡಿದ ಮನದಾಳದ ಕ್ರೋಧ, ಸಿಟ್ಟು, ಅನುಕಂಪ, ಅನುತಾಪಗಳ ಸ್ಥಾನವೂ ಒಂದೇ ಒಟ್ಟಿನಲ್ಲಿ ಲಾವಣಿಗಳಲ್ಲಿ ಕೆಲವೊಂದು ಸುಸಂಸ್ಕೃತ ಮನಸ್ಸಿನ ಮುಕ್ತ ರಚನೆಗಳೆಂಬ ಭಾವ ಹುಟ್ಟಿಸಿದರೂ, ಲಾವಣಿಕಾರರ ನೈಜಭಾವ ಹಾಗೂ ಅಲಂಕಾರಿಕ ಆಡುಭಾಷೆಯ ಒಗರಿನಿಂದ ಸಮಷ್ಟಿಯ ಮನಸ್ಸನ್ನು ಮುಟ್ಟುವಲ್ಲಿ ಸಫಲವಾಗಿರುವುದು ಮಹತ್ವದ್ದಾಗಿದೆ.

ಹೀಗಾಗಿ ಈ ಲಾವಣಿ ಸಾಹಿತ್ಯದ ಮೂಲಕ ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವ ಕಾಯಿದೆಯ ವಿರುದ್ಧ ನಡೆದ ಪ್ರತಿರೋಧಗಳನ್ನು ಕಿತ್ತೂರು ದುರಂತ ಮತ್ತು ನರಗುಂದ ದುರಂತ ಈ ಎರಡೂ ದುರಂತಗಳ ಹಿನ್ನೆಲೆಯಲ್ಲಿ ನೋಡೋಣ.

ಸಂಸ್ಥಾನಕ್ಕೆ ವಾರಸುದಾರನಿಲ್ಲದೆ ಇರುವುದರಿಂದ ಆ ಸಂಸ್ಥಾನಕ್ಕೆ ದತ್ತು ಮಕ್ಕಳನ್ನು ತಗೆದುಕೊಳ್ಳುವ ನಿರ್ಧಾರ ಮಾಡಿದಾಗ ಅದಕ್ಕೆ ಅನುಮತಿಯನ್ನು ಕೋರಿ ಬಾಬಾಸಾಹೇಬ ಬ್ರಿಟೀಷರಿಗೆ ಪತ್ರವನ್ನು ಬರೆಯುತ್ತಾನೆ. ಆವಾಗ ಬ್ರಿಟೀಷರ ಮನಸ್ಸಿನ ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವ ಕಾಯಿದೆಗೆ ಅನುಗುಣವಾಗಿ ಪರಂಪರೆಯಾಗಿ ಮಕ್ಕಳ ಮತ್ತು ಮೊಮ್ಮಕ್ಕಳಿಗೆ ಮಾತ್ರ ಆ ಸಂಸ್ಥಾನದ ಮೇಲೆ ಹಕ್ಕಿರುವುದು ದತ್ತು ಮಕ್ಕಳಿಗೆ ಯಾವುದೇ ಹಕ್ಕಿಲ್ಲ ಎಂದು ಹೇಳಿದಾಗ ಬಾಬಾಸಾಹೇಬನು ಆತಂಕಕ್ಕೆ ಒಳಗಾಗಿ ಒಳ ಒಳಗೆ ಅವರನ್ನು ಪ್ರತಿಭಟಿಸುತ್ತಾ ಇರುತ್ತಾನೆ. ನರಗುಂದ ಬಾಬಾಸಾಹೇಬನ ಜೀವಿತದ ಮೂಲಧ್ಯೇಯವನ್ನೇ ಜನಪದರು ಲಾವಣಿಗಳಲ್ಲಿ ಮೆಚ್ಚಿಕೊಂಡಾಡಿದ್ದಾರೆ.

"ಹೆರವರ ಆಳಾಗಿ ಬಾಳೋದಕ್ಕಿಂತ
ಮರಣವೇ ಲೇಸು"

ಹೀಗೆ ಬ್ರಿಟೀಷರೆಂಬ ಪರಕೀಯರ ಆಳಾಗಿ ಬಾಳೋದಕ್ಕಿಂತ ಮರಣವೆ ಲೇಸು ಎಂದು ಅವತ್ತಿನಿಂದಲೇ ಹೇಗಾದರೂ ಮಾಡಿ ಬ್ರಿಟೀಷರ ರಾಜಕೀಯ ಮತ್ತು ಆಡಳಿತವನ್ನು ಬಗ್ಗುಬಡಿಯಬೇಕು ಎಂದು ನಿರ್ಧಾರ ಮಾಡುತ್ತಾನೆ.

ಇನ್ನು ಮುಂದೆ ಬಾಬಾಸಾಹೇಬನು ತನ್ನ ದತ್ತುಮಕ್ಕಳಿಗೆ ಹಕ್ಕಿಲ್ಲ ಎಂದು ಬ್ರಿಟೀಷರು ಹೇಳಿದಾಗ ಯಾಕಿಲ್ಲ? ಎಂದು ಪ್ರಶ್ನಿಸಿ ಬ್ರಿಟೀಷರನ್ನು ಸಂಘರ್ಷಿಸಿ ತನಗೆ ಬೇಕಾದಷ್ಟು ಆಸ್ತಿ ಐಶ್ವರ್ಯ ಇದ್ದರು ಅದನ್ನು ಕುಂತು ತಿಂದರು ಆ ಆಸ್ತಿ ತಿರತಿರಲಿಲ್ಲ. ಅಂತದನ್ನು ಬಿಟ್ಟು ತನ್ನ ಹಕ್ಕಿಗಾಗಿ ಬ್ರಿಟೀಷರ ಭೀಕರ ಸಂಘರ್ಷಕ್ಕೆ ಎದುರಾಗುತ್ತಾನೆ. ಅದಕ್ಕಾಗಿನೆ ಲಾವಣಿಕರ ಹೀಗೆ ಹೇಳುತ್ತಾನೆ.

"ಗಚ್ಚಿನ ಕಟ್ಟಂತ ಮೆಚ್ಚಿ ಕೂಂಡ್ರಲಿಲ್ಲ
ಉಕ್ಕಿನ ಗುಂಡ ಎಸದಾನ। ಬಾಬಾಸಾಬ
ಹಕ್ಕಿಗಾಗಿ ಬಾಯ ಬಿಡತಾನ" ॥

ಬಾಬಾಸಾಹೇಬನು ಅಷ್ಟೇಕ್ಕ ಬಿಡದೆ ಆಂಗ್ಲ ಅಧಿಕಾರಿಯನ್ನೇ ಕೊಲ್ಲುವ ನಿರ್ಧಾರ ಮಾಡುತ್ತಾನೆ. ಅಂದರೆ ಸ್ಥಳೀಯರನ್ನು ಬ್ರಿಟೀಷರು ಎಷ್ಟು ಕೆಟ್ಟದಾಗಿ ನೋಡುತ್ತಿದ್ದರು ಅಲ್ಲದೆ ಎಂತಹ ರಾಜಕೀಯವನ್ನು ಅವರು ಮಾಡುತ್ತಿದ್ದರು. ಎಂದು ತಿಳಿಯುತ್ತದೆ ಆಂಗ್ಲ ಅಧಿಕಾರಿಯಾದ ಮ್ಯಾನಸನ್ ಸಾಹೇಬನನ್ನು ಕೊಂದು, ಅವನ ರುಂಢವನ್ನು ನರಗುಂದದ ಅಗಸೆ ಬಾಗಿಲಿಗೆ ಕಟ್ಟಿದ ಒಂದು ಸನ್ನಿವೇಶವನ್ನು ಲಾವಣಿಗಳು ನಿಜವಾಗಿ ಚಿತ್ರಣ ಮಾಡಿರುವುದು ಕಂಡುಬರುತ್ತದೆ. ಅಲ್ಲದೆ ಬಾಬಾಸಾಹೇಬನನ್ನು ವೀರವತ್ತನನ್ನಾಗಿ ಚಿತ್ರಿಸಿದ್ದಾರೆ.

"ಬಂಟರೆಲ್ಲಾ ಕೂಡಿಕೊಂಡು ಹೊಂಟುಬಂದೂಗಳೇ
ತುಡುಗ ಇಂಗ್ಲೀಷರನ್ನು ಹುಡುಕುತ್ತಾ
ಇದರೀಗೆ ಬಂದವರನ್ನು ಚದುರಿಸಿ ನಡೀತಿದ್ರು
ಬಂದು ಕೊಲ್ಲತಿದ್ರು ಹಲ್ಲ ಕಡಿಯುತ್ತಾ"

ಹೀಗೆ ಬಾಬಾ ಸಾಹೇಬ ಮತ್ತು ಅವನ ಸಹಚರರು ಬ್ರಿಟೀಷ್ ಅಧಿಕಾರಿಯಾದ ಮಾನ್ಸಸನ್ ಹುಡುಕತ್ತ ಹೋಗುತ್ತಿದ್ದ ಎದುರಿಗೆ ಬಂದ ಎಲ್ಲರನ್ನು ಕೊಂದು ಅಧಿಕಾರಿಯನ್ನೇ ಗುರಿಯಾಗಿಟ್ಟುಕೊಂಡು ಹೋಗುತ್ತಿದ್ದನು. ಅಂದರೆ ಅವನ ಆಕ್ರೋಶ ಮತ್ತು ಬ್ರಿಟೀಷರ ಕುರಿತಾಗಿ ಇದ್ದ ಅವನ ಪ್ರತಿರೋಧ ಎಂತದ್ದು ಎಂದು ತಿಳಿಯುತ್ತದೆ. ಇಲ್ಲಿ ಕೇವಲ ಬಾಬಾಸಾಹೇಬ ಮತ್ತು ಮಾನ್ಸನ ಅಷ್ಟೇ ಮುಖ್ಯವಾಗಿ ಕಂಡುಬರುತ್ತಾರೆ. ಇವರ ಮಧ್ಯ ಇರತಕ್ಕಂತ ನರಗುಂಧ ಬಾಬಾಸಾಹೇಬನ ಸಹಚರರು ಮತ್ತು ಇಂಗ್ಲೀಷ್ ಸೈನಿಕರು ಲೆಕ್ಕಕ್ಕೆ ಬರಲಿಲ್ಲ. ಈ ಪ್ರತಿಭಟನೆಯಲ್ಲಿ ಎರಡು ಬಣಗಳಿಂದ ಎಷ್ಟೋ ಸೈನಿಕರು ಹೋರಾಟ ಮಾಡಿದ್ದಾರೆ. ಯಾವುದೇ ಚರಿತ್ರೆಯಾಗಲಿ ಅಥವಾ ಲಾವಣಿಯಾಗಲಿ ಅವರ ಬಗ್ಗೆ ಗಮನ

ಕೊಡುವುದಿಲ್ಲ ಅಂದರೆ ಸೈನಿಕರು ಅಮುಖ್ಯವಾಗಿ ಕಂಡುಬರುತ್ತಾರೆ. ಅಂದರೆ ಇಲ್ಲಿ ವರ್ಗ ತಾರತಮ್ಯ ಇಂದು ಅಷ್ಟೇ ಅಲ್ಲ ಅವತ್ತು ಇತ್ತು ಎಂದು ತಿಳಿಯುತ್ತದೆ.

ಬಾಬಾಸಾಹೇಬನ ಪ್ರತಿರೋಧಕ್ಕೆ ಹೆದರಿ ಇಂಗ್ಲೀಷ್ ಅಧಿಕಾರಿಯಾದ ಮ್ಯಾನಸನ ಇವನಿಗೆ ಹೆದರಿ ಅಡಗಿಕೊಂಡು ಕುಳಿತಿರುವ ಒಂದು ದೃಶ್ಯವನ್ನು ಲಾವಣಿಕಾರ ಎಷ್ಟೋಂದು ಸ್ವಾರಸ್ಯವಾಗಿ ಚಿತ್ರಿಸುತ್ತಾನೆ.

"ಗದ್ದಲದಾಗ ತಾ ಎದ್ದು ಓಡಿ ಹೋಗಿ ಮ್ಯಾನಸನ
ಅಡಗಿದಾ ಗಡಗಡಾ ನಡಗುತ
ಮಾರುತಿ ಗುಡಿಯೊಳಗೆ ಅಡಗಿಕೊಂಡು ಗುಡಿ
ಜಂತಿ ಹಿಡಿದ ಬಿದ್ದಾನೋ ಜೋತಾ
ವೀರ ಅಭಿಮನ್ಯು ರಣದಾಗ ಹೊಕ್ಹಾಂಗ
ಎಷ್ಟು ಹೊಕ್ಕನಪ್ಪ ಹುಡುಕುತಾ
ತೊಗುಬಾವಲಿ ಹಾಂಗ ಜೋತಾಡೋ ಹಾಡಿನ
ಜಗ್ಗಿ ಕೆಡವಿದ ಹಲ್ಲ ಕಡಿಯುತಾ"

ಹೀಗೆ ಬಾಬಾಸಾಹೇಬನ ತೀವ್ರವಾದ ಆಕ್ರೋಶಕ್ಕೆ ಇಂಗ್ಲೀಷ್ ಅಧಿಕಾರಿಯಾದ ಮ್ಯಾನಸನನು ಹೆದರಿ ದೇವಸ್ಥಾನದ ಒಳಗಡೆ ಅಡಗಿಕೊಳ್ಳುತ್ತಾನೆ. ಚರಿತ್ರೆಯಲ್ಲಿ ಬೇರೆ ತೆರನಾಗಿ ಹೇಳಲಾಗುತ್ತದೆ. ಅಂದರೆ ಬಾಬಾಸಾಹೇಬನು ಮ್ಯಾನಸನನ್ನು ಹುಡುಕಿಕೊಂಡು ಹೋಗಿ ಅವನ ಸೈನಿಕರನ್ನು ಕೊಂದಾದ ಮೇಲೆ ವಿಶ್ರಾಂತಿ ತೆಗೆದುಕೊಳ್ಳಲು ಮಲಗಿದ್ದ ಮ್ಯಾನಸನ ಅಧಿಕಾರಿ ಯುದ್ಧದ ಸೌಂಡಿಗೆ ಎಚ್ಚರಾಗಿ ಕತ್ತಲಲ್ಲಿ ಗುಂಡನ್ನು ಹಾರಿಸುತ್ತಾನೆ. ಎಂದು ಅದರಲ್ಲಿ ಹೇಳಿದರೆ ಲಾವಣಿಯಲ್ಲಿ ಬಾಬಾಸಾಹೇಬನಿಗೆ ಮ್ಯಾನಸ್ಸನನ್ನು ಹೆದರಿ ದೇವಸ್ಥಾನದಲ್ಲಿ ಕುಳಿತಿರುತ್ತಾನೆ ಎಂದು ಹೇಳಲಾಗಿದೆ. ಅಂದರೆ ಚರಿತ್ರೆಯನ್ನು ನಿರ್ಮಾಣ ಮಾಡಿದವರು ಅವತ್ತು ಬ್ರಿಟೀಷ್ ಪರವಾಗಿರುವುದರಿಂದ ಅವರು ಮ್ಯಾನಸನ್ ಅಧಿಕಾರಿಯನ್ನು ಹೇಡಿಯಾಗಿ ಚಿತ್ರಿಸಲು ಅವರ ಮನಸ್ಸು ನಿರಾಕರಿಸಿರಬಹುದು. ಇಲ್ಲಿ ಸ್ಥಳೀಯ ಲಾವಣಿಕಾರರಿಗೆ ಬಾಬಾಸಾಹೇಬನನ್ನು ಹೇಡಿಯಾಗಿ ಚಿತ್ರಿಸದೆ ಅವನೊಬ್ಬ ಶೂರ ಧೀರ ಎಂದು ಹೇಳಿ ತಮ್ಮ ಋಣವನ್ನು ತೀರಿಸಿಕೊಂಡಿರಬಹುದು. ಅಂದರೆ ಇಲ್ಲಿ ಎರಡು ಬಣಗಳು ತಮ್ಮ ತಮ್ಮ ಪರವಾಗಿದ್ದ ನಾಯಕರನ್ನು ಬಿಟ್ಟುಕೊಡದೇ ಅವರನ್ನು ವೈಭವಪೂರ್ಣವಾಗಿ ಹೊಗಳಿರಬಹುದು ಎಂದು ತಿಳಿಯುತ್ತದೆ. ಕೊನೆಗೆ ಮ್ಯಾನಸನ್ ಅಧಿಕಾರಿ ಬಾಬಾಸಾಹೇಬ ಮತ್ತು ವಿಷ್ಣು ಕುಲಕರ್ಣಿ ಎಂಬ ತರುಣವೀರನಿಂದ ಹೇಗೆ ಘೋರ ಮರಣಕ್ಕೆ ಒಳಗಾದನು ಎಂದು ಲಾವಣಿಕಾರ ಹೀಗೆ ಹೇಳುತ್ತಾನೆ.

ಮ್ಯಾನಸನ್ ಕಾಲಿಗೆ ಬಿದ್ದಕ್ಷಮಾ ಬೇಡತಿದ್ದ
ಮಾಡಿ ನಮಸ್ಕಾರ। ಜೀವದಾನ ಮಾಡಿದರ ಘೋರ
ಅಹೇಡಿ ಅಂದ ವಿಷ್ಣು ನಾತ ಒದ್ದ ಜುಬ್ಬಾ ಹಿಡಿದಿದ್ದ

ರುದ್ರನವತಾರ ರುಂಡಾ ಹಾರಿಸಿದನು ಗಂಭೀರಾ
ಪ್ರಾಣದಾನ ಬೇಡಿದ್ದಕ್ಕ ಮಾನ ಕೊಡಬೇಕೆಂದ
ದೊರಿ ವಿಷ್ಣುಗ ಬರಲಿಲ್ಲ ಸರಿ ಬಂದ ಚೂರಾ
ಆದರೇನು ಸುತ್ತಹುಲಿ ಹತ್ತು ನಡುಕ
ಬಂದು ಕುರಿಯ ಸಿಕ್ಕುಬಿತ್ತು
ಗುಂಡ ಹಾರಿಸತಾನ ಸುತ್ತಮುತ್ತು ಮಾನ
ಸನ್ನ ಕರಾಗತಾನ ನಿಂತು
ಆಗ ಬಾಬಾಸಾಯ್ಬ ಹೇಳ್ತಾನ ಮತ್ತು ನುಚ್ಚು
ಹರಿಮರಿಯಾಗಲಿ ಈ ಹೊತ್ತು
ಬಾಬಾಸಾಹೇಬನ ನುಡಿಗವಿಗೆ ಬಿತ್ತು
ಮ್ಯಾನಸನ್ನನ ಕೆಲಸ ಮುಗಿದು ಹೋತು
ವಿಷ್ಣು ಕುಲಕರ್ಣಿ ಎಂಬ ತರುಣವೀರ
ಕದಾ ಒದ್ದನು ದಡಾಧಡಾ ಸೆಡ್ಡಾ ಕಳ್ಳ
ಅಡಗಿ ಕುಂತೀ ಯುದ್ಧಕ ಬಾರೋಗಡಾ
ಮಾನಸನ್ನನ ಗತಿ ಮೊದಲ ಮುಗಿದು
ಹೋಗಿತ್ತೋ ಮುಲ್ಯಾಗ ಕುಂತು ನಡಗತಿದ್ದ
ಮೂಡಾ ವಿಷ್ಣು ಎಳದು ತಂದು ಮ್ಯಾನಸನ್ನಂದು
ಕೊಯ್ದು – ರೂಂಡಾ!

ಹೀಗೆ ಲಾವಣಿಕಾರನು ಮ್ಯಾನಸನ್ನನ ಕೊಲೆಯ ಪ್ರಸಂಗವನ್ನು ಹಲವಾರು ವಿಧದಲ್ಲಿ ಚಿತ್ರಿಸಿದ್ದಾನೆ.

"ಒಂದು ಹಾಡಿನಲ್ಲಿ ಪ್ರಾಣದಾನ ಕೊಡಬೇಕೆಂದು ಹೇಳುವ ಬಾಬಾಸಾಹೇಬನ ಮುತ್ಸದ್ದಿತನ ಪ್ರಕಟವಾಗಿದ್ದರೆ, ಇನ್ನೊಂದು ಹಾಡಿನಲ್ಲಿ ಬಾಬಾಸಾಹೇಬನೇ ನುಚ್ಚು ಹರಿಮುರಿಯಾಗಲಿ ಈ ಹೊತ್ತು ಎಂದು ತನ್ನ ಸೈನಿಕರಿಗೆ ಆದೇಶಕೊಡುವಲ್ಲಿಯ ಸೇಡಿನ ಮನೋಭಾವ ಪ್ರಕಟವಾಗಿರುವುದನ್ನು ಗಮನಿಸಬಹುದು."

ಇಷ್ಟನ್ನು ನರಗುಂದ ಬಾಬಾಸಾಹೇಬನು ಇಂಗ್ಲೀಷರ ಅಧಿಕಾರಿಯಾದ ಮ್ಯಾನಸನನ್ನು ರುಂಡಕತ್ತರಿಸಿ ಕೊಲೆ ಮಾಡಿ ಅವರಿಗೆ ಹೆದರಿ ತನ್ನ ಸಂಸ್ಥಾನವೆ ಬಿಟ್ಟು ಹೋಗಲು ಕಾರಣವೆ ಮುಖ್ಯ ಕಾರಣವಾದದ್ದು ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವ ಬ್ರಟೀಷರ ಕಾಯಿದೆ ಇದನ್ನು ಲಾವಣಿಕಾರ ಹೀಗೆ ಹೇಳುತ್ತಾನೆ.

"ಕರ್ನಾಟಕ ಪ್ರಾಂತದೊಳಗೆ ಸಿರಿನಾಡು ನರಗುಂದ
ಕುಡಕಬ್ಬಿಣ ಆಗಿತ್ತೋ ಬಂಗಾರ
ಪ್ರಜಾ ಅಂದ್ರ ಮಕ್ಕಳಂತೆ ತಿಳಿಯುವರಾ
ರಾಜ್ಯವಾಳುತ್ತಿದ್ದ ಬಾಬಾಸಾಯ್ಬ ಧೀರಾ ನ್ಯಾಯನಿಷ್ಠೂರಾ"

ಎಷ್ಟು ಐಶ್ವರ್ಯವಿದ್ದು ಏನು ಮಾಡುಪದ್ದತಿ ಅವರಿಗಿಲ್ಲ ಸಂತಾನ
ದೇವರಿಲ್ಲದ ಗುಡಿ ನೀರಿರದ ಸರೋವರ
ಆದಾಂನ ಅರಸರ ಜೀವಮಾನ"

ಹೀಗೆ ಬಾಬಾಸಾಹೇಬನ ಭವಿಷ್ಯವನ್ನೇ ಅನುಕಂಪಗೆ ಒಳಗು ಮಾಡಿಕೊಂಡದ್ದು ಲಾವಣಿ ಹಾಡುಗಾರನ ಅನುಭವ ಹಾಗೂ ಔನತ್ಯಕ್ಕೆ ಸಾಕ್ಷಿಯಾಗಿದೆ.

ಸಂತಾನವಿಲ್ಲದ ಈ ಮೂಲಕಾರಣವೇ ನರಗುಂದ ಬಾಬಾಸಾಹೇಬನು ಇಂಗ್ಲೀಷರನ್ನು ಪ್ರತಿಭಟಿಸಿದ ಈ ದುರಂತಕ್ಕೆ ಕಾರಣ ಎಂದು ಹೇಳಬಹುದು. ಹೀಗೆ ಹಣ ಐಶ್ವರ್ಯದಿಂದ ಸಂಪದ್ಭರಿತ ನರಗುಂದ ನಾಲ್ಕು ದಿವಸಗಳ ಅಲ್ಪಕಾಲದಲ್ಲಿಯೇ ನಡೆದ ಬಂಡಾಯ ಇಡೀ ಸಂಸ್ಥಾನವೇ ಬಿಳಿಯರ ಕೈಸೇರಿದ ಕಾತರದ ಸಂಗತಿ ಜನಸಾಮಾನ್ಯರಿಗೆ ಗೊತ್ತಿಲ್ಲದಂತೆಯೇ ನಡೆದು ಹೋದ ದುರಂತದ ಹಾಗೂ ಘೋರ ಪರಿಣಾಮದ ವಿಷಯವನ್ನು ಜಾನಪದರು ಹೃದಯ ಸ್ಪರ್ಶಿಯಾಗಿ ಹೇಳಿದ್ದಾರೆ.

ಯುದ್ಧ ಅಷ್ಟಕ್ಕೆ ನಿಲ್ಲದೆ ಮ್ಯಾನಸನನ ಕೊಂದಿರುವ ಸೇಡನು ತೀರಿಸಿಕೊಳ್ಳಲು ಬ್ರಿಟೀಷರು ಅತಿ ಹೆಚ್ಚು ಸೈನ್ಯದೊಂದಿಗೆ ಬಾಬಾಸಾಹೇಬನನ್ನು ಮುತ್ತಿಗಲೆ ಹಾಕುತ್ತಾನೆ.

ನಂತರ ಯುದ್ಧ ನಡೆದು ಬಿಳಿಯರ ಕೈಯೇ ಮೇಲಾದಾಗ ದಿಕ್ಕೇ ತೋಚದಂತಾದ ಬಾಬಾಸಾಹೇಬನ ಮಾನಸಿಕ ಸ್ಥಿತಿಯನ್ನು ಹಾಡುಗಳು ವಿವರಿಸುತ್ತವೆ.

ಕತ್ತಿಕಠಾರಿ ಬಗೆದು ಪ್ರಾಣಧಾನಕ್ಕಾಗಿ ಕೈಯೊಡ್ಡಿದ ಸೈನಿಕರು, ತಮ್ಮ ಹೆಂಡಿರು ಮಕ್ಕಳನ್ನು ನೆನೆಸಿ ಬಾಯಲ್ಲಿ ಹುಲ್ಲುಕಡ್ಡಿ ಕಚ್ಚಿ ನಿಂತ ಕರಾಳ ದೃಶ್ಯವೂ ಆತನ ಕಣ್ಣಿಗೆ ಬಿತ್ತು. ಮಾಡುವುದೇನು? ಎಲ್ಲವೂ ಕೈಮೀರಿ ಹೋಗಿತ್ತು. ತನ್ನ ಕುಲದೇವರು ವೆಂಕಟಸ್ವಾಮಿಯನ್ನು ನೆನೆಯುತ್ತ ತನ್ನ ಕೋಟೆಯೊಳಕ್ಕೆ ಹೋಗಲು ಬಂದ ಆದರು ಅವನ ಮಾನಸಿಕ ಸ್ಥಿತಿ ಅಸ್ತವ್ಯಸ್ಥ ಆಗಿದ್ದರಿಂದ ಅವನು ಕೋಟೆಯೊಳಗಡೆ ಹೋಗಲಿಲ್ಲ.

"ಮುಚ್ಚಿ ಕ್ವಾಟಿ ಬಾಗೂ ತೆಗೆಯಲಿಲ್ಲ
ಹುಚ್ಚನಾಗಂ ದೊರಿ ವಿತ್ತೋ ಹೊದನಣ್ಣ

ಹೀಗೆ ಬಾಬಾಸಾಹೇಬನು ಬ್ರಿಟೀಷರು ದತ್ತು ಮಗುವನ್ನು ತೆಗೆದುಕೊಳ್ಳಲು ಅನುಮತಿ ಕೊಡದೆ ಇರದಿದ್ದರಿಂದ ಅವರನ್ನು ತುಂಬಾ ಗೋರವಾಗಿ ಪ್ರತಿಭಟಿಸಿ ಕೊನೆಗೆ ಹುಚ್ಚನಂತಾಗಿವು ಒಂದು ಚಿತ್ರಣವನ್ನು ಲಾವಣಿಕಾರನು ಓದುಗರ ಮನಮಿಡಿದಂತೆ ಚಿತ್ರಿಸುತ್ತಾನೆ. ಅಂದರೆ ಲಾವಣಿಕಾರರು ಸ್ವಲ್ಪ ಸ್ಥಳೀಯ ನಾಯಕರನ್ನು ಕುರಿತು ವೈಭವಪೂರ್ವಕವಾಗಿ ಚಿತ್ರಿಸಿರುವುದು ಕಂಡುಬರುತ್ತದೆ. ಅಂದರೆ ಲಾವಣಿಕಾರನು ಲಾವಣಿಯನ್ನು ರಚನೆ ಮಾಡಿರುವ ಉದ್ದೇಶ ಬ್ರಿಟೀಷರ ವಿರುದ್ಧವಾಗಿ ಜನರನ್ನು ಎತ್ತಿಕಟ್ಟುವುದು ಮತ್ತು ಜನರನ್ನು ಸಂಘಟಿಸುವ ಉದ್ದೇಶವಾಗಿರುವುದರಿಂದ ಜನರ ಭಾವನೆಯಲ್ಲಿ ಇಂತಹ ನಾಯಕರ ಕುರಿತು. ಕನಿಕರ, ಬರುವ ಸಲುವಾಗಿ ಹೀಗೆ ಚಿತ್ರಿಸಿರುತ್ತಾರೆ.

ಇಲ್ಲಿ ತನಕ ನರಗುಂದ ಬಾಬಾಸಾಹೇಬನ ಪ್ರತಿರೋಧವನ್ನು ಕುರಿತು ತಿಳಿಯಲಾಯಿತು. ಇನ್ನು ಇದೇ ತೆರನಾಗಿ ದತ್ತು ಮಕ್ಕಳಿಗೆ ಹಕ್ಕಿಲ್ಲ ಕಾಯಿದೆಯ ವಿರುದ್ಧ ಹೋರಾಡಿದ ಇನ್ನೊಂದು ಸಂಸ್ಥಾನ ಕಿತ್ತೂರು ಸಂಸ್ಥಾನ ಈ ಸಂಸ್ಥಾನದ ರಾಣಿ ಚೆನ್ನಮ್ಮ ಈ ಕಾಯಿದೆಯ ವಿರುದ್ಧ ಬ್ರಿಟೀಷರ ಜೊತೆ ಹೇಗೆ ಹೋರಾಡಿದಳು ಎನ್ನುವುದನ್ನು ಅವಳ ಕುರಿತಾದ ಲಾವಣಿಗಳ ಚಿತ್ರಿಸುತ್ತವೆ. ಹೀಗಾಗಿ ಲಾವಣಿಯ ಮೂಲಕ ಈ ಪ್ರತಿರೋಧವನ್ನು ಕುರಿತು ತಿಳಿಯೋಣ.

**ಕಿತ್ತೂರ ಚೆನ್ನಮ್ಮ**

ಭಾರತೀಯ ರಾಜಕೀಯ ಹಾಗೂ ಐತಿಹಾಸಿಕ ವೀರ ಪರಂಪರೆಗಳಿಗೆ ಕಿತ್ತೂರು ಚೆನ್ನಮ್ಮನ ಸಾಹಸ ಅಗ್ರಗಣ್ಯವಾಗಿದೆ. ಭಾರತೀಯತ್ವದಲ್ಲಿಯೇ ಪ್ರಪ್ರಥಮವಾಗಿ ವಸಹಾತುಶಾಹಿಗಳನ್ನು ಎದುರಿಸಿ, ರಾಜಕೀಯ ಮಹತ್ವ ಹಾಗೂ ಪಾರತಂತ್ರ್ಯದ ಅವನತಿಯನ್ನು ತೋರಿಸಿದ ಧೀರ ಮಹಿಳೆಯಾದವಳು. ಆದರೆ ಆಂಗ್ಲ ಅಧಿಕಾರಿಗಳ ಏಕಮುಖವಾದ ದಾಖಲೆಗಳನ್ನೇ ಇತಿಹಾಸದ ಸಾಮಾಗ್ರಿಗಳನ್ನಾಗಿ ಸ್ವೀಕರಿಸಿದ್ದರಿಂದ ಕಿತ್ತೂರಿನ ಅನೇಕ ಸತ್ಯಾಂಶಗಳು ಮರೆಮಾಚಿ ಹೋದಂತೆ ಗೋಚರಿಸುತ್ತದೆ. ಹಾಗಾಗಿ ಆದರೆ ಜನಪದಕಾರರು ಆ ಎಲ್ಲ ಕೊರತೆಯನ್ನು ತುಂಬಿರುವುದು ತಿಳಿದುಬರುತ್ತದೆ. ಅದರಲ್ಲೂ ಲಾವಣಿ ಸಾಹಿತ್ಯದಲ್ಲಿ ಇಡೀ ಇದರ ಇತಿಹಾಸವನ್ನು ಹಿಡಿದಿಡಲು ಪ್ರಯತ್ನ ಮಾಡಿರುವುದು ಕಂಡುಬರುತ್ತದೆ.

ಕಿತ್ತೂರಿನ ಮೈನವಿರೇಳಿಸುವ ಘಟನೆಗಳು ಯುದ್ಧ ತಯಾರಿಗಳು ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವ ಬ್ರಿಟೀಷರ ರಾಜಕೀಯ ನೀತಿಯನ್ನು ವಿರೋಧಿಸಿದ ಕಿತ್ತೂರು ಯೋದರ ತಪ್ತೊಳ ಬೇಗುದಿಗಳೆಲ್ಲವೂ ಅವುಗಳಲ್ಲಿ ಹೊತ್ತಿ ಉರಿಯುತ್ತಿವೆ. ಕಿತ್ತೂರು ಕುರಿತ ಲಾವಣಿಸಾಹತ್ಯವು ಎಲ್ಲ ಪ್ರಕಾರಗಳಿಗಿಂತಲೂ ಮುಖ್ಯವಾದ ಮಾಧ್ಯಮವಾಗಿ ಕಂಡುಬರುತ್ತದೆ ಕಿತ್ತೂರಿನ ಸಮಗ್ರ ಇತಿಹಾಸದ ಏರುಪೇರುಗಳನ್ನೆಲ್ಲ ಅರ್ಥವತ್ತಾಗಿ ಲಾವಣಿ ಸಾಹಿತ್ಯ ತನ್ನ ಮಡಿಲಲಿ ಹುದುಗಿಸಿಕೊಂಡಿದೆ. ಅಂದಿನ ಧೀಮಂತ ದೊರೆ ವೀರಪ್ಪದೇಸಾಯಿ, ಮಲ್ಲಸರ್ಜ, ಚೆನ್ನಮ್ಮ ಹಾಗೂ ಸಂಗೋಳ್ಳಿರಾಯಣ್ಣ, ಬಿಚ್ಚಗತ್ತಿ ಚೆನಬಸಪ್ಪ ಕಟ್ಟೆ ಚೆನ್ನ, ಅಮಟೂರಬಾಳಪ್ಪ ಮುಂತಾದ ಸುಮಾರು ೨೦-೩೦ ಜನ ಬ್ರಿಟೀಷರ ರಾಜಕೀಯ ನೀತಿಯನ್ನು ವಿರೋಧಿಸಿ ಹೋರಾಡಿದ ಧೀಮಂತಗಳನ್ನು ಈ ಸಾಹಿತ್ಯ ತನ್ನ ಮಡಿಲಿಲ್ಲ ಹಿಡಿದಿಟ್ಟಿದೆ.

ಒಟ್ಟಿನಲ್ಲಿ ಶಿವಲಿಂಗ ರುದ್ರಸರ್ಜನ ನಂತರ ಕಿತ್ತೂರಿನ ಸಂಸ್ಥಾನಕ್ಕೆ ಒದಗಿದ ದತ್ತಕ ಪ್ರಸಂಗ, ಇದಕ್ಕೋಸ್ಕರ ರಾಣಿಚೆನ್ನಮ್ಮ ಎದುರಿಸಿದ ಅನೇಕ ರಾಜಕೀಯ ಸಮಸ್ಯೆಗಳು ಎದುರಾದ ಅದೆಷ್ಟೋ ಪ್ರಸಂಗಗಳನ್ನು ಈ ಲಾವಣಿ ಸಾಹಿತ್ಯ ಪ್ರತಿಬಿಂಬಿಸುತ್ತದೆ.

"ದೇಶಗತಿಗೆ ವಾರಸ ಇಲ್ಲದಕ ಮಸಲತನಡದೀತ
ದತ್ತಕ ತಗೊಳ್ಳದಕ।
ದ್ವೇಷ ಹುಟ್ಟಿ ಸಂಸ್ಥಾನ ಆತ ಒಡಕು ಮೋಸಗಾರಿಕೆ
ಸಾಧಿಸಿತ ಸಮಯಕ್ಕ"

ಮಲ್ಲಿಸರ್ಜಸನ ನಿಧನದ ನಂತರ ಅವನ ಮಗ ಶಿವಲಿಂರುದ್ರಸರ್ಜ ಕಿತ್ತೂರಿನ ಅಧಿಪತಿಯಾದವನು ಆದರೆ ಅವನಿಗೆ ಆರೋಗ್ಯ ಆಗಾಗ ತೊಂದರೆ ಕೊಡುತ್ತಿತ್ತು ಅದಕ್ಕಾಗಿ ಕಿತ್ತೂರಿನ ರಾಜ ಶಿವಲಿಂಗರುದ್ರಸರ್ಜ ಮತ್ತು ಚೆನ್ನಮ್ಮ ದತ್ತಕ ಮಗುವವನ್ನು ಸ್ವೀಕರಿಸುವುದೆಂದು ತೀರ್ಮಾನಿಸಿದ್ದರೂ ಆದರೆ ಬ್ರಿಟೀಷರಿಗೆ ತಿಳಿಸಲಿಲ್ಲ. ಕಿತ್ತೂರೊ ಮನೆತನಕ್ಕೆ ಸೇರಿದ ೪-೫ ಮಕ್ಕಳ ಬಗ್ಗೆ ತಿಳಿದುಕೊಂಡು ಬಂದರು ಅವರಲ್ಲಿಯೇ ಒಬ್ಬನನ್ನು ಆರಿಸಿ ದತ್ತಕ ಸ್ವೀಕರಿಸಬೇಕೆಂದು ತಿರ್ಮಾನವಾಯಿತು ಅವರಲ್ಲಿ ಮಾಸ್ತಮುರಡಿ ಬಾಳಪ್ಪಗೌಡನ ಮಗ ಶಿವಲಿಂಗಪ್ಪನನ್ನು ಆರಿಸಿದರು ಆನಂತ ಕೆಲವು ದಿನಗಳು ಕಳೆದವು ೧೦ ಜುಲೈ ೧೮೨೪ರಂದು ಶಿವಲಿಂಗ ರುದ್ರಸರ್ಜನು ಧಾರವಾಡದಲ್ಲಿದ್ದ ಬ್ರಿಟೀಷ್ ಅಧಿಕಾರಿ ಥ್ಯಾಕರೇ ಸಾಹೇಬಗೆ ತನ್ನ ದತ್ತಕ ಸ್ವೀಕಾರದ ಬಗೆಗೆ ತಿಳಿಸಲು ಒಂದು ಪತ್ರ ಸಿದ್ಧಪಡಿಸಿದನು ಆದರೆ ಅದನ್ನು ಕಳಿಸಿರಲಿಲ್ಲ ಆದರೆ ಒಂದು ದಿನ ದತ್ತಕ ಸಮಾರಂಭ ನಡೆದು ನಂತರ ಶಿವಲಿಂಗರುದ್ರಸರ್ಜ ಬರೆಸಿದ ಪತ್ರವನ್ನು ಥ್ಯಾಕರೆ ಸಾಹೇಬನಿಗೆ ಮುಟ್ಟಿಸಲು ಬನ್ನೂರಮಲ್ಲಪ್ಪನನ್ನು ಧಾರವಾಡಕ್ಕೆ ರಾಣಿ ಚೆನ್ನಮ್ಮ ಕಳಿಸುತ್ತಾಳೆ. ಮಲ್ಲಪ್ಪಶೆಟ್ಟಿ ಬನ್ನೂರಮಲ್ಲಪ್ಪ ದುಷ್ಟರೆಂದು ಚೆನ್ನಮ್ಮಳಿಗೆ ಪತ್ರ ಮುಟ್ಟಿಸಲ್ಲದೆ ಅದಕ್ಕಿಂತ ಹೆಚ್ಚಾಗಿ ಬ್ರಿಟೀಷ್ ಅಧಿಕಾರಿಗೆ ಕಿತ್ತೂರಿನ ಕುರಿತ ಇಲ್ಲ ಸಲ್ಲದ ಚಾಡಿ ಹೇಳಿ ಬಂದಿದ್ದರು.

ಹೀಗೆ ಕಿತ್ತೂರು ಸಂಸ್ಥಾನದಲ್ಲಿ ಪ್ರಾರಂಭದಲ್ಲಿ ಒಡಕು ಹುಟ್ಟಿರುವುದನ್ನು ಅದು ದತ್ತು ತೆಗೆದುಕೊಳ್ಳುವುದರಲ್ಲಿ ತೆಗೆದುಕೊಂಡ ನಿರ್ಧಾರ ಇಡಿ ಅರಮನೆಯಲ್ಲಿ ಒಡಕು ಹುಟ್ಟಿ ಮುಂದೆ ಒಂದು ದಿನ ಬ್ರಿಟೀಷರನ್ನು ಮತ್ತು ಅವರ ಜೊತೆ ನೇರವಾದ ಪ್ರತಿಭಟನೆ ಮಾಡುವುದಕ್ಕೆ ಕಾರಣವಾಯಿತು.

"ಸಂಸ್ಥಾನಕ ಸಾಂತಾನ ಇಲ್ಲದಕ
ದತ್ತಕ ಮಾಡಿ ವ್ಯವಸ್ಥಾನಡಿಸಿದ್ಲ
ದತ್ತಕ ಸುಳ್ಳಂತ ಬ್ರಿಟೀಷರು ಬರೆದ
ಪತ್ರ ನೋಡಿ ಪ್ರತಿಭಟನೆ ಮಾಡಿದಳು"

ಹೀಗೆ ಮಲ್ಲಪ್ಪಶೆಟ್ಟಿ ಮತ್ತು ಬನ್ನೂರ ಮಲ್ಲಪ್ಪ ಇವರ ಕುತಂತ್ರದ ಪ್ರತಿಫಲವಾಗಿ ಬ್ರಿಟೀಷ ಅಧಿಕಾರಿಯಾಧ ಥ್ಯಾಕರೆಯು "ದತ್ತು ಮಕ್ಕಳಿಗೆ ಹಕ್ಕಿಲ್ಲ" ಸಂಸ್ಥಾನದ ಜವಾಬ್ದಾರಿಯನ್ನು ಅವರ ಮಕ್ಕಳು ಮತ್ತು ಮೊಮ್ಮಕ್ಕಳು ಮಾತ್ರ ನೋಡಿಕೊಳ್ಳಬೇಕು ಇಲ್ಲದಿದ್ದರೆ ಅದು ಬ್ರಿಟೀಷ್ ಆಡಳಿತಕ್ಕೆ ಸೇರಿಕೊಳ್ಳುತ್ತದೆ. ಎಂದು ಹೇಳಿದಾಗ ಅದನ್ನು ವಿರೋಧಿಸಿ. ಕಿತ್ತೂರು ಚೆನ್ನಮ್ಮ ಬ್ರಿಟೀಷರ ವಿರುದ್ಧ ರಣಕಹಳೆಯನ್ನು ಉದುತ್ತಾಳೆ. ನೋಡಿ ಇಲ್ಲಿಯು ಅಷ್ಟೇ ಕಿತ್ತೂರು ಅರಮನೆಗೆ ದತ್ತು ತೆಗೆದುಕೊಳ್ಳುವುದನ್ನು ತಪ್ಪಿಸಿರುವುದಲ್ಲ ಬ್ರಿಟೀಷರು ಅಷ್ಟೇ ಕಾರಣರಲ್ಲ ಅವರಿಗಿಂತ ಹೆಚ್ಚಾಗಿ ಮಲ್ಲಪ್ಪಶೆಟ್ಟಿ ಮತ್ತು ಬನ್ನೂರಮಲ್ಲಪ್ಪ ಮುಖ್ಯಕಾರಣ ಎಂದು ಅನಿಸುತ್ತದೆ. ಆದರೆ ಚರಿತ್ರೆಯಲ್ಲಿ ಇವರನ್ನು ಗುರುತಿಸುವುದೇ ಇಲ್ಲ ಕೇವಲ ಬ್ರಿಟೀಷ್ ಆಡಳಿತ ಅವರಿಗೆ ಹೆಚ್ಚು ಪ್ರಾಸಸ್ತ ಕೊಟ್ಟು ಚರಿತೆಯನ್ನು ಬರೆಯಲಾಗುತ್ತದೆ. ಅಲ್ಲದೆ ಕಿತ್ತೂರಿಗೆ ದುಸ್ತಿತಿ ಬರಲಿಕ್ಕೆ

ಕೇವಲ ಬ್ರಿಟೀಷರೇ ಕಾರಣ ಎನ್ನುವುದನ್ನು ಚರಿತ್ರೆ ಮತ್ತು ಲಾವಣಿ ಎರಡು ಅದನ್ನೇ ಒತ್ತಿಒತ್ತಿ ಹೇಳುತ್ತವೆ. ಅದಕ್ಕಿಂತ ಹೆಚ್ಚಾಗಿ ಮುಖ್ಯ ಕಾರಣರಾದ ಈ ಇಬ್ಬರು ಸ್ಥಳೀಯರನ್ನು ಮತ್ತು ಅವರ ಒಂದು ರಾಜಕೀಯ ಕುತಂತ್ರವನ್ನು ಎಲ್ಲಿಯೂ ಗಟ್ಟಿಯಾಗಿ ಹೇಳುವುದಿಲ್ಲ ಹೀಗಾಗಿ ಚರಿತ್ರೆಯಾಗಲಿ ಲಾವಣಿಯನ್ನು ಏಕಮುಖವಾದ ವಿಷಯವನ್ನು ಸಂಗ್ರಹಿಸಿದಾವೆ ಎಂದು ಅನಿಸುತ್ತದೆ.

ಕಿತ್ತೂರು ಚೆನ್ನಮ್ಮನಿಗೆ ಸಿಟ್ಟು, ಆಕ್ರೋಶ ಮತ್ತು ಬ್ರಿಟೀಷರ ಕುರಿತಾಗಿ ಇದ್ದ ಅವಳ ಧೋರಣೆ ಮತ್ತು ನನ್ನ ರಾಜ್ಯದ ನಿರ್ಧಾರವನ್ನು ತೆಗೆದುಕೊಳ್ಳುವ ಅಧಿಕಾರ ನಮಗಿರುವುದು ಆದರೆ ಇದನ್ನು ಕೇಳಲು ಬ್ರಿಟೀಷರು ಯಾರು ಎನ್ನುವ ಪ್ರಶ್ನೆಯು ಅವಳಲ್ಲಿ ಮೂಡಿ ಅವಳು ಚಾಮುಂಡಿಯ ಅವತಾರವನ್ನು ತಾಳಿರುವುದನ್ನು ಲಾವಣಿಕಾರ ಹೀಗೆ ಹೇಳುತ್ತಾನೆ.

"ಚಂಡಿಯೋ ಚೌಡಿಯೋ ಮಾರಿಯೋ। ಮಸಣಿಯೋ।
ಖಂಡಿತ ಮಾನವಳಿವಳಲ್ಲಾ ।
ಪುಂಡರಕ್ಕಸರ ರುಂಡನ ತರಿವಳು। ಚಾಮುಂಡಿಯೆ। ಇವಳು ಬೆರೆಲ್ಲಾ"

ಹೀಗೆ ಅವಳ ವೀರಶ್ರೀಯನ್ನೇ ಹೆಪ್ಪುಗೊಳಿಸಿದ್ದಾನೆ. ಲಾವಣಿಗಳ ಅಷ್ಟೇ ಅಲ್ಲ ಅವಳ ಪ್ರತಿಭಟನಾ ಸ್ವರೂಪ ಮತ್ತು ಅವಳ ಆಕ್ರೋಶವನ್ನು ನೋಡಿದ ಸಂವೇಧನಾಕಾರ ಅವಳನ್ನು ಚಾಮುಂಡಿ ದೇವತೆಗೆ ಹೋಲಿಸಿರುವುದು ಅವಳನ್ನು ವೈಭವೀಕರಣದ ಹಿನ್ನೆಲೆಯಲ್ಲಿ ನೋಡಲು ಇಂತಹ ಲಾವಣಿ ಪ್ರಮುಖ ಕಾರಣವಾಗಿರುವುದು ಕಂಡುಬರುತ್ತದೆ.

ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂದು ಥ್ಯಾಕರೆ ಪತ್ರ ಬರೆದಾಗ ಅದಕ್ಕೆ ಚೆನ್ನಮ್ಮ ಕೊಟ್ಟ ಉತ್ತರದಿಂದ ಅವಳಿಗೆ ತನ್ನ ರಾಜ್ಯದ ಮೇಲೆ ಇದ್ದ ಅಧಿಕಾರ ಮತ್ತು ಹಕ್ಕು ಬದ್ಧತೆ ಎಂತದು ಎನ್ನುವುದು ತಿಳಿಯುತ್ತದೆ.

"ಉಟಕ ನಿನಗ ಪೇಸಟಗಿ ಕೊಡತೀನ ಕ್ವಾಟಿಯ
ಬಿಡ ಅಂತ ಬ್ರಿಟೀಷರ್ಹೇಳಿದಾಗ
ನಿಷ್ಠಾವಂತಿ ತಾ ದಿಟ್ಟತನದಿಂದ
ಘಟ್ಟಗಳಾಗಿ ಕೊಟ್ಟಾಳ ಉತ್ತರ
ಚಾಕರಿ ಮಾಡುವ ಥ್ಯಾಕರೆ ಸಾಹೇಬ
ಕಾಕಬುದ್ಧಿಯಿಂದ ಕಾರಬಾರ ನಡೆಸಿದ್ದ
ಆ ಕಾಲಕ್ಕೆ ಸಾಕಷ್ಟು ಸೈನ್ಯ ಕೂಡ್ಗಿ
ಬೇಕಂತ ಆತನ ಸೊಕ್ಕ ಮುರಿಸಿದಳ"

ಬ್ರಿಟೀಷ್ ಅಧಿಕಾರಿಯಾದ ಥ್ಯಾಕರೆ ಬುದ್ಧಿಯನ್ನು ಕಾಕಬುದ್ಧಿ ಎಂದು ಹೇಳುವುದರ ಮೂಲಕ ಅವನ ಮತ್ತು ಅವನ ಅಧಿಕಾರವನ್ನು ಅವಳು ದಿಟ್ಟವಾಗಿ ವಿರೋಧಿಸಿರುವುದು ಕಂಡುಬರುತ್ತದೆ. ಇನ್ನು ಅವರ ಅಂದರೆ ಬ್ರಿಟೀಷರ ವಿರುದ್ಧ ಚೆನ್ನಮ್ಮ ಎದ್ದುನಿಂತ ಬಗೆಯನ್ನು ಹೀಗೆ ಹೇಳುತ್ತಾನೆ.

"ಕಾರಣ ತಿಳಕೊಂಡು ಬಿಳಿಮೋರೆಯ ಇಂಗ್ಲೀಷರು
ಧಾರವಾಡದ ತಿಳಸತಿದ್ರ ಸರ್ವವಾರ್ತಿ
ಮಾಸ್ತ ಮರಡಿ ಗೌಡರ ಮಗನ ದತ್ತಕವಾಗಿತ್ತ ಮೊದು
ಇತ್ಯರ್ಥವಾಗುದು ಉಳಿದಿತ್ತು ಸಿಲಲುಕ
ಪೂರ್ತಿಯಾಗುವವರೆಗೆ ಮತ್ತೊಬ್ಬ ಅಧಿಕಾರಿಕೊಟ್ಟ
ಕಿತ್ತೂರ ಕಾರಭಾರದ ಸಹಾಯಕ್ಕೆ
ಆತನ ಕೇಳಿದಲೆ ಕೆಲಸ ಪ್ರತಿಯೊಂದ ನಡಿಸಬಾರದಂತ
ನೋಟೀಸ ಕಳಿಸಿದ್ದಾರಾಗ ದರಬಾರಕ
ಕಿತ್ತೂರ ಕೇಸರಿ ಕೆಚ್ಚೆದಿ ಚೆನ್ನಮ್ಮರಾಣಿಗೆ
ಆಶ್ಚರ್ಯವಾದಿತು ಆ ಕ್ಷಣಕ
ತಡವಿದ ಮಿಡಿನಾಗರ ಹಾವ ಹೆಡೆದೆಗೆದಂತೆ ರಾಣಿ
ಕಿಡಿಕಿಡಿಯಾದಳು ಕ್ರೋಧ ತಡೆಯದಕ
ಗಡಬಡಿಸಿ ದರಬಾರದ ಮುಧಾರಿಗಳನ್ನೆಲ್ಲ ಕರಿಸಿ
ನಡಿಶ್ಯಾಳ ವಿಚಾರಮಾರ್ಗ ಹುಡುಕುದಕ"

ಬ್ರಿಟೀಷ ಅಧಿಕಾರಿ ಥ್ಯಾಕರೆ ಬ್ರಿಟೀಷರ ಅನುಮತಿ ಇಲ್ಲದೆ ಅರಮನೆಯಲ್ಲಿ ಯಾವುದೇ ನೀತಿ ನಿಯಮ ನಿರ್ಧಾರ ಮಾಡುವ ಹಾಗಿಲ್ಲ ಎಂದು ಹೇಳಿದಾಗ ಅವಳಿಗೆ ಆಶ್ಚರ್ಯವಾಗಿ ಅವಳ ವರ್ತನೆಯನ್ನು ಲಾವಣಿಕಾರ ಮಿಡಿನಾಗರ ಹಾವನ್ನು ತಡವಿದಾಗ ಅದು ಹೇಗೆ ಹೆಡೆ ತೆಗೆದು ನಿಲ್ಲುತ್ತದೆ ಹಾಗೆ ರಾಣಿ ಎದೆ ಸೆಟಸಿ ನಿಲ್ಲುವುದನ್ನು ಮತ್ತು ಅವಳ ಕ್ರೋಧದಿಂದ ಮುಂದೆ ಬ್ರಿಟೀಷ್ ವಿರುದ್ಧ ಪ್ರತಿಭಟನೆಗೆ ಸಜ್ಜಗೊಳ್ಳಲಿಕ್ಕೆ ಆಗುವ ತಯಾರಿಯನ್ನು ಲಾವಣಿಕಾರ ಹೇಳುತ್ತಾನೆ.

ನಂತರ ಚೆನ್ನಮ್ಮ ಅಷ್ಟೇ ಅಲ್ಲ ಕಿತ್ತೂರಿನ ಕೆಲವು ಸ್ವಾಭಿಮಾನಿ ಯುವಕರು ಅವಳಿಗೆ ಕೈಜೋಡಿಸುವ ರೀತಿಯನ್ನು ಲಾವಣಿಕಾರ ಹೇಳುತ್ತಾನೆ. ಆದರೆ ಆ ತರುಣರು ಚೆನ್ನಮ್ಮನಿಗೆ ಸಹಾಯ ಮಾಡಿದ್ದನು ಹೇಳುವುದಿಲ್ಲ.

"ಪ್ರತಿಯೊಬ್ಬರ ಹಕ್ಕರು ಹಂಚಿಕೆ
ಸ್ವಾತಂತ್ರಕ ಬಂದಿತ ಧಕ್ಕೆ
ಸಧ್ಯ ತಯಾರಾಗಬೇಕ ಬಹಳ ಜೋಕಿ
ಮದ್ದುಗುಂಡ ತೋಪು ತುಬಾಕಿ
ಸಿದ್ಧ ಮಾಡಿ ಕೊಂಡ ಇಡಬೇಕ ಹುಡುಕಿ"

ನೋಡಿ ಕಿತ್ತೂರಿನ ಪ್ರತಿಯೊಬ್ಬರು ಬ್ರಿಟೀಷರನ್ನು ಹೇಗೆ ಪ್ರತಿಭಟಿಸಬೇಕು ಎಂದು ಸಜ್ಜಗೊಳ್ಳುವ ರೀತಿಯನ್ನು ಲಾವಣಿಕಾರ ಅಲ್ಲಲ್ಲಿ ಹೇಳಿದರೆ ಚರಿತ್ರೆಯಲ್ಲಿ ಚೆನ್ನಮ್ಮನನ್ನು ಮತ್ತು ರಾಯಣ್ಣ ಮುಂತಾದ ಅಲ್ಲಿಬ್ಬರು ಇಲ್ಲೊಬ್ಬರನ್ನು ಕುರಿತು ಹೇಳುತ್ತಾರೆ. ಆದರೆ ಸಂಸ್ಥಾನದ

ಪ್ರತಿಯೊಬ್ಬರು ಚೆನ್ನಮ್ಮನ ಜೊತೆ ನಿಂತರು ಎಂದು ಎಲ್ಲಿಯೂ ಹೇಳುವುದಿಲ್ಲ ಅಂದರೆ ಇಲ್ಲಿ ಮುಖ್ಯವಾದವರನ್ನು ಮಾತ್ರ ಗುರುತಿಸಲಾಗುತ್ತದೆ. ಸ್ಥಳೀಯ ಎಷ್ಟೋ ತರುಣರು ಈ ದುರಂತದಲ್ಲಿ ಭಾಗಿಯಾಗಿರುವುದನ್ನು ಎಲ್ಲಿಯೂ ಹೇಳಲಾಗುವುದಿಲ್ಲ.

ಚೆನ್ನಮ್ಮನು ಬ್ರಿಟೀಷರ ವಿರುದ್ಧ ಹೋರಾಡಲು ಅವಳು ಸ್ಥಳೀಯ ಯುವಕರನ್ನು ಸಹಾಯ ಕೋರಿ ಅವರಿಗೆ ಸ್ಫೂರ್ತಿಯಾಗುತ್ತಾಳೆ. ಅದನ್ನು ಲಾವಣಿಕಾರ ಹೀಗೆ ಹೇಳುತ್ತಾನೆ.

"ಫಿರಂಗ್ಯಾರ ದಂಡಿನ ಕೂಡ ಹುರುಪಿತಿ ಹೊರಾಡುವ ತರುಣರಿಗೆ
ಬರಬೇಕಂತಾಳ ಸ್ಫೂರ್ತಿ
ಲಡಾಯಿ ತಯ್ಯಾರಿ ಸುದ್ದಿಗಡ ತಿಳಿಸಿದರು ಗುಪ್ತಚಾರರು
ಥ್ಯಾಕರೆ ಸಾಹೇಬಗೆ
ಕೂಡಿಸಿ ರುಂಡ ಗರಗದ ಮಾರ್ಗವಾಗಿ ಕಳಿಸಿದ ಭೂಮಿ
ಬಂತ ಖಬರಿಲ್ಲದಾಗ
ಗಂಡುಗಲಿ ಮುಂಡ ಕಿತ್ತೂರನಾಥ ಮುಂಡರು
ಇಂಗ್ಲೇಂಡಕ ದಂಡಿಗೆ ಹೆದರದೆ ಸವರಿದಾಗ"

ತನ್ನ ಶಿನೇಯ ದೇಶೀ ಕಾಲ್ಕಳದ ಸಹಿತ ನರಸಗುಂದದ ಕಡೆಗೆ ಬರಲು ಒಪ್ಪಿದನು. ಈ ಬಂಡಾಯದ ಸಮಯದಲ್ಲಿ ಬ್ರಿಟೀಷ್ ನಾಗರೀಕರ, ನಾಶ, ಊರುಗಳ ಲೂಟಿ, ಭಾಸ್ಕಾರರಾವ್ ಭಾವೆಯ ನಾಯಕತ್ವದಲ್ಲಿ ನಡೆಯಬೇಕೆಂದು ನಿರ್ಧಾರವಾಯಿತು. ಭಾಸ್ಕರರಾಯನ ಸಿದ್ಧತೆಗಳು ಬ್ರಿಟೀಷರ ಗಮನಕ್ಕೆ ಬಂದವು ಆದರೆ ಅವನು ಮೇಲ್ನೋಟಕ್ಕೆ, ಬ್ರಿಟೀಷರೊಡನೆ ಸ್ನೇಹದಿಂದ ವರ್ತಿಸುತ್ತಿದ್ದರಿಂದ ಅವನನ್ನು ಎದುರುಹಾಕಿಕೊಳ್ಳಲು ಬ್ರಿಟೀಷರು ಇಷ್ಟಪಡಲಿಲ್ಲ ಆದರೂ ಸಹಿತ ಬ್ರಿಟೀಷರಿಗೆ ಬಾಬಾಸಾಹೇಬನ ಕುರಿತು ಅಂಜಿಕೆ ಆತಂಕಗಳು ಇದ್ದಿದ್ದರಿಂದ ಅವರು, ನರಗುಂದ ಕೋಟೆಯಲ್ಲಿದ್ದು ೬೮೬ ತೋಪಿನ ಗುಂಡಗಳು ೯೨೪ ಸಣ್ಣ ಗುಂಡುಗಳು ೧೮೦೦ ಪಾಂಡು ಮದ್ದು ಇತ್ಯಾದಿ ಯುದ್ಧ ಸಾಮಾಗ್ರಿಗಳನ್ನು ಧಾರವಾಡಕ್ಕೆ ಕಳುಹಿಸಬೇಕೆಂದು ಭಾಸ್ಕಾರರಾವ್ ಭಾವೆಗೆ ಸೂಚನೆ ನೀಡಿದರು. ಅವನು. ಕೋಟೆಯಲ್ಲಿ ಮೂರು ತೋಪುಗಳನ್ನು ಉಳಿಸಿಕೊಂಡು ಉಳಿದವರನ್ನು ಧಾರವಾಡಕ್ಕೆ ಸಾಗಿಸಲು ಸಿದ್ಧನಾದನು ಆದರೆ ಇವುಗಳನ್ನು ಬ್ರಿಟೀಷರು ಸಾಗಿಸುತ್ತಿದ್ದುಗ ದಾರಿ ಮಧ್ಯದಲ್ಲಿಯೇ ಬಾಬಾಸಾಹೇಬನ ಕಡೆಯ ಜನ ಬ್ರಿಟೀಷರ ಮೇಲೆ ದಾಳಿ ಮಾಡಿ ಶಸ್ತ್ರಗಳನ್ನು ವಶಪಡಿಸಿಕೊಂಡು ಮರಳಿ ನರಗುಂದ ಸಂಸ್ಥಾನಕ್ಕೆ ತಂದು ಒಪ್ಪಿಸಿದರು, ಬಾಬಾಸಾಹೇಬರು ೧೮೫೭ರ ಜೂನಿನಲ್ಲಿಯೇ ಬಂಡಾಯ ಹೂಡಬೇಕೆಂದು ನಿರ್ಧರಿಸಿದರು. ಈ ಸುದ್ದಿ ಬ್ರಿಟೀಷರಿಗೆ ತಲುಪಿತು. ಬ್ರಿಟೀಷ್ ಅಧಿಕಾರಿಗಳಾದ ಜಾಕಬ್ ಮತ್ತು ಮ್ಯನನ್, ಪರಸ್ಪರ ಚರ್ಚಿಸಿ ಬಾಬಾ ಸಾಹೇಬನ ಬಂಡಾಯವನ್ನು ಹತ್ತಿಕ್ಕಿರಲು ನಿರ್ಧರಿಸಿದನು. ಜಾಕಬನ ಸಲಹೆಯಂತೆ ಮ್ಯಾನ್ಸನ್‌ನು ರಾಮದುರ್ಗ ಮತ್ತು ನರಗುಂದ ಸಂಸ್ಥಾನಿಕರನ್ನು ಬಂಡಾಯಗಾರರ ಜೊತೆ ಸೇರದಂತೆ ಮಾಡಲು ರಾಯದುರ್ಗಕ್ಕೆ ಬಂದನು.

ಅಲ್ಲಿ ಭಾಸ್ಕರರಾವ್ ಭಾವೆಯ ಪತ್ರಗಳನ್ನು ನೋಡಿ ಆಶ್ಚರ್ಯಚಕಿತನಾಗಿ ಅವನಿಗೆ ಎಚ್ಚರಿಕೆಯ ಕರಪತ್ರವನ್ನು ಬರೆದು ಕಳುಹಿಸಿದನು.

ಮ್ಯಾನ್ಸನ್ನ ಪತ್ರ ನೋಡಿ ರೋಷದಿಂದ ನರಗುಂದದ ಭಾಸ್ಕರರಾವ್ ಭಾವೆಯು ೮೦೦ ಸೈನಿಕರೊಡನೆ ೧೮೫೮ರ ಮೇ ೨೯ರಂದು ರಾಮದುರ್ಗಕ್ಕೆ ಬಂದನು. ಅಲ್ಲಿ ಮ್ಯಾನ್ಸನ್ನು ಸುರೇಬಾನಕ್ಕೆ ಹೋದ ವಿಷಯವನ್ನು ತಿಳಿದು ಅದೇ ದಿನ ಮಧ್ಯರಾತ್ರಿಯ ವೇಳೆಗೆ ಸುರೇಬಾನ ತಲುಪಿದನು. ಅಲ್ಲಿದ್ದ ಮ್ಯಾನ್ಸನ್ ತಂಡದವರ ಮೇಲೆ ನರಗುಂದದ ಸೈನಿಕರು ಆಕ್ರಮಣ ಮಾಡಿದರು. ಬ್ರಿಟೀಷ್ ಸೈನಿಕರೆಲ್ಲ ಹತರಾದರು. ಮ್ಯಾನ್ಸನಗೆ ಈ ಗದ್ದಲದಿಂದ ಎಚ್ಚರವಾದಾಗ ಕತ್ತಲೆಯಲ್ಲೇ ಕೈಯಲ್ಲಿದ್ದ ಪಿಸ್ತೂಲಿನಿಂದ ಗುಂಡು ಹಾರಿಸಿದನು. ಹಿರೇಕೊಪ್ಪದ ವಿಷ್ಣುಕುಲಕರ್ಣಿ ಎಂಬುವನು ಮ್ಯಾನ್ಸನ್ ಮೇಲೆ ಬಿದ್ದು ಆ ಪಿಸ್ತೂಲನ್ನು ಕಸಿದುಕೊಂಡು ಅವನ ತಲೆಯನ್ನು ಕತ್ತರಿಸಿ ಹಾಕಿದನು, ಭಾಸ್ಕರರಾವ್ ಭಾವೆಯು ಆ ರುಂಡವನ್ನು ತನ್ನ ಕತ್ತಿಗೆ ಚುಚ್ಚಿಕೊಂಡು ಹೋಗಿ ನರಗುಂದದ ಕೋಟೆಯ ಬಾಗಿಲಿಗೆ ನೇತು ಹಾಕಿದನು ಸುರೇಬಾನದಿಂದ ತಂದ ಪತ್ರಗಳನ್ನು ನೋಡಿದ ಮೇಲೆ ತನ್ನ ಖಾಸಗೀ ಕಾರುಬಾರಿ ಕೃಷ್ಣ ಜಿಪಂತ ಜೋಷಿ, ಬನ್ನ್ಯಾ ಒಪ್ಪ ಆಂಗ್ಲರ ಆಮಿಷಗಳಿಗೆ ಬಲಿಯಾಗಿ ಬಂಡಾಯದ ಗುಟ್ಟನ್ನು ತಿಳಿಸಿರುವುದು ಗೊತ್ತಾಯಿತು. ಹೀಗೆ ನಮ್ಮ ಸ್ಥಳೀಯ ಸಂಸ್ಥಾನಿಕರು ಮತ್ತೆ ಬಂಡಾಯಗಾರರನ್ನು ಬ್ರಿಟೀಷರು ಮಧ್ಯ ಸಂಘರ್ಷಣೆ ಆಗಲಿಕ್ಕೆ ನಮ್ಮ ಸ್ಥಳೀಯ ಇಂತಹ ಕೃಷ್ಣಜಿಪಂತ ಜೋಷಿ ಮತ್ತು ಬನ್ನ್ಯಾಬಾಧ್ವ ರೈತರು ಮುಖ್ಯಕಾರಣರಾಗಿರುತ್ತಾರೆ. ನಾವು ಹಿಂದಿನಿಂದಲೂ ಬ್ರಿಟೀಷರನ್ನು ದೂರುತ್ತ ಬಂದಿದ್ದೇವೆ. ಆದರೆ ಬ್ರಿಟೀಷರಿಗೆ ಸಹಾಯ ಸಹಕಾರ ಮಾಡಿದ ಇಂತವರನ್ನು ದೂರುವುದರಲ್ಲಿ ಮೊದಲು ಇಂತವರನ್ನು ಶಿಕ್ಷಿಸಿ ನಂತರ ವಸಹಾತುಗಳನ್ನು ಶಿಕ್ಷಿಸಬೇಕಿತ್ತು ಎಂದು ಅನಿಸುತ್ತದೆ. ಭಾರತದ ಸ್ಥಳೀಯರು ಎಲ್ಲ ದುರಂತಗಳಲ್ಲಿ ಮಧ್ಯಸ್ತಿಕೆ ವಹಿಸಿ ಬ್ರಿಟೀಷರಿಗೂ ಮತ್ತು ಸ್ಥಳೀಯರಿಗೆ ನಡುವೆ ಹೋರಾಟವಾಗಲಿಕ್ಕೆ ಇವರೆ ಮುಖ್ಯಕಾರಣ ಎಂದು ಅನಿಸುತ್ತದೆ. ಇಂತವರನ್ನು ಬ್ರಿಟೀಷರು ಬೇಧನೀತಿಯಿಂದ ಮತ್ತು ಲಂಚ ಕೊಡುವ ಆಮಿಷ ಓಡ್ಡಿ ಒಟ್ಟಾರೆ ರಾಜಕೀಯ ಕುತಂತ್ರದಿಂದ ಅವರು ಇವರನ್ನು ಸ್ಥಳೀಯರ ವಿರುದ್ಧ ಎತ್ತಿಕಟ್ಟಿ ತಮ್ಮ ಕಾರ್ಯವನ್ನು ನೆರವೇರಿಸಿ ಕೊಂಡಿರುವುದನ್ನು ನಾವು ಎಲ್ಲಾ ದುರಂತಗಳಿಂದಲೂ ನೋಡುತ್ತೇವೆ.

ಹೀಗೆ ನರಗುಂದ ಬಾಬಾಸಾಹೇಬನು ಕೃಷ್ಣಜಿಪಂತ ಜೋಷಿ ಬನ್ನ್ಯಾಬಪ್ಪ ಆಂಗ್ಲರಿಗೆ ಸಹಾಯ ಮಾಡಲು ಹೋಗಿ ಅವರು ನರಗುಂದದ ಮದ್ದಿನ ಮನೆಗೆ ಸಗಣಿ ತುಂಬಿ ಸಿಡಿಮದ್ದು ನಿಷ್ಫಲವಾಗುವಂತೆ ಮಾಡಿದ್ದರು. ಆದುದರಿಂದ ಭಾಸ್ಕರರಾವ್ ಭಾವೆಯ ಅವರನ್ನಸು ಹಿಡಿದು ಶಿಕ್ಷಿಸಲು ಹೊರಟನು ಈ ಸುದ್ಧಿ ಗೊತ್ತಾದ ಅವರು ಸರಗುಂದದಿಂದ ಪಲಾಯನ ಮಾಡಿದ್ದರು. ನಂತರ ಭಾಸ್ಕರರಾವ್ ಭಾವೆಯು ಅಮರಗೋಳ ಕೋಟೆಯನ್ನು ಮುತ್ತಿಗೆ ಹಾಕಲು ಹೊರಟನು, ಆದರೆ ಧಾರವಾಡದಿಂದ ಬಂದ ಲೆಸ್ಗರನ ಸೈನ್ಯವು ಹಾಗೂ ಮ್ಯಾಲಕಮ್ಮನ ಸೈನ ನರಗುಂದದ ಬಳಿ ಬೀಡು ಬಿಟ್ಟಿತು. ಜೂನ್ ೧ನೇ ತಾರಿಖು ಬ್ರಿಟೀಷ್ ಸೈನ್ಯ

ನರಗುಂದವನ್ನು ಆಕ್ರಮಣ ಮಾಡಿತು ನರಗುಂದದ ೨೪೦೦ ಸೈನಿಕರಲ್ಲಿ ಸುಮಾರು ಒಂದು ಸಾವಿರ ಜನರು ಬ್ರಿಟೀಷರ ಮೇಲೆ ಏರಿ ಬಂದರು, ಹೋರಾಟ ಪ್ರಬಲವಾಯಿತು. ಬ್ರಿಟೀಷರು ಕೋಟೆಯನ್ನು ಲಗ್ಗೆ ಹತ್ತಿದರು. ಇದರಿಂದ ಕಂಗಾಲಾದ ಭಾಸ್ಕರರಾವ್ ಭಾವೆಯು ತನ್ನ ಆಪ್ತರಾದ ಗಂಗಾಧರ ಚಿಂತಾಮಣಿ ಅಣ್ಣಸಹಸ್ರ ಬುದ್ಧ, ಪುರಚೂರು ಬಸ್ಲಾಜಿ ತುಂಬು ಹನುಮಂತ ಬುರೇಗಲ್, ಬಾಬಾಜಿ ಜಾಂಬಿಯಾ, ಬಸಪ್ಪಸವಾರ ಮೊದಲಾದವರೊಂದಿಗೆ ಚರ್ಚೆ ಮಾಡಿ ಇನ್ನು ಹೋರಾಡಿ ಫಲವಿಲ್ಲವೆಂದು ಕೋಟೆಯಿಂದ ಪರಾರಿಯಾಗಲು ತೀರ್ಮಾನಿಸಿದರು. ಆದುದರಿಂದ ಭಾವೆಯು ತನ್ನ ಆಪ್ತರೊಂದಿಗೆ ತೋರಣಗಲ್ ಸಂಸ್ಥಾನದ ಕಾಡನ್ನು ಪ್ರವೇಶಿಸಿದ ಮಾರ್ಗಮಧ್ಯೆ ಲಕ್ಷ್ಮಣರಾವ್ ಮತ್ತು ಜನತಾಪೆ ಜೊತೆಗೂಡಿದರು. ಅವರು ಫಂಡರಾಪುರಕ್ಕೆ ಗೋಸಾಯಿಯಂತೆ ಹೋಗಲು ಸಲಹೆ ಮಾಡಿದರು. ಅದಕ್ಕೆ ಬೇಕಾದ ವೇಷಭೂಷಣ ತರುತ್ತೇವೆಂದು ಭಾವೆಗೆ ಹೇಳಿ ಹೋದರು. ಆದರೆ ಅವರು ನೇರವಾಗಿ ಬ್ರಿಟೀಷ್ ಅಧಿಕಾರಿ ಸೌಟರ್‌ಗೆ ವಿಷಯ ತಿಳಿಸಿ, ಅವನಿದ್ದ ಹಡಗು ತಾಣವನ್ನು ತೋರಿಸಿದರು. ನೋಡಿ ಇಲ್ಲಿ ಬಾಬಾಸಾಹೇಬ ಹತ್ಯೆಗೊಳಗಾಗಲಿಕ್ಕೆ ಮುಖ್ಯ ಕಾರಣ ಬ್ರಿಟೀಷರು ಅಲ್ಲಿ ಇವನನ್ನು ಕೊಲೆ ಮಾಡಲಿಕ್ಕೆ ಬ್ರಿಟೀಷರಿಗೆ ಸಾಹೇಬ್, ಮಾಡಿದ ಇಂತಹ ಸ್ಥಳೀಯರೆ ಕಾರಣ ಎಂದು ಅನಿಸುತ್ತದೆ. ಸಾಲುರಾನು ಆ ಹಡಗು ತಾಣವನ್ನು ಸುತ್ತುವರಿದು ಭಾಸ್ಕರರಾವ್ ಭಾವೆ ಮತ್ತು ಆತನ ಸಂಗಡಿಗರನ್ನು ಸುಲಭವಾಗಿ ಸೆರೆಹಿಡಿದನು. ನಂತರ ಬಾಬಾಸಾಹೇಬನನ್ನು ಕ್ರಿ.ಶ.೧೮೫೮ರ ಜೂಲ್ ೧೨ರಂದು ಗಲ್ಲಿಗೇರಿಸಲಾಯಿತು.

ತನ್ನ ಆಪ್ತರಾದ ಗಂಗಾಧರ ಚಿಂತಾಮಣಿ ಅಣ್ಣಸಹಸ್ರಬುದ್ದೆ, ಪುರಚೂರು ಬಸ್ಸಾಜಿ ತುಂಬಾ ಹನುಮಂತ ಬುರೇಗಲ್ ಬಾಬಾಜಿ ಜಾಂಬಿಯಾ, ಬಸಪ್ಪಸವಾರ, ಕಾಶೀರಾವ್ ಸವಾರ ಮೊದಲಾದವರೊಂದಿಗೆ ಚರ್ಚೆಮಾಡಿ ಇನ್ನು ಹೋರಾಡಿ ಫಲವಿಲ್ಲವೆಂದು ಕೋಟೆಯಿಂದ ಪರಾರಿಯಾಗಲು ತೀರ್ಮಾನಿಸಿದರು. ಆದುದರಿಂದ ಭಾವೆಯು ತನ್ನ ಆಪ್ತರೊಂದಿಗೆ ತೋರಗಲ್, ಸಂಸ್ಥಾನದ ಕಾಡನ್ನು ಪ್ರವೇಶಿಸಿದ, ಮಾರ್ಗಮಧ್ಯೆ ಲಕ್ಷ್ಮಣರಾವ್ ಮತ್ತು ಜಗತಾಪೆ ಜೊತೆಗೂಡಿದರು. ಅವರು ಫಂಡರಾಪುರಕ್ಕೆ ಗೋಸಾಯಿಯಂತೆ ಹೋಗಲು ಸಲಹೆಕ ಮಾಡಿದರು, ಅದಕ್ಕೆ ಬೇಕಾದ ವೇಷಭೂಷಣ ತರತ್ತೇವೆಂದು ಭಾವೆಗೆ ಹೇಳಿ ಹೋದರು, ಆದರೆ ಅವರು ನೇರವಾಗಿ ಬ್ರಿಟೀಷ್ ಅಧಿಕಾರಿ ಸೌಬರ್‌ಗೆ ವಿಷಯ ತಿಳಿಸಿ, ಅವನಿದ್ದ ಅಡಗು ತಾಣವನ್ನು ತೋರಿಸಿದರು ನೋಡಿ ಇಲ್ಲಿ ಬಾಬಾಸಾಹೇಬ ಹತ್ಯಗೊಳಗಾಗಲಿಕ್ಕೆ ಮುಖ್ಯ ಕಾರಣ ಬ್ರಿಟೀಷರು ಅಲ್ಲ ಇವನನ್ನು ಕೋಟೆ ಮಾಡಲಿಕ್ಕೆ ಬ್ರಿಟೀಷರಿಗೆ ಸಹಾಯ ಮಾಡಿದ ಇಂತಹ ಸ್ಥಳೀಯರೆ ಕಾರಣ ಎಂದು ಅನಿಸುತ್ತಿದೆ. ಸೌಬರನು ಆ ಅಡಗುತಾಣವನ್ನು ಸುತ್ತವರಿದು ಭಾಸ್ಕರರಾವ್ ಭಾವೆ ಮತ್ತು ಆತನ ಸಂಗಡಿಗರನ್ನು ಸುಲಭವಾಗಿ ಸೆರೆಹಿಡಿದನು, ನಂತರ ಬಾಬಾಸಾಹೇಬನನ್ನು ಕ್ರಿ.ಶ. ೧೮೫೮ರ ಜೂನ್ ೧೨ರಂದು ಗಲ್ಲಿಗೇರಿಸಲಾಯಿತು.

### ೫.೨.೩. ಸಹಾಯಕ ಸೈನ್ಯ ಪದ್ಧತಿಯ ನೆಲೆಯ ಪ್ರತಿರೋಧಗಳು

ಬ್ರಿಟೀಷರ ವಿರುದ್ಧದ ಪ್ರತಿಭಟನೆಗಳಲ್ಲಿ ಟಿಪ್ಪುಸುಲ್ತಾನನ ಪ್ರತಿಭಟನೆಯು ಒಂದು. ಇವನ ಈ ಪ್ರತಿಭಟನೆ ಬೇರೆ ರಾಜರುಗಳಿಗಿಂತ ಭಿನ್ನವಾಗಿ ನಿಲ್ಲಿಸಿದೆ. ಟಿಪ್ಪುವನ್ನು ಬ್ರಿಟೀಷರು ಖಳನಾಯಕ ಎಂದು ಗುರುತಿಸುತ್ತಾರೆ. ಆದರೆ ನಮ್ಮ ಸ್ಥಳೀಯ ಭಾರತೀಯರು ಅವನನ್ನು ನಾಯಕ ಎಂದು ಗುರುತಿಸುತ್ತಾರೆ. ಅಲ್ಲದೆ ಅವನನ್ನು ರಾಷ್ಟ್ರೀಯವಾದಿ ಮತ್ತು ಸ್ವಾತಂತ್ರ್ಯ ಹೋರಾಟಗಾರ ಎಂದು ಕರೆಯುತ್ತಾರೆ. ಬ್ರಿಟೀಷ ಸಾಮ್ರಾಜ್ಯಶಾಹಿ ವಿರುದ್ಧದ ಹೋರಾಟಗಾರನೆಂದೂ ಅವನನ್ನು ಗುರುತಿಸಲಾಗುತ್ತದೆ.

"ಆಧುನಿಕ ಕಾಲದಲ್ಲಿ ಟಿಪ್ಪುವಿನಷ್ಟು ಚರ್ಚೆಗೆ, ವಿವಾದಕ್ಕೆ ಒಳಗಾದ ಬೇರೊಬ್ಬ ಇತಿಹಾಸದ ರಾಜನಿಲ್ಲ ಇದಕ್ಕೆ ಕಾರಣಗಳನ್ನು ಹುಡುಕಲು ಬಹಳ ಕಷ್ಟಪಡಬೇಕಾಗಿಲ್ಲ. ಪ್ರಥಮತಃ ಟೀಪ್ಪು ಒಬ್ಬ ಮುಸ್ಲಿಂ ರಾಜನಾಗಿದ್ದ ಎಂಬುದೇ ಅವನ ವಿರುದ್ಧದ ಟೀಕೆಗಳಿಗೆ ಮುಖ್ಯ ಕಾರಣ. ಹಿಂದೂ ಮೂಲಭೂತವಾದ ಇತ್ತೀಚಿನ ದಿನಗಳಲ್ಲಿ ತನ್ನ ಸ್ವಾಸ್ಥ್ಯವನ್ನು ಪೂರಾ ಕಳೆದುಕೊಂಡಿದೆ. ಹಿಂದೂ ಮುಸ್ಲಿಂ ಬಾಂಧವ್ಯ ಸೂರ್ಯ ಚಂದ್ರ ತಾರಾಧಿಗಳು ಇರುವ ತನಕ ಸಾಧ್ಯವೇ ಇಲ್ಲವೇನೋ ಎಂಬಂತೆ ಸಂಶಯದಿಂದ ನೋಡ ತೊಡಗಿರುವಂತಿದೆ. ಅವರ ಪ್ರೇತ ಮನಸ್ಸುಗಳಿಗೆ ಎಲ್ಲಾ ಮುಸ್ಲಿಮರೂ ರಾಷ್ಟ್ರದ್ರೋಹಿಗಳಾಗಿ ಕಾಣತೊಡಗಿದ್ದಾರೆ."[೩೧]

ಹೈದರನ ನಂತರ ಅಧಿಕಾರಕ್ಕೆ ಬಂದ ಅವನ ಮಗ ಟಿಪ್ಪು ಕರ್ನಾಟಕದ ಇತಿಹಾಸದಲ್ಲಿ ತಂದೆಗಿಂತ ಭಿನ್ನವಾದ ಸ್ಥಾನವನ್ನು ಕಸಿದುಕೊಂಡಿದ್ದಾನೆ. ಬ್ರಿಟೀಷರನ್ನು ಭಾರತದಿಂದ ಓಡಿಸಬೇಕೆಂಬ ದೃಢಸಂಕಲ್ಪದಿಂದಲೇ ಹೋರಾಡಿದ ಟಿಪ್ಪು ಬ್ರಿಟೀಷರಿಗೆ ಸಿಂಹಸ್ವಪ್ನನಾಗಿದ್ದು "ಮೈಸೂರಿನ ಹುಲಿ" ಎಂದೇ ಪ್ರಸಿದ್ಧವಾಗಿದ್ದಾನೆ. ಟಿಪ್ಪು ಸುಲ್ತಾನನು ೧೭೫೩ರ ನವೆಂಬರ್ ೨೦ರ ಶುಕ್ರವಾರದಂದು ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿ ಜನಿಸಿದನು.

ದಿನ ಕಳೆದಂತೆ ಬ್ರಿಟೀಷರಿಗೆ ಟಿಪ್ಪು ತಲೆನೋವಾಗಿ ಪರಿಣಮಿಸಿದೆ. ಹೋದ ಕಡೆಯೆಲ್ಲಲ್ಲಾ ಅವನ ಪ್ರತಿಭಟನೆ ಎದುರಾಗತೊಡಗಿತು. ಪಶ್ಚಿಮ ಕರಾವಳಿಯ ಪ್ರದೇಶಗಳಲ್ಲದೆ ಆರ್ಕಾಟಿನ ಕೆಲವು ಪ್ರದೇಶಗಳನ್ನು ಟಿಪ್ಪು ವಶಪಡಿಸಿಕೊಂಡನು. ಆ ಭಾಗಗಳಿಂದ ಇವನನ್ನು ಹೊರಗಟ್ಟುವುದು ಕಷ್ಟವೆಂದು ಬಗೆದ ಬ್ರಿಟೀಷರು ಎರಡು ವರ್ಷಗಳ ನಂತರ ಒಪ್ಪಂದಕ್ಕೆ ಮುಂದಾದರು. ಮಂಗಳೂರಿನಲ್ಲಿ ಜರುಗಿದ ಈ ಕರಾರುನಿಂದಾದ ೧೭೮೪ರ ಮಾರ್ಚ್ ಅಂದು ಮಂಗಳೂರು ಒಪ್ಪಂದ ಬ್ರಿಟೀಷರ ಮತ್ತು ಟಿಪ್ಪುವಿನ ನಡುವೆ ನೆರವೇರಿತು. ಬಹುಕಾಲದಿಂದ ಇವೆರಡು ಶಕ್ತಿಗಳ (ಟಿಪ್ಪು ಮತ್ತು ಬ್ರಿಟೀಷರು) ನಡುವೆ ಇದ್ದ ವೈರತ್ವ ಸದ್ಯಕ್ಕೆ ಇಲ್ಲವಾಯಿತಾದರೂ ಬ್ರಿಟೀಷರಿಗೆ ಅದು ಅಪಮಾನಕರವಾಗಿತ್ತು. ಅಲ್ಲದೆ ಈ ಕರಾರು ಟಿಪ್ಪುವಿನ ಶತೃಗಳಾದ ಮರಾಠರು ಮತ್ತು ಹೈದರಾಬಾದಿನ ನಿಜಾಮನ ಎಲ್ಲಾ ಲೆಕ್ಕಾಚಾರವನ್ನು ಬುಡಮೇಲು ಮಾಡಿತು. ಏಕೆಂದರೆ ಟಿಪ್ಪುವಿನ ಸೋಲು ಖಚಿತವೆಂದುಕೊಂಡಿದ್ದ ಅವರು ಬ್ರಿಟೀಷರ ಪರ ಸೇರಿ ಈ

ಹಿಂದೆ ಅವನು ತಮ್ಮಿಂದ ಆಕ್ರಮಿಸಿದ್ದ ಪ್ರದೇಶ ಹಾಗೂ ಅವನಿಗೆ ಸೆರೆಸಿಕ್ಕಿದ ತಮ್ಮ ಸೈನಿಕ ಬಂಧಿಗಳನ್ನು ಪಡೆಯಲು ಕಾತುರರಾಗಿದ್ದರು. ಅವರೆಲ್ಲರ ಆಶೋತ್ತರಗಳಿಗೆ ಮಂಗಳೂರು ಒಪ್ಪಂದ ಮಸಿ ಬಳಿದು ಟಿಪ್ಪುವಿನ ಘನತೆ ಗೌರವಗಳನ್ನು ಹೆಚ್ಚಿಸಿತು. ಪರಿಣಾಮವಾಗಿ ಏಕಾಂಗಿಯಾಗಿ ಟಿಪ್ಪುವನ್ನು ಎದುರಿಸಲಾಗದೆ ಮರಾಠರು ಮತ್ತು ನಿಜಾಮ ಅವನ ಮೇಲೆ ಅನ್ಯರು ಆಕ್ರಮಣ ನಡೆಸುವ ಸದಾವಕಾಶವನ್ನು ಕಾದು ಕುಳಿತರು. ಮೈತ್ರಿ ನಿರೀಕ್ಷಿಸಿದ್ದ ಟಿಪ್ಪುವಿನ ವರ್ತನೆ ಸಹಜವೇ ಆಗಿದ್ದಿತು. ಆದರೆ ಇದನ್ನು ಗ್ರಹಿಸಿದ ಬ್ರಿಟೀಷರು ಅಷ್ಟರಲ್ಲೇ ಮರಾಠರನ್ನು ತಮ್ಮ ಕಡೆಗೆ ಎಳೆದುಕೊಂಡು ಅವನ ದೂರಾಲೋಚನೆಗೆ ಪೆಟ್ಟು ತಂದರು.

ಟಿಪ್ಪು ಪ್ರಬಲನಾಗುತ್ತಿರುವುದು ಬ್ರಿಟೀಷರಲ್ಲಿ ಅಸೂಯೆ ಭಯವನ್ನು ಮೂಡಿಸಿತು. ಆಗತಾನೆ ಭಾರತದ ಗವರ್ನರ್ ಜನರಲ್ ಆಗಿ ಬಂದಿದ್ದ ಲಾರ್ಡ್‌ಕಾರ್ನ್ ವಾಲೀಸನು ಟಿಪ್ಪುವಿನ ಮೇಲೆ ಯುದ್ಧ ಹೂಡಲು ಸಮಯ ಕಾಯುತ್ತಿದ್ದನು. ಬ್ರಿಟೀಷರನ್ನು ದೇಶದಿಂದ ಹೊರದೂಡುವುದು ಟಿಪ್ಪುಸುಲ್ತಾನನ ಮಹಾನ್ ಧ್ಯೇಯವಾಗಿತ್ತು. ಟಿಪ್ಪು ಮಾತ್ರ ಬ್ರಿಟೀಷರನ್ನು ಹೊರದೂಡುವ ಪ್ರಯತ್ನ ಕೈಬಿಡಲಿಲ್ಲ. ತನ್ನೆಲ್ಲ ಸಂಪನ್ಮೂಲಗಳನ್ನು ವೃದ್ಧಿಗೊಳಿಸಿಕೊಂಡು ಯುದ್ಧ ಸನ್ನದ್ಧನಾದನು.

ಇಂಗ್ಲಿಷ್ ಕಂಪನಿಯ ಆಶ್ರಯದಲ್ಲಿದ್ದ ತಿರುವಾಂಕೂರಿನ ರಾಜನ ಮೇಲೆ ಟಿಪ್ಪು ಯುದ್ಧ ಹೂಡಿದನು. ಮರಾಠರು ಮತ್ತು ಹೈದರಾಬಾದಿನ ನಿಜಾಮನು ಬ್ರಿಟೀಷರ ಪರವಹಿಸಿದರು. ೧೭೯೧ರಲ್ಲಿ ಬೆಂಗಳೂರು ಇಂಗ್ಲೀಷರ ವಶವಾಯಿತು. ಕ್ರಿಶ. ೧೭೯೨ರಲ್ಲಿ ಟಿಪ್ಪು ಸಂಪೂರ್ಣವಾಗಿ ಸೋತು ಅವಮಾನಕರದಿಂದ ಶ್ರೀರಂಗಪಟ್ಟಣ ಒಪ್ಪಂದಕ್ಕೆ ಸಹಿ ಹಾಕಿದನು. ಈ ಪ್ರಕಾರ ಟಿಪ್ಪು ತನ್ನ ಅರ್ಧ ರಾಜ್ಯವನ್ನು ಶತೃಗಳಿಗೆ ಬಿಟ್ಟು ಕೊಡಬೇಕಾಯಿತು. ಇದಲ್ಲದೆ ಯುದ್ಧದ ಖರ್ಚಿಗಾಗಿ ಮೂರು ಕೋಟಿ ರೂಪಾಯಿಗಳನ್ನೂ ತೆರಬೇಕಾಯಿತು. ಅಷ್ಟು ಹಣ ಅವನಲ್ಲಿ ಇಲ್ಲದಿದ್ದರಿಂದ ಆ ಹಣ ಪಾವತಿಯಾಗುವವರೆಗೂ ಟಿಪ್ಪು ತನ್ನಿಬ್ಬರು ಮಕ್ಕಳನ್ನು ಬ್ರಿಟೀಷರಲ್ಲಿ ಒತ್ತೆ ಇಡಬೇಕಾಯಿತು.

ಮೂರನೆಯ ಮೈಸೂರು ಯುದ್ಧದಿಂದ ಟಿಪ್ಪುವಿಗೆ ಸಹಿಸಲಾರದಷ್ಟು ಅವಮಾನವಾಯಿತು. ಇದಕ್ಕಾಗಿ ಹಗಲಿರುಳೂ ಅವನ ಮನ ಕುದಿಯತೊಡಗಿತು. ಬ್ರಿಟೀಷರನ್ನು ಭಾರತದಿಂದ ಓಡಿಸಬೇಕೆಂಬುದು ಅವನ ದೃಢಸಂಕಲ್ಪ ಅದಕ್ಕಾಗಿ ವಿದೇಶಿ ರಾಷ್ಟ್ರಗಳೊಂದಿಗೆ ಸ್ನೇಹ ಗಳಿಸ ತೊಡಗಿದ, ಅರೇಬಿಯಾ, ಕಾಬೂಲ್, ಕಾನ್‌ಸ್ಟಾಂಟಿನೋಪಲ್ ಮತ್ತು ಮಾರಿಷನ್ ದೇಶಗಳಿಗೆ ಮತ್ತೆ ತನ್ನ ರಾಯಭಾರಿಗಳನ್ನು ಕಳುಹಿಸಿದ್ದನು. ಫ್ರಾನ್ಸಿನ ಸರ್ವಾಧಿಕಾರಿಯಾದ ನೆಪೋಲಿಯನ್‌ನೊಂದಿಗೂ ಸಂಧಾನ ನಡೆಸಿದ. ಆದರೆ ನೆಪೋಲಿಯನ್ನನು ನೈಲ್ ನದಿ ಕದನದಲ್ಲಿ ಬ್ರಿಟೀಷ ಅಡ್ಮಿರಲ್ ನೆಲ್ಸನ್ನನಿಗೆ ಸೋತು ಹೋದದ್ದರಿಂದ ಅವನ ಎಲ್ಲ ಯೋಜನೆಗಳು ಮಣ್ಣು ಪಾಲಾದವು. ಇದೆಲ್ಲವನ್ನು ಅರಿತ ಬ್ರಿಟೀಷರು ಟಿಪ್ಪುವಿನ ಕಾರ್ಯಾಚರಣೆಗಳನ್ನು ದಮನಗೊಳಿಸಲು ಯತ್ನಿಸತೊಡಗಿದರು. ೧೭೯೮ರಲ್ಲಿ ಭಾರತಕ್ಕೆ ಗವರ್ನಲ್ ಜನರಲ್ ಆಗಿ

ಬಂದ ಲಾರ್ಡ್ ವೆಲ್ಲೆಸ್ಲಿ ತನ್ನ ಸಹಾಯಕ ಸೈನ್ಯ ಪದ್ಧತಿಯನ್ನು ಪಾಲಿಸಿ ಬ್ರಿಟೀಷರೊಂದಿಗೆ ಶತೃತ್ವವನ್ನು ಫ್ರೆಂಚರೊಂದಿಗೆ ಮೈತ್ರಿಯನ್ನು ತ್ಯಜಿಸಿರಬೇಕೆಂಬುದಾಗಿ ಟಿಪ್ಪುವಿನ ಸೂಚಿಸಿದನು. ಆದರೆ ಟಿಪ್ಪು ಅವೆಲ್ಲವನ್ನು ನಿರಾಕರಿಸಿದನು. ಬ್ರಿಟೀಷರ ದಾಸ್ಯವನ್ನು ಒಪ್ಪಿಕೊಳ್ಳುವುದು ಅವನಿಗೆ ಬೇಕಿರಲಿಲ್ಲ. ತತ್ಪರಿಣಾಮವಾಗಿ ಅವರಿಬ್ಬರ ನಡುವೆ ಯುದ್ಧ ಅನಿವಾರ್ಯವಾಯಿತು. ಗವರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿ ಹ್ಯಾರಿಸನ್ ನಾಯಕತ್ವದಲ್ಲಿ ಪ್ರಬಲ ಸೈನ್ಯವೊಂದನ್ನು ಕಳುಹಿಸಿದನು. ಟಿಪ್ಪು ಸಿದ್ದೇಶ್ವರ ಮತ್ತು ಮಳವಳ್ಳಿ ಬಳಿ ಸಂಭವಿಸಿದ ಕದನಗಳಲ್ಲಿ ಸೋತು ಶ್ರೀರಂಗಪಟ್ಟಣದ ಕೋಟೆಯೊಳಗೆ ಸೇರಿಕೊಂಡನು. ಯಾವ ಮುಂಜಾಗ್ರತೆಯನ್ನು ಮಾಡಿಕೊಳ್ಳದ ಟಿಪ್ಪು ಈಗ ಎಲ್ಲವನ್ನೂ ತರಾತುರಿಯಲ್ಲಿ ನಿರ್ವಹಿಸತೊಡಗಿದ. ಕೋಟೆಯನ್ನು ಸುಸಜ್ಜಿತಗೊಳಿಸಿದ್ದನಾದರೂ ಅದು ಬ್ರಿಟೀಷರ ಮದ್ದುಗುಂಡಿನ ಬಿರುಸಿನ ಆರ್ಭಟಕ್ಕೆ ಸಿಕ್ಕಿ ಜರ್ಝರಿತವಾಯಿತು. ಅಧಿಕ ಮೊತ್ತದ ಗುಂಡಿನ ಸುರಿಮಳೆ ಸುರಿಸಿದ ಜನರಲ್ ಹ್ಯಾರಿಸ್ ಶ್ರೀರಂಗ ಪಟ್ಟಮದ ಕೋಟೆಯನ್ನು ಉಡಾಯಿಸಿ ಮಧ್ಯಾಹ್ನ ಒಂದು ಗಂಟೆಯ ಸಮಯದಲ್ಲಿ ನಗರವನ್ನು ಪ್ರವೇಶಿಸಿದನು. ಹೀಗೆ ಕ್ರಿ.ಶ. ೧೭೯೯ರ ಮೇ ೪ರಂದು ಬ್ರಿಟೀಷರ ವಶವಾಗಿ ಟಿಪ್ಪು ವೀರಯೋಧನಾಗಿ ಹೋರಾಡುತ್ತಲೇ ಮರಣವನ್ನಪ್ಪಿದ.

**ಸಹಾಯಕ ಸೈನ್ಯ ಪದ್ಧತಿ**

ಇದನ್ನು ಲಾರ್ಡ್ ವೆಲ್ಲೆಸ್ಲಿಯು ೧೭೯೮ರಲ್ಲಿ ಜಾರಿಗೆ ತಂದನು. ಭಾರತದಲ್ಲಿ ಬ್ರಿಟೀಷ ಸಾಮ್ರಾಜ್ಯ ವಿಸ್ತರಣೆ ಇದರ ಮುಖ್ಯ ಉದ್ದೇಶವಾಗಿತ್ತು. ಇದರ ಮುಖ್ಯ ನಿಬಂಧನೆಗಳು ಹೀಗಿವೆ. ಇದರ ಪ್ರಕಾರ ಈ ಒಪ್ಪಂದಕ್ಕೆ ಒಳಪಡುವ ರಾಜನು, ತನ್ನ ರಾಜ್ಯದಲ್ಲಿ ಬ್ರಿಟೀಷರ ಸೈನ್ಯವನ್ನು ಇಟ್ಟುಕೊಳ್ಳಬೇಕಾಗಿತ್ತು. ಆ ಸೈನ್ಯದ ಖರ್ಚು-ವೆಚ್ಚಗಳನ್ನು ತಾನೇ ಭರಿಸಬೇಕಾಗಿತ್ತು. ಒಪ್ಪಂದಕ್ಕೆ ಒಳಪಟ್ಟ ರಾಜ ಖರ್ಚು-ವೆಚ್ಚ ಭರಿಸದಿದ್ದಲ್ಲಿ ತನ್ನ ರಾಜ್ಯದ ಒಂದು ಭಾಗವನ್ನು ಬ್ರಿಟೀಷರಿಗೆ ಬಿಟ್ಟುಕೊಡಬೇಕಾಗಿತ್ತು. ಅಲ್ಲದೇ ತನ್ನ ಆಸ್ಥಾನದಲ್ಲಿ ಬ್ರಿಟೀಷ ರೆಸಿಡೆಂಟ್‌ನನ್ನು ಇಟ್ಟುಕೊಳ್ಳಬೇಕಾಗಿತ್ತು. ಆ ರಾಜ್ಯವು ಯುರೋಪಿನ ಇತರೆ ದೇಶಗಳೊಂದಿಗೆ ವ್ಯಾಪಾರಿ ಸಂಬಂಧವನ್ನು ಹೊಂದುವಂತಿರಲಿಲ್ಲ, ಒಪ್ಪಂದಕ್ಕೆ ಒಳಪಟ್ಟ ರಾಜರು ತಮ್ಮ ಆಡಳಿತ ಮತ್ತು ಸೇನೆಯಲ್ಲಿ ಬ್ರಿಟೀಷರ ಪೂರ್ವಾನುಮತಿ ಇಲ್ಲದೆ ವಿದೇಶಿಯರನ್ನು ನೇಮಿಸಿಕೊಳ್ಳುವಂತಿರಲಿಲ್ಲ. ಆ ರಾಜ್ಯದ ರಕ್ಷಣೆ ಕಂಪನಿಯ ಜವಾಬ್ದಾರಿಯಾಗಿತ್ತು.

ಹೈದರಾಬಾದಿನ ನಿಜಾಮನು ಸಹಾಯಕ ಸೈನ್ಯ ಪದ್ಧತಿ ಒಪ್ಪಂದಕ್ಕೆ ಸಹಿ ಮಾಡಿದ ಮೊದಲ ಭಾರತೀಯ ಅರಸ, ನಂತರದಲ್ಲಿ ಮೈಸೂರು, ಜೋಧ್, ತಿರುವಾಂಕೂರು, ಬರೋಡಾ, ಜೈಪೂರ, ಜೋಧ್‌ಪುರ, ಭರತಪುರ, ನಾಗಪುರ ಮತ್ತು ಗ್ವಾಲಿಯರ್ ಅರಸರೂ ಸಹ ಒಪ್ಪಂದಕ್ಕೆ ಸಹಿಹಾಕಿದರು.

ಶ್ರೀರಂಗಪಟ್ಟಣ ಒಪ್ಪಂದದಲ್ಲಿ ಕಳೆದುಕೊಂಡ ಗೌರವದಿಂದ ಟಿಪ್ಪುವಿಗೆ ಅವಮಾನವಾಗಿತ್ತು. ಬ್ರಿಟೀಷರು ಸಹ ಟಿಪ್ರಪುವಿನ ಮೇಲೆ ಸಂಶಯಗೊಂಡಿದ್ದರು ಮತ್ತು ಲಾರ್ಡ್‌ವೆಲ್ಲೆಸ್ಲಿ ಸಹಾಯಕ

ಸೈನ್ಯ ಪದ್ಧತಿಗೆ ಸಹಿ ಹಾಕಲು ಅವನನ್ನು ಒತ್ತಾಯಿಸಿದನು. ಇದನ್ನು ನಿರಾಕಿರಸಿದ ಟಿಪ್ಪು ಫ್ರಾನ್ಸ್ ಅಫಘಾನಿಸ್ತಾನ, ಅರೇಬಿಯಾ ಮತ್ತು ಟರ್ಕಿ ದೇಶಗಳ ಸಹಾಯ ಪಡೆಯಲು ಪ್ರಯತ್ನಿಸಿದನು, ಬ್ರಿಟೀಷರು, ಮರಾಠರು ಮತ್ತು ನಿಜಾಮರೊಂದಿಗೆ ಮೈಸೂರಿನ ಮೇಲೆ ಆಕ್ರಮಣ ಮಾಡಿದರು, ಟಿಪ್ಪು ನಿರ್ಭಯವಾಗಿ ಯುದ್ಧ ಮಾಡಿದನು. ಅವನು ಬ್ರಿಟೀಷರಿಗೆ ಅತಿದೊಡ್ಡ ವೈರಿಯಾಗಿದ್ದ ಮತ್ತು ಧೈರ್ಯಶಾಲಿಯಾಗಿದ್ದ ಆದ್ದರಿಂದ ಅವನನ್ನು ಮೈಸೂರಿನ ಹುಲಿ ಎಂದು ಕರೆಯಲಾಗಿದೆ. ೧೭೯೯ರಲ್ಲಿ ಟಿಪ್ಪು ತನ್ನ ರಾಜಧಾನಿ ಶ್ರೀರಂಗಪಟ್ಟಣವನ್ನು ರಕ್ಷಿಸಲು ಹೋರಾಡುತ್ತಿರುವಾಗಲೇ ಮಡಿದನು.

ಟಿಪ್ಪುವಿನ ಮರಣದ ನಂತರ ಅವನ ರಾಜ್ಯವನ್ನು ಬ್ರಿಟಿಷರು ಮರಾಠರು ಮತ್ತು ನಿಜಾಮರೊಂದಿಗೆ ಹಂಚಿಕೊಂಡರು. ಅವನ ರಾಜ್ಯದ ಒಂದು ಭಾಗವನ್ನು ಮೈಸೂರಿನ ಒಡೆಯರಿಗೆ ನೀಡಲಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನ ರಾಜರಾದರು.

**ಲಾವಣಿ ಸಾಹಿತ್ಯ ಮತ್ತು ಟಿಪ್ಪುಸುಲ್ತಾನ್**

ಇತಿಹಾಸದ ಇನ್ನೊಂದು ಮಾಧ್ಯಮ ವಾಕ್ ಪರಂಪರೆಗೆ ಸೇರಿದ ಜನಪದ ನಿರೂಪಣೆಯಲ್ಲಿದೆ. ಜನಪದ ಲಾವಣಿಗಳು ಇಂದು ನಮ್ಮ ಇತಿಹಾಸ, ಸಂಸ್ಕೃತಿಗಳ ಮೂಲವನ್ನು ಅನ್ವೇಷಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಲಾವಣಿಗಳು ಟಿಪ್ಪುವನ್ನು ಕಂಡ ರೀತಿ ಹೀಗಿದೆ ಎಂಬುದು ಸಹಜವಾಗಿಯೇ ಕೂತೂಹಲಕಾರಿಯಾದುದು. ಟಿಪ್ಪುವಿನ ಸಮಕಾಲೀನವಾಗಿಯೋ ಅನಂತರದಲ್ಲೋ ಮೂಡಿದ ಅನೇಕ ಲಾವಣಿಗಳು ಸಂತೆಯ ಮಾಳದಲ್ಲೋ ಮೈಸೂರಿನ ಜನನಿ ಬೀಡ ಮಾರ್ಕೆಟ್ ಚೌಕಗಳಲ್ಲೋ ನಿಂತು ಹಾರಾಡುತ್ತಿದ್ದ ಅನಾಮಧೇಯ ಲಾವಣಿಕಾರರು ಟಿಪ್ಪುವಿನ ದುರಂತ ವೀರಗಾಥೆಯನ್ನು ಜನರಿಗೆ ಪರಿಚಯ ಮಾಡಿಕೊಡುತ್ತಿದ್ದರು

ಟಿಪ್ಪುವಿನ ದಿಗ್ವಿಜಯ ಒಂದು ದಿಕ್ಕಿನಿಂದ ಹೊರಟಿದ್ದಲ್ಲ ಮೈಸೂರಿನ ಸುತ್ತಮುತ್ತ ಇದ್ದ ಎಲ್ಲಾ ವೈರಿಗಳಿಗೂ ಅದು ಬಿಸಿ ಮುಟ್ಟಿ ದೂರದ ಲಂಡನ್ನಿಗೂ ಬೆದರಿಕೆ ಒಡ್ಡಿತು. ಇದನ್ನು ಲಾವಣಿಕಾರ ಹಾಡುವುದು ಹೀಗೆ –

"ಹೈದರನ ಬಳಿಕ ಟೀಪುಸುಲ್ತಾನ
ಬೆದರಿಸಿದ ಗದಗದ ಹಿಂದುಸ್ಥಾನ
ಪದವಿಯೊ ಮೈಸೂರಿನ ಸುಲ್ತಾನ
ಕದನದಿ ಮಂಗ್ಳೂರ್ ಹಿಡಿದನು
ಕೈವಶ ಬೆದರಿತು ಲಂಡನ್
ಆಟಾಟೋಪದಿ ಟೀಪು ಸುಲ್ತಾನನು
ಆರ್ಕಾಟ್ ಲೂಟಿಯ ಮಾಡಿದನು
ಏಬೇಕಟಿನ ಮೆಲ್ ಉಲ್ಲಾಫರಂಗಿಯ

ಕೋರಿಗಳೆಷ್ಟೂ ಲೂಟಿದ್ದನು
ನಟನೆ ನೈಜಾಂ ಮರಾಠಿ ಪೆಟೆಯ
ಪಟಾಲಮ್ಮು ದಿಬ್ಬಕ್ಕೆ ಗೆದ್ದಿದನು"

ಟಿಪ್ಪುವಿನ ಶೌರ್ಯ ಪರಾಕ್ರಮ ದೇಶಭಕ್ತಿಗಳಿಂದ ಬ್ರಿಟೀಷರು ಕಂಗಾಲಾದರು. ಈ ಈಸ್ಟ್ ಇಂಡಿಯಾ ಕಂಪನಿ ತತ್ತರಿಸಿ ಹೋಯಿತು.

"ಕೋಬಲೆ ಹತ್ತಿದ ಬ್ರಿಟಿಷ್ ವರ್ತಕರು
ಕೂಟ ಗೈದರು ಮಸಲತ್ತನ್ನು
ಲೂಟಿಯನೊಡೆಯಲು ಶ್ರೀರಂಗಪಣ್ಣಕ್ಕೆ
ಜನರಲ್ ಹ್ಯಾರಿಸ್ ಬಂದಿದ್ದನು".

ಬ್ರಿಟೀಷರು, ನಿಜಾಮ, ಪೇಶ್ವೆಗಳು, ಎಲ್ಲಾ ಒಟ್ಟಾಗಿ ಸೇರಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದರು. "ಮೀರ್‌ಸಾದಕ್ ಮೈಸೂರು ಪ್ರಾಂತ್ಯದ ಜನರ ಮನಸ್ಸಿನಲ್ಲಿ ಕಣ್ಣಲ್ಲಿ ಸೈತಾನನ ಪ್ರತಿರೂಪ ವಂಚಕ, ದ್ರೋಹಿ, ಮೋಸಗಾರ ಅವು ಅವನ ವ್ಯಕ್ತಿತ್ವವನ್ನು ಒಟ್ಟಿಗೆ ಕಟ್ಟಿಕೊಡಲಾರವು ಜನಪದರಿಗೆ ಮೀರ್‌ಸಾದಕ್ ದೇಶದ್ರೋಹಿಯಾದರೆ, ಟಿಪ್ಪು ಮೈಸೂರಿನ ಹುಲಿ, ಮೀರಸಾಧಕನ ಕಡು ದ್ರೋಹದಿಂದ ಮದ್ದಿನ ಮನೆ ಉರಿದು ಹೋಗಿ, ಇಡಿಸಿದ್ದ ಫಿರಂಗಿಯೇ ಇಳಿದೋಯ್ತು ಮಣ್ಣಿನೊಳಗೆ."೨

ಖಾಸಾ ದಂಡಿನ ಶ್ರೇಷ್ಠ ಮುಖಂಡರ
ಮೋಸವು ಸುಲ್ತಾನರಿಗೆ ಆರುವಾಯ್ತು
ಮಸಲತ್ ಮಾಡಿದ ಮೀರ್ಗರ್ದನಿಗೆ
ದೇಶದ್ರೋಹಿ ಎಂಬ ಹೆಸರಾಯ್ತು
ಹರಾಮಕೋರರ ಕರಾಮತ್ ಅರಿತನು
ಟಿಪ್ಪುಸುಲ್ತಾನನು ನಿಮಿಷದಲಿ
ಅರೇ ಹಮಾರೆ ನಮಕ್ ಹರಾಮ
ಕರೇ ಸೋ ತಾನಂದ ಮನಸಿನಲಿ
ಸ್ವರಾಜ್ಯ ರಕ್ಷಣೆಗೋಸ್ಕರ ಸುಲ್ತಾನ
ರಾಣಾಗ್ರ ಹೊರಟನು ರೋಷದಲಿ
ಫಿರಂಗಿಕ ಸೋಲ್ಜರ ತರಂಗ ಮಧ್ಯದಿ
ತುರಂಗ ಬಿಟ್ಟನು ತ್ವರಿತದಲಿ

ಟಿಪ್ಪುಸುಲ್ತಾನನು ಶತ್ರುಗಳನ್ನು ಕುರಿಗಳ ಹಾಗೆ ಶತ್ರು ಸೈನಿಕರನ್ನು ತರಿದು ಹಾಕಿದನು. ಜನರಲ್ ಹ್ಯಾರಿಸ್‌ನನಿಗೆ ಟಿಪ್ಪುವಿನ ಶೌರ್ಯ ನೋಡಿ ಚಿಂತೆ ಶುರುವಾಯಿತು. ಅವನಿಗೆ ಟಿಪ್ಪುವನ್ನು ಸೆರೆ ಹಿಡಿಯಬೇಕೆಂಬ ಮಹಾದಾಸೆ ಇತ್ತು. ಸೆರೆ ಹಿಡಿಯುವುದಿರಲಿ, ಅವನ

ಸಮೀಪ ಸುಳಿಯುವುದೂ ಸಾಧ್ಯವಿಲ್ಲದಾಗಿತ್ತು. ಬೇರೆ ದಾರಿ ತೋಚದೆ ಟಿಪ್ಪುವನ್ನು ಶೂಟ್ ಮಾಡಿ ಎಂದು ಆದೇಶ ಕೊಟ್ಟನು.

ಲಾವಣಿಯುದ್ಧಕ್ಕೂ ಟೀಪುವಿನ ವಿರುದ್ಧದ ಒಳಸಂಚಿನ ಮಹಾಪೂರವೇ ಇದೆ. ಹೊರಗಿನ ಶತ್ರುಗಳು, ಒಳಗಿನ ಶತ್ರುಗಳು ಒಂದಾದದ್ದು ಒಳಗಿನ ಶತ್ರುಗಳಾದ ಉತ್ತಮ ಜನರಿಗೆ ಚಿತ್ತಚಿಂಚಲ ಉಂಟಾದದ್ದು. ಜಾತಿ ಚಿಂತೆ ಬಹು ಆಗಿದ್ದುದು ಇವೆಲ್ಲೂ ಸೇರಿ ಟಿಪ್ಪುವಿನ ಪತನವಾಗುತ್ತದೆ ಹೆತ್ತಯ್ಯನೆಂದು ಪೂರ್ಣಯ್ಯನೊಳು ಟೈಗರ್‌ಗೆ ಬಹು ನಂಬಿಕೆ ಇತ್ತು. ಆದರೆ ಆ ನಂಬಿಕೆಯನ್ನು ಪೂರ್ಣಯ್ಯ ಉಳಿಸಿಕೊಳ್ಳಲಿಲ್ಲ. ಅದರ ಫಲವಾಗಿ ಹಾರುವರಿಗಿತ್ತು ಹುದ್ದೇದಾರಿ ವೀರನ ಕೊಂದು ಇಂಗ್ಲೀಷರ ಬಾವುಟ ಧರಿಸಿಕೊಂಡಿತು ಜಾಂಡ ಬತೇರಿ –

ಪರಾಕ್ರಮದಿ ಬಲು ಪೋರಾಡಿ ಬಿದ್ದನು
ಸಾರಾಂಗ ಬಾಗಿಲ ಗಟಿಯ ಬಳಿ
ಫರಂಗಿ ಫೌಜಿನ ತರಂಗ ನುಗ್ಗಿತು
ಶ್ರೀರಂಗಧಾಮನ ಪಟ್ಟಣದಲ್ಲಿ

ಟಿಪ್ಪುಸುಲ್ತಾನನ ಹದಿನೇಳು ವರುಷದ ಆಡಳಿತ ಕೊನೆಯಾಗಿ ಅವನ ಆಡಳಿತ ಮಾತ್ರ ಜನಸಾಮಾನ್ಯರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ.

ಟಿಪ್ಪುಸುಲ್ತಾನನ ಮತ ಸಂಹಿಷ್ಣುತೆಯನ್ನು ಹೇಳುವ ಲಾವಣಿಗಳು ನಮಗೆ ಸಿಗುತ್ತವೆ. ಟಿಪ್ಪು ಅಸಂಹಿಷ್ಣುತೆಯ ಮತದ್ವೇಷಿ, ಪ್ರಕೋಪದ ಹುಚ್ಚ ಎಂದು ಹೇಳಿದವರಿಗೆ ಜನಪದರು ಕೊಡುವ ಉತ್ತರವೇ ಬೇರೆಯಾಗಿತ್ತು.

ಜೋಡಿಸುತ್ತಿನ ಕೋಟೆಗೆ ಟೈಗರ್
ಆಗಿ ಕಾದಿದ್ದ
ಬೇಡಿದ ಧ್ವಜರಿಗೆ ಬಿಡದೆ
ದಾನ ನೀಡಿದ್ದ
ಟಿಪ್ಪುಸುಲ್ತಾನ ಹಿಂದೂ ಮುಸಲ್ಮಾನರ
ಉದ್ಧಾರಿ ದೊರೆಯಾಗಿದ್ದ

ಟಿಪ್ಪುಸುಲ್ತಾನನಿಗೂ ಮತ್ತು ನಂಜನಗೂಡಿನ ನಂಜುಂಡೇಶ್ವರ ದೇವಸ್ಥಾನಕ್ಕೂ ಅವಿನಾಭಾವ ಸಂಬಂಧವಿದೆ. ಮೈಸೂರಿನ ಸುತ್ತಾ ಮುತ್ತಾ ಒಂದು ಜನಪ್ರಿಯ ಕಥೆ ಇದೆ. ಹಕೀಂ ನಂಜುಂಡ ಎಂಬ ಈ ಕಥೆ ಟಿಪ್ಪುವಿಗೆ ನಂಜುಡೇಶ್ವರ ದೇವಸ್ಥಾನದ ಬಗ್ಗೆ ಇರುವ ಭಕ್ತಿಯನ್ನು ತಿಳಿಸುತ್ತದೆ. ಸಂಸ್ಥಾನದಲ್ಲಿದ್ದ ಪಟ್ಟದಾನೆಯನ್ನು ಟಿಪ್ಪು ತುಂಬಾ ಪ್ರೀತಿಸುತ್ತಿರುತ್ತಾನೆ. ಅದಕ್ಕೆ ಒಂದು ದಿನ ಕಾಯಿಲೆ ಬರುತ್ತದೆ. ಆಸ್ಥಾನದಲ್ಲಿ ಅನೇಕ ಜನ ಹಕೀಮರು ಔಷಧವನ್ನು ಕೊಡುತ್ತಾರೆ. ಅದಕ್ಕೆ ವಾಸಿಯಾಗುವುದಿಲ್ಲ. ಆಗ ಅರಮನೆಯ ಮಾತ್ರ ನಂಜುಂಡೇಶ್ವರನಿಗೆ

ಹರಕೆಯನ್ನು ಹೊತ್ತು ಬರುತ್ತಾನೆ ಆಗ ಅನೇಕ ರೋಗವಾಸಿಯಾಗುತ್ತದೆ. ಇದನ್ನು ಟಿಪ್ಪು ಅರಿತುಕೊಂಡು ನಂಜುಡೇಶ್ವರನನ್ನು ಹೊಗಳಲು ಪ್ರಾರಂಭಿಸುತ್ತಾನೆ. ನಂತರ ದೇವಸ್ಥಾನಕ್ಕೆ ಅನೇಕ ಸವಲತ್ತುಗಳನ್ನು ಕೋಡುತ್ತಾನೆ.

ಹೀಗೆ ಟಿಪ್ಪುಸುಲ್ತಾನನ್ನು ಕುರಿತಾಗಿ ಇರುವ "ಯಾವ ಲಾವಣಿಯು ಟಿಪ್ಪುವನ್ನು ಮತಾಂಧ, ಹಿಂದೂ ದ್ವೇಷಿ ಎಂದು ವರ್ಣಿಸದೇ ಇರುವುದು"[೩] ಈ ಎಲ್ಲಾ ಐತಿಹಾಸಿಕ ಅಂಶಗಳನ್ನು ಈ ಲಾವಣಿಗಳು ಒಳಗೊಂಡಿವೆ. ಟಿಪ್ಪುವಿನ ಇತಿಹಾಸವನ್ನು ಗಮನಿಸಿದಾಗ ಈ ಲಾವಣಿಗಳನ್ನು ನಿರ್ಲಕ್ಷಿಸಲು ಸಾಧ್ಯವೇ ಇಲ್ಲ. ಆಶ್ಚರ್ಯದ ಸಂಗತಿ ಏನೆಂದರೆ ಲಿಖಿತ ಇತಿಹಾಸದಲ್ಲಿ ಖಳನಾಯಕನೆಂದು ಚಿತ್ರಿತವಾಗಿರುವ ಟಿಪ್ಪು ಇಲ್ಲಿಯವರೆಗೆ ದೊರಕಿರುವ ಜನಪದ ಲಾವಣಿಗಳಲ್ಲಿ ಜನಾನುರಾಗಿಯಾಗಿ, ಒಬ್ಬ ನಾಯಕನನ್ನಾಗಿ ಹೊಗಳಿಸಿಕೊಂಡಿದ್ದಾನೆ.

ಮೈಸೂರು ಪ್ರಭುವಿಗೆ ಮಗನೆಂದಿನಿಸುತ
ಹೈದರ್ ಉದರದಿ ಜನಿಸಿದ್ದ ಕೈ ಸೆರೆ ಹಿಡಿದು
ಇಂಗ್ಲೀಷ ಜನರ ದೇಶಕ್ಕೆ ಬಾರದಾಗೆ ಮಾಡಿದ್ದ
ಮಾಡಿದರ್ ಮೋಸ ಮಾರಾಟ ರಾಜ ಹೈದರಾಬಾದ್
ನವಾಬ್ ಮದಾಗಿ ನುಡಿಯಿತ್ತರು
ಗೂಡಾರ್ಥವಾಗಿ ತಂಜಾವೂರಿಗೆ ಗುಟ್ಟಾಗಿ
ಕೊಡುವೆವು ಇಪ್ಪತ್ತೈದು ಲಕ್ಷವನೆಂದು
ಕರಾರ್ ಮಾಡಿದರು ಸರಿಯಾಗಿ
ಸಿಡುಕುಗಾರ ನಮ್ಮ ಟಿಪ್ಪುವ ಕೊಲ್ಲಲು
ಕುಯುಕ್ತಿ ಜನರು ಗುಂಪಾಗಿ
ಕೊಡಗಿನ ರಾಜನು ಕೊಟ್ಟನು ದಾರಿಯ ಇಂಗ್ಲೀಷ
ಪ್ರಜೆಗೆ ಗುರಿಯಾಗಿ ಉಂಡಮನೆಗೆ
ಎರಡೆನಿಪರು ಸೇರಿ ಟಿಪ್ಪುವಿನ
ದವಲತ್ ಹಾಳಾಗಿ

ಹೀಗೆ ಬ್ರಿಟೀಷರು ಸಹಾಯಕ ಸೈನ್ಯ ಪದ್ಧತಿಗೆ ಅನುಗುಣವಾಗಿ ಮರಾಠರು, ಕೊಡಗರು ಮತ್ತು ಹೈದರಾಬಾದಿನ ನಿಜಾಮನನ್ನು ತಮ್ಮ ಕಡೆ ಮಾಡಿಕೊಂಡು ಟಿಪ್ಪುಸುಲ್ತಾನನ್ನು ಸೋಲಿಸುತ್ತಾರೆ. ಇಲ್ಲಿ ಮರಾಟರು ನಿಜಾಮ ಮತ್ತು ಕೊಡಗಿನ ರಾಜನು ಟಿಪ್ಪುವಿಗೆ ಸಹಾಯ ಮಾಡುತ್ತೇವೆ ಎಂದು ಹೇಳಿ ಹಣದಾಸೆಗೆ ಬ್ರಿಟೀಷರ ಜೊತೆ ಸೇರಿ ಟಿಪ್ಪುವನ್ನು ಸೋಲಿಸುತ್ತಾರೆ.

ಹೀಗೆ ಟಿಪ್ಪುಸುಲ್ತಾನನು ಬ್ರಿಟೀಷರ ಸಹಾಯಕ ಸೈನ್ಯಪದ್ಧತಿಯ ವಂಚನೆಯಿಂದ ಮೋಸ ಹೋಗುತ್ತಾನೆ. ಬ್ರಿಟೀಷರು ಲಾರ್ಡ್‌ವೆಲ್ಲಿಸ್ಲಿಯ ಸಹಾಯಕ ಸೈನ್ಯದ ನೆಪವನ್ನು ಒಡ್ಡಿ ನಾಲ್ಕನೆಯ ಮೈಸೂರು ಯುದ್ಧದಲ್ಲಿ ಈ ಕಾನೂನಿಗೆ ಸಹಿ ಹಾಕು ಎಂದು ಟಿಪ್ಪುಸುಲ್ತಾನನ್ನು ಒತ್ತಾಯಿಸಿದಾಗ

ಇದನ್ನು ನಿರಾಕರಿಸಿದ್ದಕ್ಕಾಗಿ ಬ್ರಿಟೀಷರು ಮರಾಠ ಮತ್ತು ನಿಜಾಮನ ಸಹಾಯದಿಂದ ಟಿಪ್ಪುಸುಲ್ತಾನನ್ನು ಸೋಲಿಸುತ್ತಾರೆ. ಇದನ್ನು ಚರಿತ್ರೆಯಲ್ಲಿ ನಾವು ತುಂಬಾ ಸ್ಪಷ್ಟವಾಗಿ ನೋಡುತ್ತೇವೆ. ಆದರೆ ಬ್ರಿಟೀಷರ ಕಾನೂನು ಮತ್ತು ಕಾಯಿದೆಗಳನ್ನು ಅರಿಯದ ನಮ್ಮ ಜನಪದ ಅನಾಗರಿಕ ಲಾವಣಿಕಾರರಿಗೆ ಸಹಾಯಕ ಸೈನ್ಯ ಪದ್ಧತಿ ಅಂದರೆ ಏನು ಅನ್ನುವುದನ್ನು ತಿಳಿಯದೆ ಒಟ್ಟಿನಲ್ಲಿ ಬ್ರಿಟೀಷರು ಮೋಸದಿಂದ ಟಿಪ್ಪುವನ್ನು ಸೋಲಿಸಿರುವುದನ್ನು ಮಾತ್ರ ಲಾವಣಿಯಲ್ಲಿ ಗುರುತಿಸುತ್ತಾ ಹೋಗುತ್ತಾರೆ.

ಬ್ರಿಟೀಷರು ಟಿಪ್ಪುವನ್ನು ಖಳನಾಯಕ ಮತಾಂಧ ದೇಶದ್ರೋಹಿ ಎಂದೆಲ್ಲಾ ಹೇಳಿದರೆ ಟಿಪ್ಪು ನಮ್ಮ ಜನಪದರಿಗೆ ಇದಕ್ಕೆ ವಿರುದ್ಧವಾಗಿ ಕಂಡಿರುವುದನ್ನು ನಾವು ಗುರುತಿಸಬಹುದು.

### ೫.೩. ರಾಷ್ಟ್ರೀಯತೆಯ ನೆಲೆ

ರಾಷ್ಟ್ರೀಯತೆಯ ಕುರಿತಾದ ನಿರ್ವಚನಗಳನ್ನು ಪುನರ್ ವ್ಯಾಖ್ಯಾನಿಸಿಕೊಳ್ಳುವ ಅಗತ್ಯ ಇಂದು ಹೆಚ್ಚಾಗಿದೆ. ಜಗತ್ತೇ ಇಂದು ವ್ಯಾಪಾರ, ವಾಣಿಜ್ಯ ಮತ್ತು ಮಾಹಿತಿ ಕ್ರಾಂತಿಯಿಂದಾಗಿ ಗ್ಲೋಬಲ್ ವಿಲ್ಹೇಜ್ ಎನ್ನುವ ಕಲ್ಪನೆಯು ಹೆಚ್ಚು ವಾಸ್ತವವಾಗುತ್ತಿದೆ. ಭಾಷೆ, ಪ್ರಾಂತ್ಯ, ದೇಶ, ಸಂಸ್ಕೃತಿ ಗಡಿಗಳೆಲ್ಲವನ್ನು ಮೀರಿದ ಆಧುನಿಕ ಜೀವನ ವಿಧಾನ ಮತ್ತು ನಂಬಿಕೆಗಳು ಜಾಗೃತಗೊಳ್ಳುತ್ತಿವೆ. ಮನುಷ್ಯ ತನ್ನ ಸಂಸ್ಕೃತಿಯ ತಾಯಿಬೇರನ್ನು ಕಳೆದುಕೊಂಡು ಅನಾಥ ಪ್ರಜ್ಞೆಯಿಂದ ನರಳುವ ಸ್ಥಿತಿ ಬಂದಿದೆ. ಆಧುನಿಕತೆ ಅವನನ್ನು ಒಂಟಿಯಾಗಿಸುತ್ತಿದೆ. ಮನುಷ್ಯನ ಸಾಮಾಜಿಕ ಜೀವನದ ಅಸ್ತಿತ್ವವೇ ಕುಸಿದು ಬೀಳ ತೊಡಗಿದೆ. ಇಂತಹ ಸಂದರ್ಭದಲ್ಲಿ ನಾವು ನಮ್ಮ ಸಾಂಸ್ಕೃತಿಕ ಚಹರೆ ಮತ್ತು ಬದುಕಿನ ವಿಧಾನವನ್ನು ಅಧಿಕೃತಗೊಳಿಸುವಂತಹ ರಾಷ್ಟ್ರ, ರಾಷ್ಟ್ರೀಯತೆಯ ಪರಿಕಲ್ಪನೆಗಳನ್ನು ಪುನರ್ ನಿರ್ವಚಿಸಿಕೊಳ್ಳುವ ತುರ್ತು ಇದೆ. ಈ ನಿಟ್ಟಿನಲ್ಲಿ ರಾಷ್ಟ್ರೀಯತೆಯ ಅಸ್ತಿತ್ವ ಮತ್ತು ವ್ಯಾಪ್ತಿಗೆ ಸಂಬಂಧಿಸಿದ ವಸಾಹತುಶಾಹಿಗೆ ವಿರುದ್ಧದ ಸಂಘರ್ಷದ ಅವಧಿಯಲ್ಲಿ ಹುಟ್ಟಿಕೊಂಡ ಲಾವಣಿ ಸಾಹಿತ್ಯವನ್ನು ಅಧ್ಯಯನ ಮಾಡುವ ಅಗತ್ಯವಿದೆ. ಆ ಮೂಲಕ ಪ್ರಸ್ತುತ ವಿಷಯ ಮಂಡನೆಯ ಮೂಲ ಆಶಯವಾದ ರಾಷ್ಟ್ರೀಯತೆಯ ಪುನರ್ ವಿರ್ವಚನೆಗೆ ಪ್ರಯತ್ನಿಸಲಾಗುವುದು ಮತ್ತು ವಸಹಾತು ಶಾಹಿಯ ವಿರುದ್ಧದ ರಾಷ್ಟ್ರೀಯ ನೆಲೆಯ ಸಂಘರ್ಷಗಳನ್ನು ಕುರಿತು ಅಧ್ಯಯನ ಮಾಡುವ ಅವಶ್ಯಕತೆ ಇಲ್ಲಿದೆ.

#### ೫.೩.೧. ರಾಷ್ಟ್ರೀಯತೆಯ ಅರ್ಥ

ರಾಷ್ಟ್ರೀಯತೆ ಜೊತೆಗೆ ರಾಷ್ಟ್ರ, ರಾಷ್ಟ್ರೀಯತ್ವ, ರಾಷ್ಟ್ರಧ್ವಜ, ರಾಷ್ಟ್ರೀಯನಾಯಕ ಮುಂತಾದ ಪದಗಳು ನೆನಪಿಗೆ ಬರುತ್ತವೆ "ಸ್ವತಂತ್ರ ಸರಕಾರವನ್ನುಳ್ಳು ಅಥವಾ ಇಚ್ಛಿಸುವ ಹಾಗೂ ಐಕ್ಯತೆಯ ಭಾವನೆಯಿಂದ ಕೂಡಿರುವ ಜನಸಮುದಾಯವೆ ರಾಷ್ಟ್ರ ಎಂದು ಕರೆಯಲಾಗುತ್ತದೆ"[೬೪] ಒಂದು ಪದ ಅಥವಾ ಒಂದು ವರ್ಣ ಇಲ್ಲದ ಧರ್ಮವಾಗದು ಒಂದು ಗುಂಪಿನ ಜನರನ್ನು ರಾಷ್ಟ್ರವನ್ನಾಗಿ ಮಾಡುವುದಿಲ್ಲ ಆದರ ಜೊತೆಗೆ ಭಾವನಾತ್ಮಕ ಐಕ್ಯತೆ ಇರಬೇಕು ಇದು

ರಾಷ್ಟ್ರೀಯತೆಯ ಅಡಿಪಾಯವಾಗಿ ಕಂಡುಬರುತ್ತದೆ. ಅದರ ಜೊತೆಗೆ ಮಾನಸಿಕ ಮತ್ತು ಆಧ್ಯಾತ್ಮಿಕ ಸೂತ್ರಗಳು ತಾವೇ ಮಾನವರನ್ನು ರಾಷ್ಟ್ರವನ್ನಾಗಿ ಬಿಗಿಬಂದಿಸಿವೆ. ದೇಶ ಮತ್ತು ರಾಷ್ಟ್ರೀಯತ್ವಗಳು ಮಿಲನವಾದರೆ ಅದು ರಾಷ್ಟ್ರವಾಗಿ ಕಂಡುಬರುತ್ತದೆ. ಇದಕ್ಕೆ ಹೊಂದುವ ಹಾಗೆ ಅರವಿಂದರು 'ದೇಶವೇ ರಾಷ್ಟ್ರೀಯತ್ವದ ಪ್ರತಿಷ್ಠಾನ ಭೂಮಿ"[೩೫] ಎಂದು ಅಭಿಪ್ರಾಯ ಪಡುತ್ತಾರೆ. ಅಂದರೆ ಒಂದು ದೇಶದ ಪ್ರಜೆ, ಪ್ರದೇಶ, ಪ್ರಭುತ್ವ ಮತ್ತು ಸಾರ್ವಭೌಮತ್ವಗಳು ಸೇರಿ ಅದು ಒಂದು ದೇಶವೆನಿಸಿಕೊಳ್ಳುತ್ತದೆ. ಇಂಥ ದೇಶವು ಒಂದು ರಾಷ್ಟ್ರವೆನಿಸಿಕೊಂಡು ಬೆಳೆಯುತ್ತದೆ ಇದರಿಂದ ಜನರಲ್ಲಿ ನಾವೆಲ್ಲ ಒಂದೇ ಎಂಬ ಐಕ್ಯತೆಯ ಭಾವನೆ ಮೂಡಿ ಅದು ಒಂದು ರಾಷ್ಟ್ರೀಯತೆಯ ಪ್ರಜ್ಞೆ ಎಂದು ಕರಿಸಿಕೊಳ್ಳುತ್ತದೆ.

ರಾಷ್ಟ್ರೀಯತ್ವ ಬೆಳೆಸಲು ಸಹಾಯಕವಾದ ಅಂಶಗಳನ್ನು ಗುರುತಿಸಿದರೆ ಅವು ಎಲ್ಲರಿಗೂ ಒಂದೆ ಆದ ವಾಸಸ್ಥಾನ, ವರ್ಣ, ಭಾಷೆ, ಸಂಪ್ರದಾಯಗಳು ಮತ್ತು ಸಂಸ್ಕೃತಿ, ಮತಧರ್ಮ, ರಾಜಕೀಯ ಮತ್ತು ಸಮಾಜಿಕ ಹಿತಗಳು, ಪರಂಪರೆ ಮತ್ತು ಇತಿಹಾಸ, ರಾಜಕೀಯ ಸಂಘಟನೆಗಾಗಿ ಬಯಸುವ ಸಹ ಮನೋಭಾವ, ಮುಂತಾದವು. ದೇಶದ ಜನತೆಯಲ್ಲಿ ಅವರಿಗೂ ಒಂದು ರಾಷ್ಟ್ರೀಯತ್ವವಿದೆ. ಅವರು ಒಂದು ರಾಷ್ಟ್ರಕ್ಕೆ ಸೇರಿದವರು ಎಂಬ ಭಾವನೆ ಅವರಲ್ಲಿ ಬರುವುದೋ ಆವಾಗ ರಾಷ್ಟ್ರೀಯತೆ ಜನ್ಮತಾಳುವುದು. ಅರವಿಂದರು ಅಭಿಪ್ರಾಯ ಪಡುವಂತೆ ತಮ್ಮ ತಮ್ಮ ದೇಶದ ಹಿತದಲ್ಲಿ ತಮ್ಮ ಹಿತವಿದೆ. ತಮ್ಮ ದೇಶದ ಗೌರವದಲ್ಲಿ ತಮ್ಮ ಗೌರವವಿದೆ. ತಮ್ಮ ಬಾಂಧವರ ಏಳಿಗೆಯಲ್ಲಿ ತಮ್ಮ ಏಳಿಗೆಯಿದೆ ಎಂಬ ಭಾವನೆಯು ಕೂಡಾ ರಾಷ್ಟ್ರೀಯತೆಯ ಸುಳಿವು"[೩೬] ಆಯಾ ದೇಶದ ಆಡಳಿತ ಮತ್ತು ಜನರ ವೈಶಿಷ್ಟ್ಯಗಳನ್ನು ಪ್ರತಿಬಿಂಬಿಸಬೇಕು ಎಂಬ ತತ್ವದ ಅಂಗೀಕಾರವೇ ರಾಷ್ಟ್ರೀಯತೆ, ಒಟ್ಟಾರೆಯಾಗಿ ತಮ್ಮ ರಾಷ್ಟ್ರದ ಬಗ್ಗೆ ಒಗ್ಗಟ್ಟು ಕಾಳಜಿ ನಂಬಿಕೆ ಪ್ರೀತಿಯಿಂದ ಎಲ್ಲ ಭಾವನಾತ್ಮಕ ಆಸ್ಥೆಯನ್ನು ಹೊಂದಿರುವುದೆ ರಾಷ್ಟ್ರೀಯತೆ.

**೫.೩.೨. ರಾಷ್ಟ್ರೀಯತೆಯ ಉಗಮ**

ಬ್ರಿಟೀಷರಿಂದಲೆ ಭಾತರೀಯರಲ್ಲಿ ರಾಷ್ಟ್ರೀಯತೆ ಕಲ್ಪನೆ ಬಂತು ಎನ್ನುವ ವಾಡಿಕೆ ಇದೆ. ಆದರೆ ಅವರು ಬರುವುದಕ್ಕಿಂತ ಮುಂಚಿತವಾಗಿನೆ ನಮ್ಮ ಸ್ಥಳೀಯರಲ್ಲಿ ರಾಷ್ಟ್ರೀಯ ಕಲ್ಪನೆ ಇತ್ತು ಎನ್ನುವುದಕ್ಕೆ ಹಲವಾರು ಕುರುಹುಗಳು ಸಿಗುತ್ತವೆ. ಆದರೆ ನಮ್ಮ ಸ್ಥಳೀಯರಲ್ಲಿ ರಾಷ್ಟ್ರೀಯತೆ ಅರ್ಥ ಬೇರೆತೆರನಾಗಿಯೆ ಇತ್ತು ಎಂದು ನಾವು ಹೇಳಬಹುದು.

ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಬ್ರಿಟೀಷರು ಮೊಗಲ ಚಕ್ರವರ್ತಿ ಔರಂಗಜೇಬನ ನಿಧನಾ ನಂತರ ರಾಜಕೀಯ ಅಧಿಕಾರಕ್ಕಾಗಿ ದೇಶಿಯ ಆಳರಸರಲ್ಲಿ ನಡೆದ ಅಂತಃಕಲಹದ ದುರುಪಯೋಗ ಪಡೆದು ರಾಜಕೀಯ ಪ್ರಭುತ್ವ ಸ್ಥಾಪಿಸುವಲ್ಲಿ ಯಶಸ್ವಿಯಾಗಿ ಆಡಳಿತದಲ್ಲಿ ಅವರು ಅನುಷ್ಠಾನಕ್ಕೆ ತಂದ ಹಲವಾರು ಕ್ರಮಗಳು ಭಾರತೀಯರಲ್ಲಿ ರಾಷ್ಟ್ರ, ರಾಷ್ಟ್ರೀಯತೆ ಪರಿಕಲ್ಪನೆ ಮೂಡಿಸುವದಕ್ಕೆ ಅದ್ಧೇಗೆ ನೆರವಾಗಿವೆ ಎಂದು ಪರಿಶೀಲಿಸುವ ಅಗತ್ಯವಿದೆ.

೧. ವಸಹಾತುಶಾಯಿಯರ ಶಿಕ್ಷಣಕ್ರಮ

೨. ಸಾರಿಗೆ–ಸಂಪರ್ಕ

೩. ವಸಹಾತುಶಾಹಿಗಳ ಕಾನೂನಿನ ಆಡಳಿತ

೪. ಕೇಂದ್ರೀಯ ಆಡಳಿತ ನೀತಿ

**೧. ವಸಹಾತುಶಾಹಿಯರ ಶಿಕ್ಷಣ ಕ್ರಮ**

ಬ್ರಿಟೀಶರು ಭಾರತಕ್ಕೆ ಬಂದನಂತರ ಅವರು ಮೊದಲು ಮಾಡಿದ್ದು ಇಲ್ಲಿಯ ಕೆಲವು ಸ್ಥಳೀಯರನ್ನು ಶಿಕ್ಷಣವಂತರನ್ನಾಗಿ ಮಾಡಿದ್ದು ಯಾಕೆಂದರೆ ಅದರ ಹಿಂದೆ ಅವರ ದುರುದ್ದೇಷ ಇತ್ತು ಎಂದು ಹೇಳಬಹುದು. ಅವರು ಭಾರತೀಯರೊಡನೆ ಸಾಮಾಜಿಕ, ಸಾಂಸ್ಕೃತಿಕ, ಮತ್ತು ರಾಜಕೀಯ ಸಂಪರ್ಕ ಬೆಳೆಸಿಕೊಳ್ಳುವುದಕ್ಕಾಗಿ, ಭಾರತೀಯರಲ್ಲಿ ಬ್ರಿಟೀಶ್ ಸರಕುಗಳ ಅಭಿರುಚಿ ಹುಟ್ಟಿಸಿ ಬ್ರಿಟಿಶ್ ಮಾರುಕಟ್ಟೆಯ ಹಿತಾಸಕ್ತಿ ವರ್ಧಿಸುವದಕ್ಕಾಗಿ ಹಾಗೂ ಸರಕಾರಿ ಆಡಳಿತದ ಕೆಳಹಂತದಲ್ಲಿ ಯುರೋಪಿಯನರ ಬದಲಾಗಿ ಭಾರತೀಯರನ್ನು ನೇಮಿಸಿ ಆಡಳಿತ ವೇಚ್ಚ ತಗ್ಗಿಸುವ ಉದ್ದೇಶದಿಂದ ಶಾಲೆಕಾಲೇಜುಗಳಲ್ಲಿ ಆಂಗ್ಲಮಾಧ್ಯಮ ಭೋದೆ ಪರಿಚಯಿಸಿ ತಿಳಿಸುವ ಮೆಕಾಲೆ ಶಿಕ್ಷಣ ಮಸೂದೆಯನ್ನು ಬ್ರಿಟೀಶ್ ಸಂಪತ್ತು ೧೮೩೫ರಲ್ಲಿ ಅಂಗೀಕರಿಸುವ ಮೂಲಕ ಭಾರತೀಯ ಶಿಕ್ಷಣ ಪದ್ಧತಿಯಲ್ಲಿ ಏಕರೂಪತೆ ತರಲಾಯಿತು. ಆಂಗ್ಲ ಭಾಷಾಮಾಧ್ಯಮದಲ್ಲಿ ಭೋದಿಸುವುದರಿಂದ ಇಲ್ಲಿಯ ಭಾರತೀಯರು ಆಂಗ್ಲ ಸಂಸ್ಕೃತಿಯ ಮತ್ತು ನಾಗರಿಕತೆಯ ಕಡೆಗೆ ಆಕರ್ಷಣೆಗೊಳಗಾದರು. ಇದರಿಂದ ಅವರಿಗೆ ಆತ್ಮಗೌರವ ಬೆಳೆಸುವುದರ ಜೊತೆಗೆ ಅವರನ್ನು ನವಮನ್ವಂತರಕ್ಕೆ ನಾಂದಿಯಾಗಿಸಿತು. ಆಂಗ್ಲರು ತಮ್ಮ ಶಿಕ್ಷಣದ ಮೂಲಕ ಭಾರತೀಯ ತರುಣರಿಗೆ ಯುರೋಪ ಚರಿತ್ರೆಗೆ ಸಂಬಂಧಿಸಿದ ಗ್ರಂಥಗಳನ್ನು ಬೋಧಿಸತೊಡಗಿದರು. ಇದರಿಂದ ಅವರು ಪುರಾತನ ಗ್ರೀಕ್ ಪ್ರಜಾಪ್ರಭುತ್ವ ವಿಧಾನ, ಬ್ರಿಟೀಶ್ ಪಾರ್ಲಿಮೆಂಟರಿ ಪದ್ಧತಿಯ ವಿಕಾಸ, ಅರಸೊತ್ತಿಗೆ ದೈವದತ್ತಾಧಿಕಾರವೆಂದು ವಾದಿಸುತ್ತಿದ್ದ ರಾಜರು ಘಟನಾತ್ಮಕ ಪ್ರಭುಗಳಾಗಿ ಪರಿವರ್ತನೆಗೊಂಡ ಬಗೆಯನ್ನು ತಿಳಿದುಕೊಂಡರು, ಇಂತಹ ತಿಳುವಳಿಕೆಯನ್ನು ಕೊಟ್ಟ ಗ್ರಂಥಗಳು ಯಾವುದೆಂದರೆ ಪ್ಲೇಟೋನ 'ರಿಪಬ್ಲಿಕ್' ರೂಸೋನ 'ಸೋಶಿಯಲ್ ಕಾಂಟ್ರಾಕ್ಟ್' ಸ್ವಾತಂತ್ರ ಸಮಾನತೆ ಭ್ರಾತೃತ್ವ ಸ್ಥಾಪನೆಗೆ ಕಾರಣವಾದ ಅಮೇರಿಕ ಫ್ರಾನ್ಸ್ ಕ್ರಾಂತಿಗಳು ಇಟಲಿಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮೆಜನಿ, ಗರಿಬಾಲ್ಡಿ ಐರ್ಲಾಂಡ್ ವಿಮೋಚನೆಗಾಗಿ ಶ್ರಮಿಸಿದ ಡಿವೇಲ್‌ರಾ ಮತ್ತು ಮೈಕೇಲ್ ಕಾಲಿನ ವ್ಯಕ್ತಿ–ವಿಚಾರಗಳು ಭಾರತೀಯರಿಗೆ ರಾಷ್ಟ್ರ ರಾಷ್ಟ್ರೀಯತೆ ಪರಿಕಲ್ಪನೆ ಮೂಡಿಸಲು ಸಹಾಯಕವಾಗಲಿದೆ ಪೌರ ಸ್ವಾತಂತ್ರ್ಯ ಹಾಗೂ ರಾಷ್ಟ್ರೀಯ ಸ್ವಾತಂತ್ರ್ಯದ ಬಗ್ಗೆ ಆಲೋಚನೆಗೆಡೆ ಮಾಡಿಕೊಟ್ಟು ರಾಜಕೀಯ ಸುಧಾರಣೆಗಳಿಗಾಗಿ ಪರಕೀಯ ಆಡಳಿತ ಒತ್ತಾಯಿಸಲು ಕಾಂಗ್ರೆಸ್ ಸಂಸ್ತೆಯ ಹುಟ್ಟಿಗೆ ಕಾರಣವಾಯಿತು. ಹಾಗೆಯೇ ವಿಭಿನ್ನ ಭಾಷೆ ಮಾತಾಡುವ ಭಾರತೀಯರನ್ನು 'ಇಂಗ್ಲೀಷ್' ಸಂಪರ್ಕ ಭಾಷೆಯಾಗಿ ಒಂದುಗೂಡಿಸಿತಲ್ಲದೆ ಅವರಿಗೆ ಬಾಹ್ಯ ಪ್ರಪಂಚದ ವಿದ್ಯಮಾನಗಳನ್ನು ತಿಳಿದುಕೊಳ್ಳಲು ನೆರವಾಯಿತು.[೪]

## ೨. ಸಾರಿಗೆ ಸಂಪರ್ಕ

ಬ್ರಿಟೀಷರು ಭಾರತಕ್ಕೆ ವ್ಯಾಪಾರಕೆಂದು ಬಂದು ದೇಶಿಯ ಆಳರಸರ ಅನೈಕ್ಯತೆಯ ದುರುಪಯೋಗ ಪಡೆದು ರಾಜಕೀಯ ಪ್ರಭುತ್ವ ಸ್ಥಾಪಿಸಿದರು. ಭಾರತದ ಕಚ್ಚಾವಸ್ತುಗಳನ್ನು ಹಡಗುಗಳ ಮುಖಾಂತರ ತಮ್ಮ ದೇಶಕ್ಕೆ ರಫ್ತುಮಾಡಲೆಳಸಿದ ಬ್ರಿಟೀಷರು ಆ ದಿಸೆಯಲ್ಲಿ ಮುಂಬೈ ಮುಂತಾದ ಹಡಗುಕಟ್ಟೆಗಳವರೆಗೆ ರೈಲು ಮಾರ್ಗನಿರ್ಮಿಸಿ ಉಗಿಬಂಡಿ ಓಡಲು ಪ್ರಾರಂಭಿಸಿದರು. ಕಚ್ಚಾವಸ್ತುಗಳನ್ನು ಬಂದರಕ್ಕೆ ಸಾಗಿಸುವುದರ ಜೊತೆಗೆ ದೇಶೀಯ ಆಳರಸರೊಡನೆ ಯುದ್ಧ ಮಾಡಲು ಬೇಕಾಗುವ ಯುದ್ಧೋಪಕರಣಗಳ ಸಾಗಾಣಿಕೆ ಹಾಗೂ ಆಡಳಿತದಲ್ಲಿ ಕಾರ್ಯಸಾಮರ್ಥ್ಯ ಹೆಚ್ಚಿಸಲು ಅಧಿಕಾರಿಗಳ ಸಂಚಾರಕ್ಕೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಪ್ರಾರಂಭವಾದ ರೈಲು ಓಡಾಡಲು, ಕಾಲಾಂತರದಿಂದ, ಜನಸಂಚಾರಕ್ಕು ವಿಸ್ತರಿಸಿ ಭಾರತೀಯರನ್ನು ಹತ್ತಿರ ತರುವ ಮೂಲಕ ಭಾವನಾತ್ಮಕ ಏಕೀಕರಣಕ್ಕೆ ಕಾರಣವಾಯಿತು.[೨೬] ಆ ನಿಟ್ಟಿನಲ್ಲಿ ಕೈಕೊಳ್ಳಬಹುದಾದ ಕ್ರಮಗಳ ಬಗ್ಗೆ ಆಲೋಚನೆ ಕಾರ್ಯೋನ್ಮುಖವಾಗಲು ನೆರವಾಯಿತು.

## ೩. ವಸಹಾತುಶಾಹಿಗಳ ಕಾನೂನಿನ ಆಡಳಿತ

ಭಾರತಕ್ಕೆ ಬ್ರಿಟಿಶು ಬರುವುದಕ್ಕಿಂತ ಮುಂಚೆ ಭಾರತವನ್ನು ಅರಸರು ಹಲವಾರು ತುಂಡುಗಳನ್ನು ಮಾಡಿ ವಿಭಜಿಸಿ ಆಡಳಿತವನ್ನು ನಿರ್ವಹಿಸುತ್ತಿದ್ದರು, ಇಂತಹ ಒಂದು ಸ್ಥಳೀಯ ಆಳರಸರ ಬಿರುಕನ್ನು ರವಾನಿಸಿದ ವಸಹಾತುಶಾಹಿಗಳು ವಿಭಜನೆ ಆಳುವ ನೀತಿಯನ್ನು ಸ್ಥಳೀಯರಲ್ಲಿ ಆಳವಾಗಿ ಬೇರೂರಿಸಿದರು. ಇದರಿಂದ ಸ್ಥಳೀಯ ಅರಸರು ಬ್ರಿಟಿಶರ ಗುಲಾಮರಾದರು ಇಂತಹ ಗುಲಾಮರನ್ನು ಸಹಿಸದ ಸ್ಥಳೀಯ ಭಾರತೀಯರು ಬ್ರಿಟಿಷ್ ಆಡಳಿತ ನೀತಿಯನ್ನು ಗಮನಿಸಿದರು. ಭಾರತದಲ್ಲಿ ಅಸ್ತಿತ್ವಕ್ಕೆ ಬಂದ ಬ್ರಿಟಿಶ್ ಆಳ್ವಿಕೆಯಾದರೋ ಕಾಲ ಕಾಲಕ್ಕೆ ಬ್ರಿಟಿಶ್ ಸಂಸತ್ತು ಪಾಸುಮಾಡಿದ ಕಾನೂನಿಗನುಗುಣವಾಗಿ ಸಮಗ್ರ ಭಾರತದ ರಾಜ್ಯಾಡಳಿತ ನಡೆಸಲೆಳಸೆದ ಹಾಗೂ ಅದಕ್ಕೆ ವ್ಯತಿರಿಕ್ತವಾದ ಆಡಳಿತ ಆಡಳಿತಾಧಿಕಾರಿಗಳನ್ನು ಆಕ್ಷೇಪಿಸುವ ಕ್ರಮದಿಂದಾಗಿ ದೇಶೀಯ ಆಳರಸರ ಸರ್ವಾಧಿಕಾರ ಆಡಳಿತದ ಸ್ಥಾನದಲ್ಲಿ ಕಾನೂನಿನ ಆಡಳಿತ ನೆಲೆಗೊಳ್ಳುವ ಮೂಲಕ ಭಾರತೀಯ ಆಡಳಿತದಲ್ಲಿ ಏಕರೂಪತೆಯುಂಟಾಗಿ ಆಡಳಿತಾತ್ಮಕ ಏಕೀಕರಣಕ್ಕೆ ನಾಂದಿಯಾಯಿತು. ಈ ಆಡಳಿತ ಏಕೀಕರಣವೇ ಭಾರತ ಹಾಗೂ ಭಾರತೀಯ ಜನತೆಯ ಒಗ್ಗೂಡುವಿಕೆಗೆ ನೆರವಾಗಿ ರಾಷ್ಟ್ರ, ರಾಷ್ಟ್ರೀಯತೆ ಪರಿಕಲ್ಪನೆ ಮೂಡಲು ಕಾರಣವಾಯತು.

## ೪. ಏಕಾಚಕ್ರಾಧಿಪತ್ಯ ಇಲ್ಲವೆ ಕೇಂದ್ರ ಸರಕಾರ (ನೀತಿ)

ಬ್ರಿಟಿಶರ ವಿಭಜಿಸಿ ಆಳುವ ನೀತಿಯಿಂದಾಗಿ ಸ್ಥಳೀಯ ಆಳರಸರು ಅನಿವಾರ್ಯವಾಗಿ ಬ್ರಿಟಿಷರ ಗುಲಾಮರಾಗಬೇಕಾಯಿತು. ಈ ತೆರದ ನೀತಿಯನ್ನು ಸಹಿಸದ ಕೆಲವು ದೇಶಿಯ ಆಳರಸರು ಅಖಿಲ ಭಾರತ ಇಲ್ಲವೆ ಸ್ಥಳೀಯ ಮಟ್ಟದಲ್ಲಿ ಪ್ರತಿರೋಧಿಸಿದರು. ಇಂತಹ ಪ್ರತಿರೋಧಗಳಲ್ಲಿ ಮುಖ್ಯವಾಗಿ ೧೮೫೭ರ ಸಿಪಾಯಿ ದಂಗೆ ಎಂದು ಗುರುತಿಸಬಹುದು. ಈ ಪ್ರತಿಭಟನೆಯಿಂದ ಕಂಪನಿಯ ಆಡಳಿತ ಸೂತ್ರಗಳನ್ನು ರಾಣಿ ಸರಕಾರಕ್ಕೆ, ವರ್ಗಾಯಿಸಲು

ಕಾರಣೀಭೂತವಾಯಿತು. ಇದರಿಂದ ಆಡಳಿತದಲ್ಲಿ ಕೆಲವೊಂದು ಅಭೂತಪೂರ್ವ ಸುಧಾರಣೆಗಳನ್ನು ತಂದಿತು ಇದರಲ್ಲಿ ವಾಯಿಸ್‌ರಾಯ್ ನೇತೃತ್ವದ ಕೇಂದ್ರ ಸರಕಾರ ಪ್ರಮುಖವಾದುದು ವಾಯಿಸ್‌ರಾಯನು ಬ್ರಿಟಿಶ್ ಪ್ರಾಂತಗಳ ಆಡಳಿತಾತ್ಮಕ ವರಿಷ್ಠನಾಗಿಯೂ ಹಾಗೂ ಅದೇ ಕಾಲಕ್ಕೆ ರಾಣಿಯ ಪ್ರತಿನಿಧಿಯಾಗಿ ಸಂಸ್ಥಾನಗಳ ಆಡಳಿತ ಮೇಲ್ವಿಚಾರಣೆ ನೋಡಿಕೊಳ್ಳುವ ಮೂಲಕ ಭಾರತದ ಭೌಗೋಳಿಕ ಹಾಗೂ ಆಡಳಿತಾತ್ಮಕ ಏಕೀಕರಣಕ್ಕೆ ಕಾರಣವಾಗಿ ಬ್ರಿಟಿಶ್ ಪ್ರಾಂತ ಹಾಗೂ ಸಂಸ್ಥಾನ ಪ್ರಜೆಗಳು ಏಕಕಾಲಕ್ಕೆ ದೇಶದ ಆಗುಹೋಗುಗಳ ಬಗ್ಗೆ ಒಂದೇ ಬಗೆಯಾಗಿ ಆಲೋಚಿಸುವಂತೆ ಮಾಡುವ ಮೂಲಕ ಭಾರತೀಯರಲ್ಲಿ ರಾಷ್ಟ್ರ ರಾಷ್ಟ್ರೀಯತೆ ಪರಿಕಲ್ಪನೆ ಮೂಡಿಸಲು ಕಾರಣವಾಯಿತು.

**೫. ಮುದ್ರಣ ಕಲೆ**

ಯೂರೋಪದಿಂದ ಭಾರತಕ್ಕೆ ಬಂದ ಮುದ್ರಣ ಕಲೆ ಭಾರತೀಯರಲ್ಲಿ ರಾಷ್ಟ್ರ ರಾಷ್ಟ್ರೀಯತೆ ಪರಿಕಲ್ಪನೆ ಮೂಡಿಸಲು ಕಾರಣಾಯಿತು.

ಹೀಗೆ ಆರಂಭವಾದ ರಾಷ್ಟ್ರೀಯತೆ ಮುಂದೆ ರಾಷ್ಟ್ರೀಯ ಚಳುವಳಿಗಳ{ಗಿ ಪರಿವರ್ತನೆ ಹೊಂದಿ ಭಾರತದ ಬಿಡುಗಡೆ ವಸಹಾತುಶಾಹಿಗಳನ್ನು ಪ್ರತಿಭಾವಿಸುವ ಒಂದು ಅಸ್ತ್ರವನ್ನಾಗಿ ಬಳಸಿಕೊಂಡು ಭಾರತೀಯರು ಅವರನ್ನು ಇಲ್ಲಿಂದ ಓಡಿಸಲು ಹಲವಾರು ಆಂದೋಲನಗಳನ್ನು ಮಾಡಿದರು ಎಂದು ಹೇಳಬಹುದು.

**೫.೩.೩. ರಾಷ್ಟ್ರೀಯತೆಯ ಪರಿಕಲ್ಪನೆ**

ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿಯೇ ನಮಗೆ ರಾಷ್ಟ್ರೀಯತೆಯ ಕಲ್ಪನೆ ಬಂದದ್ದು ಎಂದು ನಾವು ಈ ಹಿಂದೆ ನೋಡಲಾಯಿತು. ಅದರಲ್ಲೂ ಇಂಗ್ಲೀಷ್ ಶಿಕ್ಷಣದ ಫಲವಾಗಿ ದೇಶ, ರಾಷ್ಟ್ರೀಯತೆ ಮುಂತಾದ ಕಲ್ಪನೆಗಳು ಮೂಡಿದವು ಹಲವು ಸಂಸ್ಥಾನಗಳಲ್ಲಿ ಹಂಚಿಹೋಗಿದ್ದ ಇಡೀ ಭಾರತವು ಒಂದೆಂಬುದರ ಅರಿವನ್ನು ಮೂಡಿಸಿದ್ದು ಬ್ರಿಟಿಷರೇ ಆಗಿದ್ದಾರೆ. ಆಡಳಿತಾತ್ಮಕವಾಗಿ ಇಡೀ ದೇಶವನ್ನು ಬ್ರಿಟೀಷ್ ಸಾಮ್ರಾಜ್ಯದ ಏಕ ಚಕ್ರಾಧಿಪತ್ಯದ ಕಡೆಗೆ ತಂದದ್ದು, ಏಕರೂಪ ಆಡಳಿತಾತ್ಮಕ ನಿಯಮಗಳನ್ನು ನಿರೂಪಿಸಿದ್ದು, ಇಂಗ್ಲೀಷ್ ಶಿಕ್ಷಣವನ್ನು ಆರಂಭಿಸಿದ್ದು ವಿದ್ಯಾವಂತ ಭಾರತೀಯ ಜನತೆಯಲ್ಲಿ ತಮ್ಮ ದೇಶ, ಸಂಸ್ಕೃತಿಯ ಅರಿವು ಮೂಡಿಸುವಲ್ಲಿ ಸಹಾಯಕವಾಯಿತು, ಬ್ರಿಟಿಷರು ತಮ್ಮ ಆಡಳಿತಾತ್ಮಕ ಅನುಕೂಲಕ್ಕಾಗಿ ಮಾಡಿಕೊಂಡ ಪದ್ಧತಿಗಳೇ ಭಾರತೀಯರಲ್ಲಿ ರಾಷ್ಟ್ರ, ರಾಷ್ಟ್ರೀಯತೆಯ ಪರಿಕಲ್ಪನೆಗಳನ್ನು ಮೂಡಿಸಿತು, ಇಂಗ್ಲೀಷ್ ಶಿಕ್ಷಣ ಪಡೆದ ಭಾರತೀಯ ವಿದ್ಯಾವಂತ ಯುವಕರಲ್ಲಿ ಭಾರತದ ಪರಂಪರೆ ಮತ್ತು ಸಂಸ್ಕೃತಿಯ ಬಗ್ಗೆ ವಿಶೇಷ ಒಲವು ಮೂಡಲು ಆರಂಭವಾಯಿತು. ನಮ್ಮ ಧರ್ಮ, ಪರಂಪರೆ, ನಂಬಿಕೆಗಳು, ಸಂಸ್ಕೃತಿ ಮುಂತಾದವು ಪಾಶ್ಚಾತ್ಯ ಸಂಸ್ಕೃತಿಗೆ ಯಾವ ರೀತಿಯಿಂದಲೂ ಕಡಿಮೆಯಿಲ್ಲ ಎನ್ನುವ ಆತ್ಮವಿಶ್ವಾಸ ಮೂಡ ತೊಡಗಿತು. ಆಧುನಿಕ ಶಿಕ್ಷಣ ಕ್ರಮದಿಂದ ಸುಶಿಕ್ಷಿತ ಭಾರತೀಯ ವಿದ್ಯಾವಂತ ಬೇರೊಂದು ಸಂಸ್ಕೃತಿಯ ಜೊತೆ ನಮ್ಮ ಸಂಸ್ಕೃತಿಯನ್ನು ಹೋಲಿಕೆ ಮಾಡುವ, ತುಲನೆ ಮಾಡುವ

ಮನೋಭಾವವನ್ನು ಬೆಳೆಸಿಕೊಂಡನು ಭಾರತದಲ್ಲಿ ಧಾರ್ಮಿಕ ಸೇವಾಮನೋಭಾವದಿಂದ ಕೆಲಸ ನಿರ್ವಹಿಸುತ್ತಿದ ಕ್ರೈಸ್ತ ಮಿಷನರಿಗಳು ಆಧುನಿಕತೆ ಮತ್ತು ಕ್ರೈಸ್ತ ಧರ್ಮಗಳ ಮೂಲಕ ಭಾರತೀಯರನ್ನು ಬೆರಗುಗೊಳಿಸುತ್ತಿದ್ದರು ಯಂತ್ರ ಸಂಸ್ಕೃತಿಯು ಭಾರತೀಯರಿಗೆ ಯಾವಾಗಲೋ ತಿಳಿದಿತ್ತೆಂದು ಅದು ಧರ್ಮವನ್ನು ಅಳಿಸುತ್ತದೆಯೆಂಬ ಮನೋಭಾವದಿಂದಾಗಿ ಇಲ್ಲಿ ಅಭಿವೃದ್ಧಿ ಯಾಗಲಿಲ್ಲವೆಂತಲೂ ವಾದಿಸತೊಡಗಿದರು, ಇದಕ್ಕೆ ಉದಾಹರಣೆಯಾಗಿ ಗಾಂಧೀಜಿಯವರ ಯಂತ್ರ ವಿರೋಧಿ ನಿಲುವನ್ನು ಉದಾಹರಿಸಬಹುದು. ಆಗೆಯೇ ಆಧುನಿಕ ವೈದ್ಯಪದ್ಧತಿಗೆ ಪೂರ್ವದಲ್ಲಿ ಚರಕ, ಶಶ್ರೂಷರು, ಇಂತಹುದು ವೈದ್ಯ ಪದ್ಧತಿಯನ್ನು ಪ್ರತಿಪಾದಿಸಿದ್ದರು ಎಂದು ವಾದಿಸಲಾಗುತ್ತಿತ್ತು, ಪ್ರತಿಯೊಂದಕ್ಕೂ ಪೂರ್ವದೊಂದಿಗೆ ಪಶ್ಚಿಮವನ್ನು ಹೋಲಿಸುವ ಪರಿಪಾಠವು ಬೆಳೆಯಿತು. ಇದರ ಪರಿಣಾಮವಾಗಿ ಭಾರತೀಯ ಸುಶಿಕ್ಷಿತ ವಿದ್ಯಾವಂತ ಸಮುದಾಯದಲ್ಲಿ ನಮ್ಮ ದೇಶ, ಭಾಷೆ, ಸಂಸ್ಕೃತಿಯ ಬಗ್ಗೆ ಹೊಸತೊಂದು ಅರಿವು ಮೂಡಿಸಲು ಸಹಾಯಕವಾಯಿತು. ಜಾಗತಿಕ ಚರಿತ್ರೆಯ ಅರಿವಿನೊಂದಿಗೆ ನಮ್ಮದೇ ಆದ ಚರಿತ್ರೆಯ ಕ್ರಮವೊಂದು ರೂಪುಗೊಂಡಿತು, ಮೂಲತಃ ಇದು ಪಾಶ್ಚಾತ್ಯ ಚರಿತ್ರೆಯ ಬರವಣಿಗೆಯನ್ನು ಅನುಸರಿಸಿದರು ನಮ್ಮ ದೇಶೀಯ ವಿದ್ವಾಂಸರು ಸ್ಥಳೀಯ ಚರಿತ್ರೆಯ ಮೂಲಗಳನ್ನು ಬಳಸಿಕೊಂಡು ಭಿನ್ನವಾಗಿ ವ್ಯಾಖ್ಯಾನಿಸಲು ಪ್ರಯತ್ನಿಸಿದರು. ಇಂಗ್ಲಿಷ್ ಭಾಷೆಯ ಮೂಲಕ ಹರಿದು ಬಂದ ಜಗತ್ತಿನ ಇತಿಹಾಸ, ತತ್ವಜ್ಞಾನ, ಸಾಹಿತ್ಯದ ಮೂಲಕ ರಾಷ್ಟ್ರ ಮತ್ತು ರಾಷ್ಟ್ರದ ಪರಿಕಲ್ಪನೆ ಮತ್ತಷ್ಟು ಪ್ರಬಲವಾಯಿತು. ಹೀಗೆ ವಸಾಹಾತುಶಾಹಿ ಕಾಲಘಟ್ಟದಲ್ಲಿ ಮೊಳಕೆಯೊಡೆದ ರಾಷ್ಟ್ರೀಯತೆಯ ಪರಿಕಲ್ಪನೆಯು ಮುಂದೆ ಸ್ವಾತಂತ್ರ್ಯ ಹೋರಾಟದ ಕಾಲಘಟ್ಟದಲ್ಲಿ ಹೆಮ್ಮರವಾಗಿ ಬೆಳೆಯತೊಡಗಿತು.

ಇಂತಹ ರಾಷ್ಟ್ರೀಯತೆಯ ಪರಿಕಲ್ಪನೆಯು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶದ ಜನತೆಯನ್ನು ಒಗ್ಗೂಡಿಸಲು ಬಳಕೆಯಾದುದನ್ನು ಗಮನಿಬಹುದು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಎನ್ನುವ ನುಡಿಗಟ್ಟು ಬಳಕೆಯಾಗತೊಡಗಿತು. ಹೀಗೆ ಅಸ್ತಿತ್ವಕ್ಕೆ ಬಂದ ರಾಷ್ಟ್ರೀಯತೆಯ ಪರಿಕಲ್ಪನೆಯ ಸ್ವರೂಪವನ್ನು ನಾವು ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ.

### ೫.೬.೪. ರಾಷ್ಟ್ರೀಯತೆಯ ಸ್ವರೂಪ

೧. ಕೇವಲ ರಾಷ್ಟ್ರೀಯತೆ ಎಂದರೇನು ಅದರ ಅರ್ಥವನ್ನು ತಿಳಿದುಕೊಂಡರೆ ಸಾಲದು ಅದರ ಜೊತೆಗೆ ರಾಷ್ಟ್ರೀಯತೆಯ ಸ್ವರೂಪವೂ ಅಷ್ಟೇ ಮುಖ್ಯ ಯಾಕೆಂದರೆ ರಾಷ್ಟೀಯತೆ ಎನ್ನುವ ಪರಿಕಲ್ಪನೆಯು ಅದರ ವ್ಯಾಖ್ಯಾತ್ಮಕ ಅರ್ಥ ಎಲ್ಲಾ ಕಾಲದಲ್ಲಿಯೂ ಮತ್ತು ಎಲ್ಲ ಜನತೆಯಲ್ಲಿ ಮನೋಭಾವದಲ್ಲಿ ಒಂದೇತೆರನಾಗಿ ಇರುವುದಿಲ್ಲ. ಅದು ಜನಸಾಮಾನ್ಯರ ವರ್ಗ, ಅಂತಸ್ತು ಸಂಘಟನೆ ವ್ಯಾಪ್ತಿಗೆ ಅನುಗುಣವಾಗಿ ಅದನ್ನು ಅರ್ಥೈಸುವಿಕೆ ಬೇರೆ ಬೇರೆ ತೆರನಾಗಿದೆ ಅದಕ್ಕಾಗಿ ಅದರ ಸ್ವರೂಪ ಮತ್ತು ಅದರ ಅರ್ಥೈಸುವಿಕೆಯನ್ನು ಕೆಲವು ವರ್ಗಗಳನ್ನಾಗಿ ವಿಂಗಡಿಸಿಕೊಂಡು ಅದರ ಸ್ವರೂಪವನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದ್ದೇನೆ.

೧. ಬೌದ್ಧಿಕವರ್ಗದಲ್ಲಿನ ರಾಷ್ಟ್ರೀಯತೆ

೨. ಜನಸಾಮಾನ್ಯರಲ್ಲಿ ರಾಷ್ಟ್ರೀಯತೆ

೩. ಗಾಂಧಿ ನೆಲೆಯ ರಾಷ್ಟ್ರೀಯತೆ

೪. ಅಂಬೇಡ್ಕರ್ ನೆಲೆಯ ರಾಷ್ಟ್ರೀಯತೆ

೫. ಬಲಪಂಥೀಯ ನೆಲೆಯ ರಾಷ್ಟ್ರೀಯತೆ

ವಿಶೇಷವಾಗಿ ವಸಾಹತುಶಾಹಿ ಕಾಲಘಟ್ಟದಲ್ಲಿ ಅಸ್ತಿತ್ವಕ್ಕೆ ಬಂದ ದೇಶೀ ಬೌದ್ಧಿಕ ವರ್ಗವು ಹೊಂದಿದ್ದ ರಾಷ್ಟ್ರೀಯತೆಯ ಪರಿಕಲ್ಪನೆಗೂ ಮತ್ತು ಅಶಿಕ್ಷಿತ ಜನಪದ ಸಮುದಾಯವು ಅರ್ಥ ಮಾಡಿಕೊಂಡಿದ್ದ ರಾಷ್ಟ್ರೀಯತೆಯ ಪರಿಕಲ್ಪನೆಗೂ ಇರುವ ವ್ಯತ್ಯಾಸವನ್ನು ನಾವೆಲ್ಲ ಗಮನಿಸಬಹುದು. ವಿಶೇಷವಾಗಿ ಬೌದ್ಧಿಕ ವರ್ಗವು ಬಲಪಂಥಿಯ, ಎಡಪಂಥೀಯ ನೆಲೆಯ ರಾಷ್ಟ್ರೀಯತಾವಾದದ ಪರಿಕಲ್ಪನೆಯನ್ನು ಪ್ರಾತಿಪಾಧಿಸುತ್ತಿದ್ದರು ಧಾರ್ಮಿಕ ಮನೋಭಾವದ ಭಾರತದ ಪುರಾತನ ಧರ್ಮ ಸಂಸ್ಕೃತಿಯ ಪುನರುತ್ಥಾನದ ಪ್ರತಿಪಾದಕರು ಪ್ರತಿಪಾದಿಸುತ್ತಿದ್ದ ರಾಷ್ಟ್ರೀಯತೆಯ ಪರಿಕಲ್ಪನೆಗೂ, ಎಡಪಂಥೀಯ ನೆಲೆಯ ರಾಷ್ಟ್ರೀಯತೆಯ ಪರಿಕಲ್ಪನೆಗೂ ಸ್ಥೂಲ ಭಿನ್ನತೆಗಳಿದ್ದವು, ಒಟ್ಟಿನಲ್ಲಿ ಇವರು ರಾಷ್ಟ್ರದ ಪರಿಕಲ್ಪನೆಯನ್ನು ಒಪ್ಪಿಕೊಂಡು ವಸಾಹತುಶಾಹಿ ವಿರುದ್ಧದ ಸಂಘರ್ಷಕ್ಕೆ ಇದನ್ನೊಂದು ಅಸ್ತ್ರವಾಗಿ ಬಳಸಿಕೊಳ್ಳಲು ಪ್ರಯತ್ನಿಸುತ್ತಿದ್ದರು.

ಆದರೆ ಇದಕ್ಕೆ ಭಿನ್ನವಾಗಿ ಜನಪದರಲ್ಲಿದ್ದ ರಾಷ್ಟ್ರೀಯತೆಯ ಪರಿಕಲ್ಪನೆಯು ಹೆಚ್ಚು ಸೂಕ್ತವಾದುದಾಗಿತ್ತು, ಭಿನ್ನ ಭಾಷೆ, ಸಂಸ್ಥಾನಗಳ ಜನಪದರಿಗಂತೂ ಈ ರಾಷ್ಟ್ರದ ಪರಿಕಲ್ಪನೆಯನ್ನು ಆರಂಭದಲ್ಲಿ ಜೀರ್ಣಿಸಿಕೊಳ್ಳುವುದು ಕಷ್ಟವೇ ಆಗಿತ್ತು ಅದಕ್ಕೆ ತಕ್ಕಂತೆ ಭಾಷಾವಾರು ಭಿನ್ನತೆಗಳೂ ತಲೆದೋರಿದ್ದವು. ಭಿನ್ನ ಸಂಸ್ಕೃತಿಗಳ, ಭಿನ್ನ ಸಮಾಜಗಳ ಭಿನ್ನ ಬುಡಕಟ್ಟುಗಳ ಅಖಂಡ ಭಾರತವು ಒಂದು ರಾಷ್ಟ್ರವಾಗಿ ಏಕವಾಗಲು ಹೇಗೆ ಸಾಧ್ಯವಾಯಿತೆಂಬುದೇ ಕುತೂಹಲಕರ ಅಂಶವಾಗಿದೆ. ಸ್ವಾತಂತ್ರ್ಯ ಹೋರಾಟದ ಅಂಗವಾಗಿಯಷ್ಟೇ ಈ ರಾಷ್ಟ್ರೀಯತೆಯ ಪರಿಕಲ್ಪನೆಯು ಪ್ರಚಲಿತದಲ್ಲಿತ್ತು ಎನ್ನಬಹುದು. ಆದರೆ ಜನಸಾಮಾನ್ಯರು ಸ್ವಾತಂತ್ರ್ಯದ ಹೋರಾಟದ ಅಂಗವಾಗಿ ದೇಶೀಯತೆಯ ಅಸ್ತ್ರವನ್ನು ಬಳಸಿಕೊಂಡದ್ದು ನಂತರದ ಕಾಲಘಟ್ಟದಲ್ಲಿ ಅದು ಅಂದರೆ ಸ್ವಾತಂತ್ರ್ಯಾನಂತರದಲ್ಲಿ ಅಂತಹ ಭಾವನಾತ್ಮಕ ಅಂಶವಾಗಿಯೇನೂ ಉಳಿಯಲಿಲ್ಲ ಎನ್ನಬಹುದು. ಭಾಷಾವಾರು ರಾಷ್ಟ್ರಗಳು, ಭಿನ್ನ ಬುಡಕಟ್ಟುಗಳು ನಂಬಿಕೆಗಳ ವಿಭಿನ್ನ ಭಾರತವು ಇಂದು ನಮ್ಮ ಕಣ್ಮುಂದಿದೆ ಪ್ರಸ್ತುತ ಇಂತಹ ಸಂದರ್ಭದಲ್ಲಿ ನಮ್ಮ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಮರುರೂಪಿಸಿಕೊಳ್ಳುವ ತುರ್ತು ಇದೆ ಎಂದು ಭಾವಿಸಬಹುದು. ಹೀಗೆ ಮರುರೂಪಿಸಿಕೊಳ್ಳುವ ಪ್ರಯತ್ನದ ಅಂಗವಾಗಿ ನಮ್ಮ ಜನಪದರು ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಅರ್ಥಮಾಡಿಕೊಂಡ ಬಗೆ ಕುತೂಹಲಕಾರಿಯಾಗಿದೆ ಜೊತೆಗೆ ಅಧ್ಯಯನ ಯೋಗ್ಯವೂ ಆಗಿದೆ. ಈ ಪ್ರಯತ್ನದ ಭಾಗವಾಗಿ ವಸಾಹತು ಶಾಹಿಗೆ ಪ್ರತಿರೋಧವಾಗಿ ಹುಟ್ಟಿಕೊಂಡ ಲಾವಣಿ ಸಾಹಿತ್ಯದ ಮೂಲಕ

ಇಂತಹ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಮರುವ್ಯಾಖ್ಯಾನಿಸಿಕೊಳ್ಳುವ ಭಾಗವೇ ಈ ವಿಷಯ ಮಂಡನೆಯಾಗಿದೆ.

### ೧. ಬೌದ್ಧಿಕ ವರ್ಗದಲ್ಲಿನ ರಾಷ್ಟ್ರೀಯತೆ

ಭಾರತದಲ್ಲಿ ಬೌದ್ಧಿಕವರ್ಗ ಎಂದೇ ಬೌದ್ಧಿಕವಾಗಿ ಮಾನಸಿಕವಾಗಿ ಮುಂದುವರಿದ ಜನ ಎಂದು ಹೇಳಬಹುದು. ಬೌದ್ಧಿಕ ವರ್ಗದಲ್ಲಿ ರಾಷ್ಟ್ರೀಯತೆ ಎನ್ನುವ ಸ್ವರೂಪವು ಏಕರೂಪವಾಗಿತ್ತು ವಸಹಾತುಶಾಹಿಗಳು ನಮ್ಮ ಭಾರತದಲ್ಲಿ ಅವರ ಆಡಳಿವನ್ನು ಸ್ಥಾಪಿಸಿದಾಗ ಅವರ ಅನ್ಯಾಯ ಅಕ್ರಮಗಳಿಗೆ ಸೋತುಹೋಗಿರುವ ನಮ್ಮ ಸ್ಥಳೀಯ ಬೌದ್ಧಿಕ ಜನ ಅವನ್ನು ಪ್ರತಿಭಟಿಸಲು ಒಂದು ಗುಂಪು ಸಂಘಟನೆಗಳನ್ನು ರೂಪಿಸಿಕೊಂಡರು ಉದಾಹರಣೆಗೆ ಕಾಂಗ್ರೆಸ್ ಸ್ಥಾಪನೆ ಹೀಗೆ ಒಟ್ಟುಗೂಡುವುದರ ಮೂಲಕ ನಾವೆಲ್ಲರು ಒಂದು ಭಾರತದ ಪ್ರತಿಯೊಬ್ಬ ಪ್ರಜೆಗಳು ಒಂದೇ ಅದಕ್ಕಾಗಿ ಭಾರತವನ್ನು ಬ್ರಿಟಿಷರಿಂದ ಹಿಂಪಡೆಯಲು ನಾವೆಲ್ಲರೂ ಒಂದಾಗಬೇಕು ಎನ್ನುವಂತಹ ಸಂದೇಶವನ್ನು ಭಾರತದ ಪ್ರತಿಯೊಬ್ಬ ಪ್ರಜೆಗೆ ಕೊಡಲು ಪ್ರಯತ್ನಿಸಿದರು ಅಂದರೆ ಇಂತಹ ಭಾರತದ ಬೌದ್ಧಿಕ ವರ್ಗದ ಜನರಲ್ಲಿ ರಾಷ್ಟ್ರ ನವೆಲ್ಲರೂ ಒಂದೇ ಭಾರತ ಒಂದೇ ಭೂಮಿ ಒಂದೇ ಜನ ಒಂದೇ ನಾಡು ಎನ್ನುವಂತ ಕರೆಗಳನ್ನು ಜನರಿಗೆ ತಲುಪಿಸಿದರು ಇದರ ಒಂದು ಪ್ರಭಾವದಿಂದ ಭಾರತೀಯ ಹಲವಾರು ಸಾಹಿತಿ ಕವಿಗಳು ಭಾರತದ ಕುರಿತಾಗಿ ಭಾರತ ಭೂಮಿಯ ಕುರಿತಾಗಿ ಭಾರತೀಯ ರಾಷ್ಟ್ರನಾಯಕರ ಕುರಿತಾಗಿ ಅವರು ಕಾವ್ಯಗಳನ್ನು ರಚನೆ ಮಡಿದರು ಅದಕ್ಕೆ ಉದಾಹರಣೆ ಜೈ ಭಾರತ ಜನನಿಯ ತನುಜಾತೆ ಜಯ ಹೇ ಕರ್ನಾಟಕ ಮಾತೆ ಎನ್ನುವಂತ ರಾಷ್ಟ್ರಗೀತೆಯನ್ನು ನೋಡಬಹುದು. ಹಿಂದು ಮುಸಲ್ಮಾನ ಕ್ರೈಸ್ಥ ಪರಸಿಕ ನಾವೆಲ್ಲರು ಒಂದೆ ಎನ್ನುವಂತಹ ಮನೋಧರ್ಮ ಭಾರತದ ಪ್ರತಿಯೊಬ್ಬ ಬೌದ್ಧಿಕ ಜನರಲ್ಲಿ ಇತ್ತು ಎಂದು ಹೇಳಬಹುದು. ಹೀಗೆ ಬೌದ್ಧಿಕ ವರ್ಗದಲ್ಲಿ ರಾಷ್ಟ್ರೀಯತೆಯ ಸ್ವರೂಪ ಇತ್ತು ಎಂದು ನಾವು ಹೇಳಬಹುದು.

### ೨. ಜನಸಾಮಾನ್ಯರಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ

ಬೌದ್ಧಿಕ ವರ್ಗದಲ್ಲಿ ಭಾರತವನ್ನು ಅಖಂಡವಾಗಿ ನೋಡಿದರೆ ಜನಸಾಮಾನ್ಯರಲ್ಲಿ ಅದು ಹಾಗಿರಲಿಲ್ಲ ಅವರು ತಾವು ವಾಸಿಸುವ ಸ್ಥಳ ಪರಿಸರ ಭಾಷೆ ಒಟ್ಟಾರೆ ತಮ್ಮ ಸುತ್ತಮುತ್ತ ಇರುವ ಗುಂಪು ಸಮುದಾಯ ಪ್ರದೇಶವನ್ನು ಒಂದು ರಾಷ್ಟ್ರ ಒಂದು ದೇಶ ಎನ್ನುವಂತ ಪರಿಕಲ್ಪನೆ ಅವರಿಗಿತ್ತು ಸ್ಥಳೀಯ ಆಡಳಿತ ಸ್ಥಳೀಯ ರಾಜ ಅವರನ್ನು ಮತ್ತು ಅವರು ತಮ್ಮ ದೇಶದ ನಾಯಕ ಎಂದು ಅಂದುಕೊಂಡಿದ್ದಾರೆ ಇದೆ ಒಂದು ಪರಿಕಲ್ಪನೆಯಿಂದ 'ದೇಶಿಯತೆ' ಎನ್ನುವಂತ ಪರಿಕಲ್ಪನೆ ಬೆಳಕಿಗೆ ಬಂತು ಎಂದು ಹೆಳಬಹುದು ಉದಾಹರಣೆಗೆ ನಾವು ಹಲವಾರು ಜನಪದ ಹಾಡುಗಳಲ್ಲಿ ಒಂದೊಂದು ನಗರ ಒಂದೊಂದು ಹೊಬಳಿ ಪ್ರದೇಶ ಅವರಲ್ಲಿ ದೇಶವಾಗಿ ಕಂಡಿರುವುದನ್ನು ನಾವು ನೋಡಬಹುದು.

ಸ್ಥಳೀಯ ಜನಪದರಲ್ಲಿ ರಾಷ್ಟ್ರ ರಾಷ್ಟ್ರೀಯತೆ ಪರಿಕಲ್ಪನೆ ಇರಲಿಲ್ಲ ಅವರು ತಾವು ವಾಸಿಸುವ ಸ್ಥಳ ಸಾಮ್ರಾಜ್ಯ ಮಾತ್ರ ಒಂದು ದೇಶವಾಗಿ ಕಾಣುತ್ತಿದ್ದರು. ಇದರ ಒಂದು ಮುಂದುವರಿದ ಕ್ರಮವೆ ಭಾರತದಲ್ಲಿ ಜಿಲ್ಲೆಗಳಾಗಿ ಮಾರ್ಪಟಿರಬಹುದು ಎಂದು ಹೇಳಬಹುದು.

**೩. ಗಾಂಧಿನೆಲೆಯ ರಾಷ್ಟ್ರೀಯತೆ**

ಗಾಂಧಿ ನೆಲೆಯ ರಾಷ್ಟ್ರೀಯತೆಯು ಭಾರತದ ಬೌದ್ಧಿಕ ವರ್ಗದ ರಾಷ್ಟ್ರೀಯತೆಯಗೆ ಹೊರತಾಗಿರಲಿಲ್ಲ. ಗಾಂಧಿಯ ಮನೋಭಾವದಲ್ಲಿ ಭಾರತದ ಪ್ರತಿಯೊಬ್ಬ ಪ್ರಜೆಯು ಒಂದೇ ನಾವೆಲ್ಲರೂ ಒಟ್ಟು ಗೂಡಿದಾಗ ಭಾರತಕ್ಕೆ ಸ್ವತಂತ್ರ್ಯ ಸಿಗುತ್ತೆ ಎನ್ನುವಂತ ಮನೋಭಾವದಿಂದ ಅವರು ಭಾರತೀಯರನ್ನು ಒಟ್ಟು ಗೂಡಿಸಲು ಪ್ರಯತ್ನಿಸಿದರು ಭಾರತಕ್ಕೆ ಸ್ವಾತಂತ್ರ ಸಿಗುವ ಮುಂಚೆ ಭಾರತದ ಜನತೆಯನ್ನು ಚುರೂ ಚದುರದ ಹಾಗೆ ನೋಡಿಕೊಂಡರು ಭಾರತದ ಹೊರಟಗಾರರು ಭಾರತದ ಪ್ರಜೆಗಳು ಚದುರದೆ ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯಲು ಅಸಾಧ್ಯವಾಗುತ್ತದೆ ಮತ್ತೆ ಬ್ರಿಟಿಷರ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಾರೆ ಎಂದು ಅವರು ಭಾರತದಲ್ಲಿದ್ದ ಪ್ರತಿಯೊಂದು ಗುಂಪು ಸಂಘಗಳು ಬೇರೆ ಬೇರೆ ಮನೋಧರ್ಮಗಳನ್ನು ಒಟ್ಟುಗೂಡಿಸಲು ಪ್ರಯತ್ನಿಸಿದ್ದು. ಅದಕ್ಕಾಗಿನೆ ಅವರು ಭಾರತ ಮತ್ತು ಪಾಕಿಸ್ತಾನದ ವಿಭಜನೆಗೆ ಒಪ್ಪಿರುವುದು, ಭಾರತವನ್ನು ಬ್ರಿಟಿಷರಿಂದ ಹಿಂಪಡೆಯಲು ಮುಸ್ಲಿಂ ಧರ್ಮದ ಸಹಾಯವು ಬೇಕು ಮುಸ್ಲಿಂರನ್ನು ಅವರ ಪ್ರತ್ಯೇಕತೆಯ ಬೇಡಿಕೆಗೆ ಒಪ್ಪದಿದ್ದರೆ ಭಾರತದಿಂದ ಬ್ರಿಟಿಷರನ್ನು ಓಡಿಸಲು ಸಾಧ್ಯವಾಗುವುದಿಲ್ಲ ಎಂದು ಅವರು ಪ್ರತ್ಯೇಕತೆಗೆ ಒಪ್ಪಿಕೊಂಡರು ಹಾಗೇನೆ ಅಂಬೇಡ್ಕರ ಅವರು ದಲಿತ ವರ್ಗದವರಿಗು ಮಾಡುವ ಎಲ್ಲ ಕಾನೂನುಗಳಿಗೆ ಅವರು ಕೂಡಾ ಸಹಕಾರವನ್ನು ನೀಡಿದರು ಇದರಿಂದ ಗಾಂಧೀಜಿಯಲ್ಲಿ ರಾಷ್ಟ್ರೀಯತೆ ಹೇಗಿತ್ತು ಎಂದು ತಿಳಿಯುತ್ತಿದೆ ಪ್ರತಿಯೊಬ್ಬ ಭಾರತೀಯನು ಒಂದು ಎಂಬ ಮನೋಭಾವ ಇತ್ತು ಎಂದು ಹೇಳಬಹುದು.

**೪. ಅಂಬೇಡ್ಕರ ನೆಲೆಯ ರಾಷ್ಟ್ರೀಯತೆ**

ರಾಷ್ಟ್ರೀಯತೆ ಎನ್ನುವುದು ಒಂದು ಗುಂಪು ಒಂದೇ ಮನೋಧರ್ಮವನ್ನು ಹೊಂದಿದ ಜನತೆ ಎಂದು ಅರ್ಥೈಸುವುದರಿಂದ ಇವರಲ್ಲಿ ರಾಷ್ಟ್ರೀಯತೆ ಎಂದರೆ ಕೇವಲ ದಲಿತ ವರ್ಗ ದಲಿತ ಜನಾಂಗ ನಾವೆಲ್ಲ ಒಂದೇ ಅದಕ್ಕಾಗಿನೆ ದಲಿತರಿಗೂ ಪ್ರತ್ಯೇಕ ಮಿಸಾಲಾತಿ ಪ್ರತ್ಯೇಕ ಮಸೂದೆಗಳನ್ನು ಅವರು ರೂಪಸಿದರು ಇವರಲ್ಲಿ ಕೇವಲ ದಲಿತ ಜನಾಂಗ ಅಷ್ಟೇ ನಾವೆಲ್ಲರೂ ಒಂದು ನಮ್ಮನ್ನು ಶೋಷಣೆಯನ್ನು ಮಾಡುವವರನ್ನು ವಿರೋಧಿಸಿ ನಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕು.ನಾವು ಮನುಷ್ಯರು ನಮಗೂ ಸಮಾನತೆ ಬೇಕು ಎಂದು ಕರೆಯನ್ನು ಕೊಟ್ಟು ಅದಕ್ಕೆ ಬದ್ಧರಾಗಿ ಹೋರಾಟವನ್ನು ಮಾಡಿ ಅವರು ತಮ್ಮ ರಾಷ್ಟ್ರೀಯತೆ ಮನೋಧರ್ಮವನ್ನು ಪ್ರತಿಬಿಂಬಿಸಿದರು.

### ೫. ಬಲಪಂಥಿಯರಲ್ಲಿ ರಾಷ್ಟ್ರೀಯತೆ

ಹಿಂದುತ್ವ, ಹಿಂದು, ಹಿಂದು ಜನಾಂಗ, ಹಿಂದುಧರ್ಮದ ಸಂಸ್ಕೃತಿ ಆಚಾರ ವಿಚಾರ ಅವರ ವಿಚಾರಗಳು ಭಾರತೀಯ ಸಂಸ್ಕೃತಿ ಆಚರಣೆ ಧರ್ಮ ಒಟ್ಟು ಹಿಂದು ಧರ್ಮವೆ ಒಂದು ಅದೇ ರಾಷ್ಟ್ರ ಎನ್ನುವ ಮನೋಧರ್ಮವನ್ನು ಅವರು ಹೊಂದಿದ್ದರು.

ಹೀಗೆ ರಾಷ್ಟ್ರೀಯತೆಯ ಬೇರೆ ಪರಿಕಲ್ಪನೆಗಳು ಬೇರೆ ಬೇರೆ ಸಂಘ, ಪಂಗಡಗಳಿಗೆ ಅನುಗುಣವಾಗಿ ಅದು ತನ್ನ ಅರ್ಥವನ್ನು ಸೀಮಿತಗೊಳಿಸಿಕೊಂಡಿತ್ತು ಎಂದು ಹೇಳಬಹುದು. ಹೀಗೆ ನಾವು ರಾಷ್ಟ್ರೀಯತೆಯ ಅರ್ಥ ವ್ಯಾಖ್ಯಾನ ಸ್ವರೂಪ ಮತ್ತು ಅದರ ಉಗಮವನ್ನು ಇಲ್ಲಿಯವರೆಗೆ ತಿಳಿದುಕೊಂಡೆವು.

### ೫.೩.೫. ಲಾವಣಿಯಲ್ಲಿ ರಾಷ್ಟ್ರೀಯತೆಯ ನೆಲೆಯ ಪ್ರತಿರೋಧದ ನೆಲೆಗಳು

೧೯೨೪ರಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡ ಕಾಂಗ್ರೆಸ್ ಅಧಿವೇಶನ ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರ ನಡುವಿನ ತಪ್ಪು ಕಲ್ಪನೆಯನ್ನು ತೊಡೆದು ಹಾಕಿದ ಕಾರಣ ಸಹಸ್ರಾರು ಸಂಖ್ಯೆಯಲ್ಲಿ ಬ್ರಾಹ್ಮಣೇತರರು ಕಾಂಗ್ರೆಸ್ ಸೇರಿ ರಾಷ್ಟ್ರೀಯ ಕಲ್ಪನೆ(ಭಾವನೆ) ಬಲಗೊಳ್ಳುವ ವಾತವರಣಾ ನಿರ್ಮಿಸಿತು. ನಗರ ಪ್ರದೇಶದ ಸುಶಿಕ್ಷಿತರಂತೂ ಬ್ರಿಟಿಷ್ ದಮನಕಾರಿ ಧೋರಣೆಗಳ ಧಿಕ್ಕಾರ ಹಾಗೂ ಸ್ವಾರಾಜ್ಯ ಸಂಪಾದನೆಗಾಗಿ ಶ್ರಮಿಸುತ್ತಿರುವ ಗಾಂಧೀಜಿ, ಸುಭಾಸಚಂದ್ರಬೋಸ್ ಮುಂತಾದ ಕಾಂಗ್ರೆಸ್ ಧುರೀಣರ ಜೈಕಾರ ಮಾಡಲು ಸಾವಿರಾರು ಸಭೆಗಳನ್ನು ಏರ್ಪಡಿಸಿ ರಾಷ್ಟ್ರೀಯ ಜಾಗ್ರತೆಗೆ ಕಾರಣರಾದರೂ ಸಾರಿಗೆ ಸಂಪರ್ಕದ ಅಭಾವದಿಂದಾಗಿ ತಮ್ಮ ಕಾರ್ಯ ಚಟುವಟಿಕೆಗಳನ್ನು ಗ್ರಾಮಾಂತರ ಪ್ರದೇಶಗಳಿಗೆ ವಿಸ್ತರಿಸಲಾಗದಿದ್ದರಿಂದ ಗ್ರಾಮಾಂತರ ಜನರು ರಾಷ್ಟ್ರೀಯ ಪ್ರತಿರೋಧಗಳಿಂದ ದೂರ ಉಳಿದರು, ಹಾಗೆಯೇ ಅನಕ್ಷರತೆ, ಅಜ್ಞಾನ, ಕಿತ್ತು ತಿನ್ನುತ್ತಿರುವ ಬಡತನದಿಂದಾಗಿ ಗ್ರಾಮಾಂತರ ಜನತೆ ತಮ್ಮ ಹೊಟ್ಟೆ ಬಟ್ಟೆಗೆ ಹೆಚ್ಚು ಗಮನಕೊಟ್ಟರೆ ವಿನಃ ಸ್ವರಾಜ್ಯ ಸಂಪಾದನೆಯ ಗುರಿಯೊಂದಿಗೆ ಆರಂಭಗೊಂಡ ರಾಷ್ಟ್ರೀಯ ಪ್ರತಿರೋಧಗಳ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಇದನ್ನು ಮನಗಂಡ ಕಾಂಗ್ರೆಸ್ ಕಾರ್ಯಕರ್ತರು ಗ್ರಾಮಾಂತರ ಪ್ರದೇಶಗಳ ಹಿಂದುಳಿವಿಕೆಗೆ ಹಾಗೂ ಅವರು ಅನುಭವಿಸುತ್ತಿರುವ ಕಷ್ಟಕಾರ್ಪಣ್ಯಗಳಿಗೆ ಪರಕೀಯ ಆಳ್ವಿಕೆಯೇ ಕಾರಣವಾಗಿದ್ದು ಅದರ ಮೂಲೋದ್ಘಾಟನೆಗಾಗಿ ಉದ್ದೇಶಿಸಲಾಗಿರುವ ರಾಷ್ಟ್ರೀಯ ಪ್ರತಿಭಟನೆಗಳಡೆಗೆ ಗ್ರಾಮಾಂತರ ಜನತೆಯನ್ನು ಆಕರ್ಷಿಸಲು ಹಲವಾರು ತಂತ್ರಗಳನ್ನು ರೂಪಿಸಿದರು 'ಲಾವಣಿ'ಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟರು. ಇದಕ್ಕೆ ಹಲವು ಕಾರಣಗಳನ್ನು ಕೊಡಬಹುದು, ನಾಟಕ, ಸಿನೇಮಾಗಳು, ಗ್ರಾಮಾಂತರ ಪ್ರದೇಶಗಳನ್ನು ಪ್ರವೇಶಿಸುವ ಮೊದಲು ಲಾವಣಿಗಳೇ ಜನಪದರ ಮನರಂಜನೆಯ ಸಾಧನಗಳಾಗಿದ್ದವು. ಲಾವಣಿ ರಚಿಸಿದವರು ಹಾಗೂ ಅವುಗಳನ್ನು ಹಾಡುವವರು ಗ್ರಾಮೀಣ ಪ್ರದೇಶದವರಾದ ಕಾರಣ ಜನಪದರ ಭಾಷೆ ಅಂತ್ಯಪ್ರಾಸ, ಲಯ, ಗತ್ತು, ಹಿನ್ನೆಲೆ ವಾದ್ಯಪರಿಕರಳ

ಬಳಕೆಯಿಂದಾಗಿ ಲಾವಣಿಗಳು ತಕ್ಷಣವೇ ಜನಮನಸ್ಸನ್ನು ಆಕರ್ಷಿಸುತ್ತಿದ್ದವು. ಅಲ್ಲದೆ, ಪೇಶ್ವೆಯರ ಕಾಲದಲ್ಲಿ ಯುದ್ಧ ಸಂದರ್ಭದಲ್ಲಿ ಸೈನಿಕರಿಗೆ ಹುರುಪು, ಹುಮ್ಮಸ ನೀಡುವುದಕ್ಕಾಗಿ ಲಾವಣಿ ಪೋವಾಡ ಹೇಳಿಸುತ್ತಿದ್ದಾರೆಂಬ ಸಂಗತಿ ಮತ್ತು ಕಡಿಮೆ ಖರ್ಚು ಸಮಯದಲ್ಲಿ ಹೆಚ್ಚು ಸಮರ್ಥವಾಗಿ ವಿಸ್ತ್ರತವಾಗಿ ರಾಷ್ಟ್ರೀಯ ಪ್ರತಿರೋಧಗಳ ವಿದ್ಯಮಾನಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರಮಾಡಲು ಸಾಧ್ಯವೆಂಬುದನ್ನು ಮನಗಂಡ ಕಾಂಗ್ರೆಸ್ ಕಾರ್ಯಕರ್ತರು ಲಾವಣಿ ರಚಯತರಲ್ಲಿ ತಮ್ಮ ಉದ್ದೇಶ ಪ್ರಸ್ತಾಪಿಸಿದರು.

ಇದಕ್ಕಿಂತ ಮುಂಚೆ ಹಬ್ಬ ಹರಿದಿನಗಳ ಸಂದರ್ಭದಲ್ಲಿ ಗ್ರಾಮಾಂತರ ಪ್ರದೇಶದ ಜನರ ವಿಶೇಷ ಆಮಂತ್ರಣದ ಮೇರೆಗೆ ತಾವು ರಚಿಸಿದ ಲಾವಣಿಗಳನ್ನು ಮೇಳದೊಂದಿಗೆ ಕರ್ಣಮಧುರವಾಗಿ ಹಾಡಿ ಜನಮನ ರಂಜಿಸಿ ಕಾಣಿಕೆ ಪಡೆಯುತ್ತಿದ್ದ ಲಾವಣಿ ರಚನೆಕಾರರು ಇದೀಗ ಕಾಂಗ್ರೆಸ್ ಕಾರ್ಯಕರ್ತರ ಕೋರಿಕೆ ಅವರ ಕಲೆ ಸಾಹಿತ್ಯಕ್ಕೆ ಹೊಸ ತಿರುವು ನೀಡದಿರಲಿಲ್ಲ. ಪ್ರಾಥಮಿಕ ಶಿಕ್ಷಣ ಪಡೆದು ತಮ್ಮ ದಿನನಿತ್ಯದ ಉದ್ಯೋಗಗಳಲ್ಲಿ ತೊಡಗಿಸಿಕೊಂಡ ಲಾವಣಿ ರಚಯತರು ಕಾರ್ಯನಿಮಿತ್ತ ಪಟ್ಟಣಕ್ಕೆ ಹೋದಾಗ ದೇಶದ ಆಗು ಹೋಗುಗಳ ಬಗ್ಗೆ ಸುಶಿಕ್ಷಿತರಿಂದ ಅಲ್ಪ ಸ್ವಲ್ಪ ತಿಳಿದುಕೊಂಡಿದ್ದರೂ ಹೆಚ್ಚಿನ ಗಮನ ಕೊಟ್ಟಿದಿಲ್ಲ, ಇದೀಗ ಕಾಂಗ್ರೇಸ್ ಕಾರ್ಯಕರ್ತರ ಆಹ್ವಾನ ಅವರಿಗೆ ಉಪಜೀವನ ಹಾಗೂ ಜನಮನ ರಂಜಿಸುವುದ ರಾಚೆಗಿರುವ ರಾಷ್ಟ್ರೀಯ ಕಾರ್ಯದಲ್ಲಿ ತೊಡಗಿಸಿಕೊಳ್ಳುವುದರ ಅವಶ್ಯಕತೆ ಕಲ್ಪಿಸಿಕೊಟ್ಟು ಕಾರಣ ರಾಷ್ಟ್ರೀಯ ಧುರೀಣರ ವ್ಯಕ್ತಿ ವಿಚಾರಗಳು ಹಾಗೂ ರಾಷ್ಟ್ರೀಯ ಪ್ರತಿರೋಧಗಳ ವಿದ್ಯಮಾನಗಳನ್ನು ಹೆಚ್ಚು ಹೆಚ್ಚು ತಿಳಿದುಕೊಳ್ಳಲು ಹಚ್ಚಿತು, ಪರಿಣಾಮವಾಗಿ ಲೋಕಮಾನ್ಯ ಬಳಿಕ ಗಾಂಧೀಜಿ, ಸುಭಾಸ ಚಂದ್ರಭೋಸ್ ಮುಂತಾದ ರಾಷ್ಟ್ರೀಯ ಧುರೀಣರು ಹುತಾತ್ಮ ಮೈಲರ ಮಹದೇವಪ್ಪ ಕ್ರಾಂತಿವೀರ ವಾಲಿಚನ್ನಪ್ಪ ಮುಂತಾದ ಕರ್ನಾಟಕದ ಸ್ವತಂತ್ರ್ಯಯೋಧರು ಹಾಗೂ ಬ್ರಿಟಿಷ್ ಸರಕಾರದ ದಮನಕಾರಿ ಧೋರಣೆಗಳನ್ನು ಪ್ರತಿಭಟಿಸಿ ಸ್ವರಾಜ್ಯ ಸಂಪಾದನೆಗಾಗಿ ಹುಟ್ಟು ಹಾಕಿದ ರಾಷ್ಟ್ರೀಯ ಪ್ರತಿಭಟನೆಗಳ ವಿದ್ಯಮಾನಗಳನ್ನು ಲಾವಣಿ ರೂಪದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರ ಮಾಡುವುದರಲ್ಲಿದೆ, ಈ ಮೊದಲು ಬ್ರಿಟಿಷರ ಆಳ್ವಿಕೆಯನ್ನು ಭಾರತದಲ್ಲಿ ಶಾಶ್ವತವಾಗಿ ನೆಲೆಗೊಳಿಸಲು ಪೂರಕವಾದ ದತ್ತಕ ಹಕ್ಕುಗೇಡಿತನ, ಶಸ್ತ್ರಾಸ್ತ್ರ ತ್ಯಾಗ ಮುಂತಾದ ದುಷ್ಟ ಶಾಸನಗಳನ್ನು ವೀರತನದಿಂದ ಪ್ರತಿಭಟಿಸಿ ಅಮರರಾದ ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ನರಗುಂದ ಬಾಬಾಸಾಹೇಬ, ಮುಂಡರಗಿ ಭೀಮರಾಯ, ಸಿಂಧೂರ ಲಕ್ಷ್ಮಣ ಹಲಗಲಿ ಬೇಡರ ಕುರಿತು ಪ್ರಚಲಿತವಿದ್ದ ಲಾವಣಿಗಳನ್ನು ಸಂದರ್ಭಕ್ಕನುಸಾರವಾಗಿ ಹಾಡಿ ಬ್ರಿಟಿಷರ ವಿರುದ್ಧ ಜನಸಾಮಾನ್ಯರ ಅಸಂತುಷ್ಟಿ ವೃದ್ಧಿಗೊಳ್ಳುವ ವಾತಾವರಣ ನಿರ್ಮಿಸುವ ಮೂಲಕ ಗ್ರಾಮೀಣ ಜನರನ್ನು ರಾಷ್ಟ್ರೀಯ ಚಳವಳಿಯೆಡೆಗೆ ಆಕರ್ಷಿಸುವಲ್ಲಿ ಯಶಸ್ವಿಯಾದರು.

### ರಾಷ್ಟ್ರೀಯತೆಯ ನೆಲೆಯ ಪ್ರತಿರೋಧಗಳು

ಈ ಮೊದಲೇ ಹೇಳಿದಂತೆ ಗ್ರಾಮಾಂತರ ಪ್ರದೇಶದ ಜನತೆಯನ್ನು ರಾಷ್ಟ್ರೀಯ ನೆಲೆಯ ಪ್ರತಿರೋಧಗಳ ಕಡೆಗೆ ಆಕರ್ಷಿಸುವ ಸದುದ್ದೇಶದಿಂದ ಸೃಷ್ಟಿಸಿದ ರಾಷ್ಟ್ರೀಯ ಲಾವಣಿಯನ್ನು

ಸ್ವಭಾವಕ್ಕನುಗುಣವಾಗಿ ಅವುಗಳ ನೆಲೆಗಳನ್ನು ಮೂರು ವಿಧವಾಗಿ ವಿಂಗಡಿಸಿ ಅಧ್ಯಯನಕ್ಕೊಳಪಡಿಸಲಾಗುತ್ತದೆ. ಅವು

೧. ಭಾರತದ ಗತವೈಭವದ ನೆಲೆ

೨. ರಾಷ್ಟ್ರೀಯ ಧುರೀಣರ ನೆಲೆ

೩. ರಾಷ್ಟ್ರೀಯ ಪ್ರತಿಭಟನೆಗಳ ನೆಲೆ

**೧. ಭಾರತದ ಗತವೈಭದ ನೆಲೆ**

ಭಾರತವನ್ನು ಪ್ರಾಚೀನ ದೇಶವೆಂದು ಕರೆಯುತ್ತೇವೆ. ಯಾಕೆಂದರೆ ಅದಕ್ಕೆ ಸಾವಿರ ವರುಷಗಳು ಇತಿಹಾಸವಿರುವುದು ಕಂಡುಬರುತ್ತದೆ. ಇಂತಹ ಇತಿಹಾಸವಿರುವ ಭಾರತದೇಶ ಹಲವಾರು ತುಂಡುಗಳಾಗಿ ವಿಭಾಗಿಸಲ್ಪಟ್ಟು ದೇಶೀಯ ಆಳರಸರ ಸ್ವತಂತ್ರ ಆಳ್ವಿಕೆಗೊಳಪಟ್ಟಿತ್ತು. ದೇಶಿಯ ಆಳರಸರು ದೇಶದ ಭಾವೈಕ್ಯತೆ ಮತ್ತು ಅದರ ಹಿತಾಸಕ್ತಿಯನ್ನು ಕಾಪಾಡುವುದು ಮರೆತಿದ್ದರು ಅದರ ಬದಲಾಗಿ ವೈಯಕ್ತಿಕ ಹಿತಾಸಕ್ತಿಗೆ ಅವರು ಹೆಚ್ಚು ಗಮನಕೊಟ್ಟರು ಇಂತಹ ಒಂದು ನಿರಸವಾದ ಸ್ಥಳೀಯ ಆಡಳಿತವನ್ನು ಗಮನಿಸಿದ ವಸಹಾತುಶಾಹಿಗು ದೇಶದ ಆಡಳಿತದ ಚುಕ್ಕಾಣಿಯನ್ನು ಹಿಡಿದರು, ಸ್ಥಳೀಯ ಅರಸರು ಸಹಿತ ವಸಹಾತುಶಾಹಿಗಳ ಕೈ ಜೋಡಿಸಿದರು. ಇದರಿಂದ ಭಾರತದ ಆಡಳಿತ ಅಂತ್ಯವಾಗುತ್ತಾ ಬಂತು.

ಹದಿನಾರನೆಯ ಶತಮಾನದಲ್ಲಿ ಯುರೋಪದಲ್ಲಿ ಅರಳಿದ ರಾಷ್ಟ್ರ, ರಾಷ್ಟ್ರೀಯತೆ ಪರಿಕಲ್ಪನೆ, ೧೯ನೆಯ ಶತಮಾನದಲ್ಲಿ ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣ ಕೊಡಬೇಕೆನ್ನುವ ಬ್ರಿಟಿಷ್ ಸರಕಾರದ ಕ್ರಮದಿಂದಾಗಿ ಭಾರತೀಯ ಸುಶಿಕ್ಷಿತರಲ್ಲಿ ಮೂಡಿ ಸ್ವರಾಜ್ಯ ಸಂಪಾದನೆಗಾಗಿ ರಾಷ್ಟ್ರೀಯ ಪ್ರತಿಭಟನೆಗಳನ್ನು ಹೂಡಿದರೂ ಅಶಿಕ್ಷಿತರಾದ ಗ್ರಾಮಾಂತರ ಜನರು ಅದರಲ್ಲಿ ಆಸಕ್ತಿ ವಹಿಸಲಿಲ್ಲ. ಇದನ್ನು ಅರಿತ ರಾಷ್ಟ್ರೀಯ ಪ್ರತಿಭಟನಾಕಾರರು ಗ್ರಾಮಾಂತರ ಜನರಿಗೆ ಭಾರತದ ಗತವೈಭವ ವಿವರಿಸಿ ಅವರಲ್ಲಿ ರಾಷ್ಟ್ರದ ಪರಿಕಲ್ಪನೆ ಮೂಡಿಸಿ ಅವರನ್ನು ಪ್ರತಿಭಟನೆಗೆ ಸೇರಿಸಿಕೊಳ್ಳುವ ಉದ್ದೇಶದಿಂದ ಭಾರತದ ಗತವೈಭವ ಭಾರತದ ಬಗ್ಗೆ ಇರುವ ದೇಶಭಕ್ತಿ ಭಾರತಾಂಬೆ ಭಾರತದ ರಾಷ್ಟ್ರಗೀತೆ ಮುಂತಾದವುಗಳ ಪರಿಕಲ್ಪನೆಯನ್ನು ಜನಸಾಮಾನ್ಯರಲ್ಲಿ ಹೆಚ್ಚಿಸುತ್ತಾ ಹೋದರು ಇದರಿಂದ ಭಾರತದ ಗತವೈಭವದ ಬಗ್ಗೆ ಜನರ ಮನಸ್ಸಿನಲ್ಲಿ ಪವಿತ್ರಭಾವ ಮೂಡಿ ದೇಶವನ್ನು ಬಿಟೀಷರ ಆಡಳಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದರು. ಇಂತಹ ಭಾರತದ ಗತವೈಭವದ ನೆಲೆಯ ಪ್ರತಿಭಟನೆಗಳನ್ನು ಲಾವಣಿಯ ಮುಖೇನ ತಿಳಿಯುವುದು ಇದರ ಉದ್ದೇಶವಾಗಿದೆ.

ಭಾರತದ ವಿಸ್ತೀರ್ಣ, ಉತ್ತರದ ದಿಕ್ಕಿನಲ್ಲಿ ಹಬ್ಬಿರುವ ಪರ್ವತ ಸಾಲು, ಉತ್ತರಕ್ಕಿರುವ ಎತ್ತರದ ಗೌರಿಶಂಕರ ಶಿಕರ ಎಡಬಲಕ್ಕಿರುವ ಬಂಗಾಲ ಉಪಸಾಗರ ಅರಬೀ ಸಮುದ್ರ : ಸಿಂಧು, ಬ್ರಹ್ಮಪುತ್ರ, ಗಂಗಾ, ಯಮುನಾ, ತುಂಗಭದ್ರ ಮುಂತಾದ ನದಿಗಳು, ಮುತ್ತು,

ಮಾಣಿಕ್ಯ, ಬಂಗಾರ, ಖನಿಜಗಳು, ಗೋಧಿ, ಜೋಳ, ಮುಂತಾದ ಆಹಾರಧಾನ್ಯಗಳು ಕುಸುಬಿ, ಸೇಂಗಾ ಮುಂತಾದ ಎಣ್ಣೆಕಾಳುಗಳು, ಹಣ್ಣು, ಹಂಪಲು, ಗಿಡಗಂಟೆಗಳಿಂದ ಮೆರೆಯುವ ಅರಣ್ಯ ಸಂಪತ್ತು. ಹವಾಮಾನ, ಜನಸಂಖ್ಯೆ, ಹಿಂದೂ, ಮುಸಲ್ಮಾನ, ಕ್ರಿಶ್ಚಿಯನ್ ಮುಂತಾದ ಧರ್ಮೀಯರು ನೆಲೆಗೊಂಡ ಬಗ್ಗೆ ಸವಿಸ್ತಾರ ಮಾಹಿತಿ ಮಾಡಿಕೊಡುತ್ತ ದೇಶೀಯ ಆಳರಸರ ಹಾಗೂ ಹಿಂದೂ ಮುಸಲ್ಮಾನ ಜನಾಂಗಗಳ ಅನೈಕ್ಯತೆಯಿಂದಾಗಿ ಭಾರತದಲ್ಲಿ ಬ್ರಿಟೀಷ್ ಪ್ರಭುತ್ವ ಸ್ಥಾಪನೆಗೊಂಡ ಹಿನ್ನೆಲೆ, ಬ್ರಿಟೀಷರಿಗೆ ಸಂಬಳ ಹಾಗೂ ಇನ್ನಿತರ ಸೌಕರ್ಯಗಳನ್ನು ಒದಗಿಸುವುದಕ್ಕಾಗಿ ಭಾರತದ ಸಂಪತ್ತು ಇಂಗ್ಲೆಂಡಿಗೆ ಹೊಳೆಯಾಗಿ ಹರಿದು ಹೋಗಿ ಭಾರತ ಅವನತಿಗೊಳ್ಳುತ್ತಿರುವುದನ್ನು ಹುಲಕಕುಂದ ಭೀಮಕವಿ ಲಾವಣಿಯ ಮುಖೇನ ನೋಡಬಹುದು.

"ಪುಣ್ಯ ಭೂಮಿಯೆಂದರೆ ಹಿಂದುಸ್ಥಾನ
ಕೇಳರಿ ಸರ್ವಜನ ಹೇಳುವೆನು ಪೂರ್ಣ
ಇರಲಿ ನಿಮ್ಮ ಚಿತ್ತ
ಧನ ಧಾನ್ಯ ತುಂಬಿ ತುಳುಕುವುದು ಸರ್ವ ಸಂಪತ್ತು
ಕನ್ಯಾಕುಮಾರಿಯಿಂದ ಹಿಮಾಲಯತನಕ
ದಕ್ಷಿಣೋತ್ತರಕ ಎದ್ದಾಳತಿ ಲೆಕ್ಕ
ಎರಡು ಸಾವಿರ ಮೈಲಿ
ಪೂರ್ವ ಪಶ್ಚಿಮದಗಲಿರುವುದು ೧೮೦೦ ಮೈಲಿ
ರಾಷ್ಟ್ರದ ಕ್ಷೇತ್ರಫಲ
ಒಟ್ಟುಗೂಡಿ ಎಲ್ಲ ೧೫ ಲಕ್ಷ ಮೈಲಿ
ಚಚೌಕ ಇರುವುದಲ್ಲಿ
ಭರತಖಂಡದ ಉತ್ತರದಲ್ಲಿ ಪೂರ್ವಾದ ಸಾಲ
ಅದರಲ್ಲಿ ಎತ್ತರವಾದ ಶಿಖರ
ಗೌರಿಶಂಕರ ಎಂಬ ಹೆಸರ
ಎಲ್ಲಾದಕ್ಕಿಂತ ಮೇಲೆ
೧೫ ಸಾವಿರದ ೨೫ ಅಡಿ ಇರುವುದೆಲ್ಲ"

ಹೀಗೆ ಭಾರತದ ಒಂದು ಗತವೈಭವ ಮತ್ತೆ ಅದರ ಶ್ರೇಷ್ಠತೆಯನ್ನು ತಿಳಿಸುವುದರ ಮುಖೇನ ಇಂತಹ ಶ್ರೇಷ್ಠವಾದ ಭಾರತವನ್ನು ವಸಹಾತುಶಾಹಿಗಳಿಂದ ಉಳಿಸುವ ಸಲುವಾಗಿ ಭಾರತದ ಗತವೈಭವವನ್ನು ಸಾರುವುದರ ಮೂಲಕ ವಸಹಾತುಶಾಹಿಗಳ ವಿರುದ್ಧ ಸ್ಥಳೀಯ ಭಾರತೀಯರು ಪ್ರತಿಭಟಿಸುವುದನ್ನು ನಾವು ಕಾಣುತ್ತೇವೆ.

ಇಂತಹ ಭಾರತದ ಸಂಪತ್ತನ್ನು ಬಳಸಿಕೊಂಡು ವಸಹಾತುಶಾಹಿಗಳು ಇಲ್ಲಿಯ ಸಂಪತ್ತನ್ನು ಇಂಗ್ಲೆಂಡಿಗೆ ಹರಿದುಹೋಗಲು ಬ್ರಿಟೀಷ್ ಸಂಸತ್ತು ಕಾಲ ಕಾಲಕ್ಕೆ ಪಾಸುಮಾಡುವ ಅನ್ಯಾಯದ ಕಾಯ್ದೆಗಳೇ ಕಾರಣವಾಗಿದ್ದು ಅವುಗಳನ್ನು ಸುಸಂಘಟಿತರಾಗಿ ಪ್ರತಿಭಟಿಸದಿದ್ದರೆ ಭಾರತೀಯರಿಗೆ

ತಿರುಪೆ ಬೇಡುವ ಪ್ರಸಂಗ ಬರಬಹುದೆಂದು "ಕೆಲವು ಲಾವಣಿಗಳು ಭಾರತೀಯರಿಗೆ ಎಚ್ಚರಿಸುವ ಮೂಲಕ ಬ್ರಿಟೀಷರ ವಿರುದ್ಧ ಪ್ರತಿಭಟನೆಗೆ ಭಾರತೀಯರ ಗಮನ ಸೆಳೆದವು."

ಹೀಗೆ ಭಾರತದ ಗತವೈಭವವನ್ನು ಹೇಳುವುದರ ಮೂಲಕ ಭಾರತೀಯರಲ್ಲಿ ಬ್ರಿಟೀಷರ ಕುರಿತು ಇರುವ ವಿರೋಧವನ್ನು ತಿಳಿಸುತ್ತಾರೆ. ಭಾರತದ ಸಂಪತ್ತನ್ನು ಬ್ರಿಟೀಷರಿಂದ ಉಳಿಸಿಕೊಳ್ಳುವುದು ಇಂತಹ ಪ್ರತಿಭಟನೆಗಳ ಮುಖ್ಯ ಉದ್ದೇಶವಾಗಿತ್ತು. ಎಂದು ಹೇಳಬಹುದು. ಭಾರತೀಯರಲ್ಲಿ ಅಖಂಡ ಪರಿಕಲ್ಪನೆಗೆ ಇರಲಿಲ್ಲ ಅಖಂಡ ಪರಿಕಲ್ಪನೆ ಬಂದಿರುವುದು ಬ್ರಿಟೀಷರ ಕೇಂದ್ರೀಯ ಆಡಳಿತ ಪದ್ಧತಿಯಿಂದ ಎಂದು ಹೇಳಬಹುದು.

### ೨. ರಾಷ್ಟ್ರೀಯ ಧುರೀಣರು

ಪಾಶ್ಚಾತ್ಯಶಿಕ್ಷಣದ ಪ್ರಭಾವದಿಂದಾಗಿ ಜಾಗೃತಿಗೊಂಡ ನಮ್ಮ ಸ್ಥಳೀಯ ಭಾರತೀಯರು ಆಡಳಿತದಲ್ಲಿ ಸುಧಾರಣೆಗಳನ್ನು ತರುವಂತೆ ಸರಕಾರ ಒತ್ತಾಯಿಸಲು ೧೮೮೫ರಲ್ಲಿ ಕಾಂಗ್ರೆಸ್ ಸ್ಥಾಪಿಸಿದರು. ಕಾಂಗ್ರೆಸ್ ಎರಡು ದಶಕಗಳನ್ನು ಪೂರೈಸುವ ಹೊತ್ತಿಗೆ ಬ್ರಿಟೀಷ್ ಸರಕಾರ ವಿಭಜಿಸಿ ಆಳುವ ನೀತಿ ಕಾಂಗ್ರೆಸ್ ಧುರೀಣರ ಅರವಿಗೆ ಬಂದು ೧೯೦೫ರಲ್ಲಿ ಸ್ವದೇಶಿ ಹಾಗೂ ಬಹಿಷ್ಕಾರ ಪ್ರತಿಭಟನೆಗಳನ್ನು ಹುಟ್ಟುಹಾಕುವ ಮೂಲಕ ರಾಷ್ಟ್ರೀಯ ಪ್ರತಿಭಟನೆಗೆ ನಾಂದಿಯಾಯಿತು. ಪ್ರತಿಭಟನೆಗಳ ನೇತೃತ್ವ ವಹಿಸಿಕೊಂಡ ಧುರೀಣರು ದೇಶದ ಉದ್ದಗಲಕ್ಕೂ ಸಂಚರಿಸಿ ಬ್ರಿಟೀಷರ ದುರಾಡಳಿತವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿ ಅದರ ಮೂಲೋತ್ಪಾಟನೆಗಾಗಿ ರಾಷ್ಟ್ರೀಯ ಪ್ರತಿಭಟನೆಗಳಲ್ಲಿ ಪಾಲ್ಗೊಳ್ಳುವಂತೆ ಕರೆಕೊಟ್ಟರು, ಭಾಷೆ ಹಾಗೂ ಅಶಿಕ್ಷಿತತೆಯಿಂದಾಗಿ ರಾಷ್ಟ್ರೀಯ ಧುರೀಣರ ವಿಚಾರಗಳನ್ನು ಗ್ರಾಮಾಂತರ ಪ್ರದೇಶದ ಜನರು ತಿಳಿದುಕೊಳ್ಳಲು ಅಸಮರ್ಥರಾದವರಿಂದ ರಾಷ್ಟ್ರೀಯ ಪ್ರತಿಭಟನೆಗಳಲ್ಲಿ ಆಸಕ್ತಿವಹಿಸಲಿಲ್ಲ. ಇದನ್ನು ಅರಿತ ಲಾವಣಿಕಾರರು ರಾಷ್ಟ್ರೀಯ ಧುರೀಣರ ವ್ಯಕ್ತಿ ವಿಚಾರಗಳನ್ನು ಗ್ರಾಮಾಂತರ ಪ್ರದೇಶಗಳ ಜನರಿಗೆ ತಿಳಿಸಿಕೊಡುವ ಉದ್ದೇಶದಿಂದ ಗಾಂಧೀಜಿ, ಸುಭಾಸಚಂದ್ರಬೋಸರ, ಲೋಕಮಾನ್ಯ ತಿಲಕ ಮುಂತಾದ ಧುರೀಣರ ಕುರಿತು ಜನರಲ್ಲಿ ಹೇಳತೊಡಗಿದರು. ಇದರಿಂದ ಜನಸಾಮಾನ್ಯರನ್ನು ಪ್ರತಿಭಟನೆಗೆ ಆಕರ್ಷಿಸುವುದು ಅವರ ಉದ್ದೇಶವಾಗಿತ್ತು.

ಇಂತಹ ಧುರೀಣರ ಕುರಿತು ಜನಸಾಮಾನ್ಯರಿಗೆ ಹೇಳುವುದರಿಂದ ರಾಷ್ಟ್ರೀಯ ನೆಲೆಯ ಪ್ರತಿಭಟನೆಗಳು ಹೆಚ್ಚು ಹೆಚ್ಚು ಪರಿಣಾಮಕಾರಿಯಾದವು ಎಂದು ಹೇಳಬಹುದು ಇಂತಹ ರಾಷ್ಟ್ರೀಯ ಧುರೀಣರ ಕುರಿತಾದ ಲವಣಿ.

ಭಾರತದ ರಾಜಕಾರಣದಲ್ಲಿ ಲೋಕಮಾನ್ಯ ಟಿಳಕ ಕಾಣಿಸಿಕೊಳ್ಳುವ ಮೊದಲು ಬ್ರಿಟೀಷ್ ಅಧಿಕಾರಿಗಳಿಗೆ ನ್ಯಾಯಯುತವಾಗಿ ಆಳುವಂತೆ ಕಾಂಗ್ರೆಸ್ ಧುರೀಣರು ಮೇಲ್ಮನವಿ ಮಾಡಿ ಕೊಳ್ಳುತ್ತಿದ್ದರು. ಈ ಪದ್ಧತಿಯಿಂದ ಭಾರತೀಯರಿಗೆ ಅಲ್ಪ ಲಾಭವಾಗುವುದೆಂದು ಭಾವಿಸಿದ ತಿಲಕ ಉಗ್ರಹೋರಾಟದ ಮೂಲಕ ಸ್ವರಾಜ್ಯ ಸ್ಥಾಪನೆಗೆ ಕರೆಕೊಟ್ಟು ಸರಕಾರದಿಂದ ಬಂಧನಕ್ಕೊಳ ಗಾದುದನ್ನು ಕೆಲವು ಲಾವಣಿಗಳ ಮುಖೇನ ನೋಡಬಹುದು.

"ಶ್ರೇಷ್ಠವಾದ ರಾಷ್ಟ್ರೀಯ ಮುಖಂಡರು
ಲೋಕಮಾನ್ಯ ಟಿಳಕರೆಂಬುವರು
ಮೊದಲಿಗೆ ಅಂಜತಿದ್ರ ಜನರು
ಜೇಲ ಅಂದ್ರ ಅಪಮಾನ ಅಂತಿದ್ರು
ಮೊದಲಿಗೆ ಇವರು ಜೇಲಿಗೆ ಹೋದವರು
ಜನರಲ್ಲಿಯ ಅಂಜಿಕೆ ತಗದವರು."

ಹೀಗೆ ಸ್ವರಾಜ್ಯವನ್ನು ಬೇಡಿ ಉಗ್ರ ಹೋರಾಟ ಮಾಡಿದ್ದರಿಂದ ಟಿಳಕರನ್ನು ಬ್ರಿಟೀಷರು ೧೯೦೮ರಲ್ಲಿ ಆರುವರ್ಷಗಳ ಕಾಲ ಮುಂಡಾಲೆ ಜೇಲಿನಲ್ಲಿ ಅವರನ್ನು ಬಂದಿಸಿದ್ದರು. ಇದನ್ನು ಸ್ಥಳೀಯ ಲಾವಣಿಕಾರರು ತಮ್ಮ ಲಾವಣಿಗಳ ಮುಖೇನ ಜನಸಾಮಾನ್ಯರಿಗೆ ಟಿಳಕರ ಶ್ರಮ ಮತ್ತು ದೇಶದ ಕುರಿತ ಅವರ ತ್ಯಾಗವನ್ನು ಪ್ರಚಾರಮಾಡಿದರು. ಹೀಗೆ ಲಾವಣಿಯ ಮೂಲಕ ಟಿಳಕರ ಕುರಿತಾದ ವ್ಯಕ್ತಿತ್ವವನ್ನು ಹೇಳುವುದರಿಂದ ಅವತ್ತು ಜೈಲಿಗೆ ಹೋಗುವುದು ಎಂದರೆ ಅಪಮಾನ ಎಂದು ತಿಳಿದ ಜನಸಾಮಾನ್ಯರು ಟಿಳಕರು ಜೈಲಿಗೆ ಹೋಗಿದ್ದರಿಂದ ಇಂತಹ ಅಪನಂಬಿಕೆಯಿಂದ ಹೊರಬಂದು ಜನರು ಸಂಘಟಿತರಾಗಿ ಬ್ರಿಟೀಷರ ವಿರುದ್ದ ಪ್ರತಿಭಟಿಸಿದರು ಅಲ್ಲದೆ ಇಂತಹ ರಾಷ್ಟ್ರೀಯ ನಾಯಕರ ಕುರಿತಾದ ಗೌಡನ ಅಭಿಮಾನ ಜಾಸ್ತಿಯಾಗಿ ಹೆಚ್ಚು ಹೆಚ್ಚು ಜನ ಕಾಯ್ದೆ ಕಾನೂನಿಗೆ ಹೆದರದೆ ಹೋರಾಟ ಮಾಡಿದರು.

ಹತ್ತನೆಯ ದಶಕದ ಮಧ್ಯದಲ್ಲಿ ಟಿಳಕರು ಉಗ್ರ ಹೋರಾಟದಿಂದ ಪ್ರೋತ್ಸಾಹಗೊಂಡ ಹಲವಾರು ಭಾರತೀಯ ರಾಷ್ಟ್ರೀಯನಾಯಕರು ಸ್ವರಾಜ್ಯ ಬೇಡಿಕೆಯ ಚಳವಳಿ ಪ್ರಾರಂಭವು ಇಪ್ಪತ್ತನೆ ದಶಕದ ಆರಂಭದಲ್ಲಿ ಗಾಂಧೀಜಿಯವರ ಅಹಿಂಸಾ ಮಾರ್ಗದಿಂದ ಇನ್ನೂ ವ್ಯಾಪಕವಾಗಿ ಈ ಪ್ರತಿಭಟನೆ ಮುಂದುವರೆಯಿತು. ಟಿಳಕರ ವ್ಯಕ್ತಿ ವಿಚಾರಗಳಂತೆ ಗಾಂಧೀಜಿಯವರು ವ್ಯಕ್ತಿ ವಿಚಾರಗಳನ್ನು ಜನಸಾಮಾನ್ಯರು ಅರಿತುಕೊಳ್ಳಲೆಂಬ ಸದುದ್ದೇಶದಿಂದ ಗಾಂಧೀಜಿಯವರ ಕುರಿತು ಹಲವಾರು ಲಾವಣಿಗಳು ರಚನೆಯಾದವು.

"ಮಾನವರಾಗಿ ಜನಿಸಿ ಮಹಾತ್ಮರೆನಿಸಿಕೊಂಡ್ರು
ಮೋಹನದಾಸ ಗಾಂಧೀಜಿಯವರು
ತನು ಮನ ಧನ ಗುಣ ಪ್ರಾಣ ಸಹಿತ ....
ವಿನಿಯೋಗಿಸಿದರು."

ಹೀಗೆ ಮಹಾತ್ಮರು ತ್ಯಾಗ ಅವರ ತನು-ಮನ-ಧನ-ಗುಣ ಎಲ್ಲವನ್ನು ಈ ಲಾವಣಿಯಿಂದ ಮನಗಂಡ ಜನಸಾಮಾನ್ಯ ಇಂತಹ ಶ್ರೇಷ್ಠ ವ್ಯಕ್ತಿಯಿಂದ ಪ್ರಭಾವಿತಗೊಂಡು ಅವರ ಸ್ವಭಾವಕ್ಕೆ ಮನಸೋತು ಬ್ರಿಟೀಷರ ವಿರುದ್ಧ ಪ್ರತಿಭಟನೆಗಳಿದ್ದರು. ಇದು ಆನಂತರ ಅಹಿಂಸಾವಾದಿಗಳ ಒಂದು ದೊಡ್ಡ ಗುಂಪೆ ರಚನೆಗೊಂಡು ಸ್ವಾತಂತ್ರ ಸಿಗುವವರೆಗೆ ಹೋರಾಟ ಮಾಡಿರುವುದನ್ನು ನಾವು ಕಾಣುತ್ತೇವೆ.

೧೮೬೯ರ ಅಕ್ಟೋಬರ್ ೨ ರಂದು ಪೋರ್‌ಬಂದರದಲ್ಲಿ ಜನನ. ಬಾಲ್ಯದಲ್ಲಿ ತಂದೆ-ತಾಯಿ-ಗುರುಗಳ ಹಾಗೂ ಹರಿಶ್ಚಂದ್ರ ನಾಟಕದ ಪ್ರಭಾವದಿಂದಾಗಿ ಸದಾ ಸತ್ಯ ಮಾತಾಡಬೇಕೆಂಬ ಸಂಕಲ್ಪ, ಬಾರಿಸ್ಟರ ಪದವಿ ಪಡೆಯುವುದಕ್ಕಾಗಿ ಪರದೇಶಕ್ಕೆ ಹೊರಟಾಗ ಮದ್ಯ, ಮಾಂಸ, ಸಿಗರೇಟು, ಪರಸ್ತ್ರೀ ಮುಟ್ಟದಿರುವ ಬಗ್ಗೆ ಪ್ರಮಾಣ, ಬ್ಯಾರಿಸ್ಟರ ಪದವಿ ಪಡೆದು ಸ್ವದೇಶಕ್ಕೆ ಹಿಂತಿರುಗಿ ವಕೀಲಿ ವೃತ್ತಿ ಆರಂಭ ಕಕ್ಷಿದಾರನ ಖಟ್ಲೆ ಸಂಬಂಧ ದಕ್ಷಿಣ ಆಫ್ರಿಕೆಗೆ ಹೋದಾಗ ಅಲ್ಲಿನ ಸರಕಾರದ ವರ್ಣಭೇದ ನೀತಿಯಿಂದ ಭಾರತೀಯ ಮೂಲನಿವಾಸಿಗಳು ಅನುಭವಿಸುತ್ತಿದ್ದ ಕಷ್ಟಗಳನ್ನು ಪರಿಹರಿಸುವುದಕ್ಕಾಗಿ ಗಾಂಧೀಜಿಯವರು ಪಣತೊಟ್ಟಿದ್ದರಿಂದ ಇವರು ಪಣಕ್ಕೆ ಹಲವಾರು ಜನರು ತಮ್ಮ ತಮ್ಮ ಸಿಟ್ಟು ಮತ್ತು ಆಕ್ರೋಶಗಳನ್ನು ಹೊರಹಾಕಿದರು. ಇಂತಹ ಗಾಂಧೀಜಿಯವರ ಪಣವನ್ನು ಕೆಲವು ಲಾವಣಿಗಳಲ್ಲಿ ನಾವು ನೋಡಬಹುದು.

"ಅನ್ಯಾಯದ ವಿರುದ್ಧ ಸತ್ಯಾಗ್ರಹ ಹೂಡುವ ಶಕ್ತಿಯನ್ನು ತಗದಾರ ಸ್ವತಃ ಜನಜಂಗುಳಿಯನ್ನು ಘನಸಂಘಟನೆ ಮನವೊಲಿಸುವ ಹಂಚಿಕೆ ತುರ್ತು ನೋಡಿ ನೋಡಿ ವಿಚಾರ ಮಾಡಿ ಮಾಡಿ ಕಡೆಗೆ ದೃಢ ಪ್ರತಿಜ್ಞೆ ಮಾಡುವರು ಖಚಿತ ಮಾಡಿದಂತೆ ಕೃತಿ ಮಾಡಿ ತೋರಿಸಿ ರೂಢಿಯೊಳಗೆ ಆದ್ರ ಪ್ರಖ್ಯಾತ ಅಹಿಂಸಾ ವೃತ ನಿತ್ಯ ಧ್ಯೇಯವಾಗಿ ಪ್ರಾರ್ಥನೆ ಮಾಡಿ ಓದುಗರ ಗೀತ ಸ್ವಾತಂತ್ರ್ಯ ಬೀಜ ಬಿತ್ತಿ ಮರ್ತ್ಯದೊಳು ಇತಿಹಾಸ ಪ್ರಸಿದ್ಧವಾಗಿಹ ನೇತ"[೩೮]

"ಹೀಗೆ ಭಾರತೀಯ ಬಗ್ಗೆ ವರ್ಣಭೇದ ನೀತಿ ಅನುಸರಿಸುತ್ತಿದ್ದ ದಕ್ಷಿಣ ಆಫ್ರಿಕಾಕಾರರ ವಿರುದ್ಧ ಭಾರತೀಯರನ್ನು ಸಂಘಟಿಸಿ ಸತ್ಯಾಗ್ರಹ ಹೂಡಿ ಸರಕಾರ ವರ್ಣಭೇದ ನೀತಿಯನ್ನು ತೆಗೆದುಹಾಕುವಂತೆ ಮಾಡುವಲ್ಲಿ ಯಶಸ್ವಿಯಾದ ಗಾಂಧೀಜಿಯವರು ೧೯೨೦ರಲ್ಲಿ ಕಾಂಗ್ರೆಸ್ ಹಾಗೂ ರಾಷ್ಟ್ರೀಯ ಪ್ರತಿಭಟನೆ ನೇತೃತ್ವ ವಹಿಸಿಕೊಂಡು ರಾಜ ಬೇಡಿಕೆಗಾಗಿ ಬ್ರಿಟೀಷ್ ಸರಕಾರದ ವಿರುದ್ಧ ಅಹಿಂಸಾತ್ಮಕ ಆಂದೋಲನ ಮಾಡಿ ಯಶಸ್ವಿಯಾಗಿ ಜಗತ್ತಿನಾದ್ಯಂತ ಮಾನ ಮನ್ನಣೆ ಪಡೆದ ಚರಿತ್ರೆಯನ್ನು ಜನಸಾಮಾನರಿಗೆ ಸುಲಭವಾಗಿ ವಿವರಿಸಿ ಅವರು ಗಾಂಧೀಜಿಯವರ ಅನುಯಾಯಿಗಳಾಗುವಂತೆ ಮಾಡುವಲ್ಲಿ 'ಭೀಮಕವಿ' ಈ ಲಾವಣಿಯಲ್ಲಿ ಯಶಸ್ವಿಯಾಗಿದ್ದಾನೆ"[೩೯]

ಗಾಂಧಿಯವರ ಪ್ರಭಾವವನ್ನು ಅವರ ಪ್ರಭಾವದಿಂದ ದೇಶದ ಮೇಲಾದ ಪರಿಣಾಮವನ್ನು ಚಿತ್ರಿಸುವ ಲಾವಣಿಯನ್ನು ನಿರೀಕ್ಷಿಸುವ ಜನಸಾಮಾನ್ಯರು ಕೆಲವು ಹಾಡಿನ ಸಾಲುಗಳನ್ನು ಆತ್ಮಸಾತ್ ಮಾಡಿಕೊಂಡು, ನೆರೆಹೊರೆಯವರ ಆತ್ಮಜಾಗೃತಿಯ ಸಲುವಾಗಿ ಈ ಲಾವಣಿ ರಚನೆಯಾಗಿ ಜನರನ್ನು ತುಂಬಾ ಶೀಘ್ರವಾಗಿ ಆಕರ್ಷಿಸಿತು.

"ಏಳಿರಿ ಏಳಿರಿ ಬಲುಬೇಗ
ಬೆಳಗಾಗಿದೆ ಏಳಿರಿ ಬಲುಬೇಗ
ಏಳಿರಿ ತೊರೆಯುತ ನಿಮಭೋಗ
ಬಲು ಯೋಗದ ಹರಿ ಬಂದಿ ಹನೀಗ

ಜಾತಿಯ ಬೇಧವ ತರಬೇಡಿ
ನೀತಿಯ ನಾರೂ ಬಿಡಬೇಡಿ
ಮಾತನಾಡಂತ ಕೆಡಬೇಡಿ
ನೀವು ಕಡಿಯಿರಿ ನಿಮದೇಶದ ಬೇಡಿ"

ಹೀಗೆ ಹೊತ್ತಿಗಿಂತ ಮುಂಚೆ ಎದ್ದು ರಾಷ್ಟ್ರೀಯ ಹೋರಾಟದಲ್ಲಿ ಭಾಗಿಯಾಗಿ ಎಂದು ಹೇಳುತ್ತಿರುವುದನ್ನು ನೋಡಿದರೆ ಎಂತಹ ಶೀಘ್ರವಾದ ಹೋರಾಟವಾಗಿತ್ತು ಎಂದು ತಿಳಿಯುತ್ತದೆ ಗಾಂಧೀಜಿಯನ್ನು ಯೋಗಿ ಎಂದು ಕರೆಯುವುದರ ಮೂಲಕ ಜನಸಾಮಾನ್ಯರ ಮನಸ್ಸಿನಲ್ಲಿ ಗಾಂಧೀಜಿಯ ಬಗ್ಗೆ ಅಗಾಧವಾದ ಭಕ್ತಿಯನ್ನು ಮೂಡಿಸಿ ಅವರನ್ನು ಹೋರಾಟಕ್ಕೆ ಆಕರ್ಷಿಸಿದರು.

ಪರಕೀಯತೆಯಿಂದ ಭಾರತದ ಜನ ಪಡುತ್ತಿದ್ದ ಕಷ್ಟಕಾರ್ಪಣ್ಯವನ್ನು ನೋಡಿದ ರುದ್ರದೇವರುಸ (ಪರಮೇಶ್ವರ) ಕ್ರೂರಿಗಳು, ಕೇಡಿಗಳು, ಬ್ರಿಟೀಷರ ಸರ್ವನಾಶಕ್ಕಾಗಿ ಸುಭಾಷ್‌ಚಂದ್ರಬೋಸ್ ನಾಮದಿಂದ ಭೂಮಿಯಲ್ಲಿ ಅವತರಿಸಿದಿರೆಂದು ಲಾವಣಿಯಲ್ಲಿ ಅಭಿಪ್ರಾಯಪಡಲಾಗಿದೆ.

"ಪಾರತಂತ್ರ್ಯದಲ್ಲಿ ಬಿದ್ದು ಬಾರಿ ಬಳಲುವಂಥ ನಮ್ಮ ಭಾರತಾಂಬೆ ನೋಡಿ ರುದ್ರದೇವರ ಕ್ರೂರ ಚೋರರನ್ನು ನಾಶಮಾಡುವುದಕ್ಕೋಸ್ಕರ ಈ ಧರಣಿಯೊಳು ಜನಿಸಿ ಬಂದ ಜಯಬೀರ ಸುಭಾಸಚಂದ್ರ ಬೋಸವೆಂಬ ಶೋಭಿಸುವ ನಾಮದಿಂದ ಭಾರತೀಯ ಪರಕೀಯತೆನ್ನು ನೋಡಿ ಪರಕೀಯರನ್ನು ಓಡಿಸುವ ಸಲುವಾಗಿನೆ ಸುಭಾಸಚಂದ್ರ ಅವರು ಜನಿಸಿ ಕ್ರೂರ ಚೋರರು ಆದ ಬ್ರಿಟೀಷರನ್ನು ನಾಶಮಾಡುವ ಸಲುವಾಗಿನೆ ಅವರು ಇಲ್ಲಿ ಜನಿಸಿದ್ದಾರೆ ಎಂದು ಹೇಳುವುದರ ಮೂಲಕ ಸ್ಥಳೀಯ ಜನಸಾಮಾನ್ಯರ ಸುಭಾಷ ಚಂದ್ರಸ ಬೋಸರ ಸಂಘಟನೆಗೆ ಸೇರಿಸುವ ಪ್ರಯತ್ನವನ್ನು ಈ ಲಾವಣಿ ಮಾಡಿದೆ ಎಂದು ಹೇಳಬಹುದು ಸುಭಾಷರ ವ್ಯಕ್ತಿತ್ವವನ್ನು ನೋಡಿ ಹೆಚ್ಚು ಜನರು ಆಕರ್ಷಿತರಾದರು.

ಗಾಂಧೀಜಿಯವರ ಅಸಹಕಾರ ಚಳವಳಿಯಿಂದ ಪ್ರಭಾವಿತರಾಗಿ ಅಲ್ಲಿ ಕಾಲದಲ್ಲಿಯೇ ಭಾರತೀಯ ಪೌರ ಸೇವೆಗೆ ರಾಜೀನಾಮೆ, ೧೯೨೩ರಲ್ಲಿ ಸಿ.ಆರ್. ದಾಸ, ಸ್ಥಾಪಿಸಿದ್ದ ಸ್ವರಾಜ್ಯ ಪಕ್ಷ ಸೇರುವ ಮೂಲಕ ಗಾಂಧೀಜಿಯವರೊಡನೆ ಮತಭೇದ ಪ್ರದರ್ಶನ, ೧೯೩೫ರ ಕಾಯ್ದೆಯ ಫೆಡರಲ್ ವ್ಯವಸ್ಥೆ ಉಗ್ರವಾಗಿ ಪ್ರತಿಭಟಿಸುವ ಹಾಗೂ ೧೯೩೯ರಲ್ಲಿ ಗಾಂಧೀಜಿಯವರು ಕಾಂಗ್ರೆಸ್ ಅಧ್ಯಕ್ಷ ಚುನಾವಣೆಗೆ ಬೆಂಬಲಿಸಿದ ಪಟ್ಟಭೀ ಸೀತಾರಾಮಯ್ಯ ಅವರನ್ನು ಸೋಲಿಸುವ ಮೂಲಕ ಹೆಚ್ಚು ಪ್ರಸಿದ್ಧ ಪಡೆದ ಸುಭಾಷರು ಗಾಂಧೀಜಿಯವರ ಅಸಹಕಾರ ಧೋರಣೆಯಿಂದ ಕಾಂಗ್ರೆಸ್ ತ್ಯಜಿಸಿ ಫಾರ್ವಡ್ ಬ್ಲಾಕ್ ಹುಟ್ಟುಹಾಕಿ ಬ್ರಿಟೀಷರ ವಿರುದ್ಧ ಕ್ರಾಂತಿಯ ಕಹಳೆ ಊದಿದರು.

"ಸ್ವಚ್ಚವಾಗಿ ಸುಭಾಷರು ಬಿಚ್ಚಿ ಹೇಳತಾರ ನಿಂತ ಲುಚ್ಚಾ ಬ್ರಿಟೀಷರನ್ನು ಹಚ್ಚಿಹೊಡೆಯಬೇಕ ಮಣ್ಣು ಮುಚ್ಚಿ ಕೆಚ್ಚಿನೊಳಗೆ ಹಾಕಿ ಸುಡಬೇಕ ಹೀಂಗ ನಿಶ್ಚಯಿಸಿ ನಿಂತಾರ ಸಂಗ್ರಾಮಕ ಕೆಚ್ಚದೆಯ ವೀರರೆಲ್ಲ ನಿಚ್ಚಳಾಗಿ ಕ್ರಿಯಾಮಾಡಿ ಕೆಂಚಿತು ವಂಚನೆಯಲ್ಲಿ ಒಕ್ಕೂ ಬಕ್ಕ ಬಂದ

ಕೂಡ್ಯಾರ ಆಗ ಸುಭಾಷರ ಲಷ್ಕರಕ್ಕ ಹಿಂಡ ಹಿಂಡಾಗಿ ತಿರಗುವರ ಲಂಡ ಬಂಢಕೋರರನ್ನು ಕಂಡ ಕಂಡಲ್ಲೆಲ್ಲ ಹಿಡಿದ ಕೊಲಬೇಕ ನಿಂತ ಗುಂಡು ಹಾಕಿ ಚೆಂಡ ಕಡದ ಕೊಲಬೇಕ ದೇಹ ತುಂಡ ಆಗುವಂತೆ ಕಡಿಬೇಕ ರಂಡಿಮುಂಡ್ಯಾರಂತೆ ಭಯಗೊಂಡು ನಿಲ್ಲುವ ಕಾರಣವೇನು?

"ಮುಂಡರಾಗಿ ದಂಡಯಾತ್ರೆ ಮಾಡಬೇಕ
ರಣಮಂಡಲದಿ ಹೋರಾಡಬೇಕ
ಶ್ರೇಷ್ಟ ಭಾರತ ಸಿರಿಯ ನಿಷ್ಟ ಮಾಡಿದಂಥ
ಮಹಾದುಷ್ಟ ಆಂಗ್ಲೇಯರನ್ನು ಓಡಿಸಬೇಕ
ಕೈಕಟ್ಟಿ ಬಿಟ್ಟು ... ಮ್ಯಾಲ ಹೊರಸಬೇಕ
ಒಳ್ಳೇ ದಿಟ್ಟತನದಿಂದ ಯುದ್ಧ ಮಾಡುದಕ
ಲಕ್ಷಾವಧಿ ಲಷ್ಕರದ ನಡುವೆ ಸಿಂಹನಂತೆ
ಗುಡುಗ ಹೊಡಿತಾನ ಅಳಲೆಲ್ಲಿ ಅದಕ
ಕೇಳಿ ನಡಗ ಹುಟ್ಟಿತಾಗ ಇಂಗ್ಲಂಡಕ

ಪರಿಣಾಮವಾಗಿ ಬ್ರಿಟೀಷ್ ಸರಕಾರ ಸುಭಾಷರನ್ನು ಸೆರೆಮನೆಗಟ್ಟಿತು, ಸೆರೆಮನೆಯಿಂದ ಅದ್ಹೇಗೋ ತಪ್ಪಿಸಿಕೊಂಡ ಸುಭಾಷರು ಬ್ರಿಟೀಷರ ವೈರಿ ಜರ್ಮನಿಯ ಹಿಟ್ಲರನ ಕೈ ಕುಲುಕಿ, ಅಜಾದ ಹಿಂದ ಸೈನ್ಯ ಸಂಘಟಿಸಿ ಜಪಾನ ನೆರವಿನೊಂದಿಗೆ ಬ್ರಿಟೀಷರು ಆಳುತ್ತಿದ್ದ ಭಾರತದ ಮೇಲೆ ಆಕ್ರಮಣ ಮಾಡಲೆಳಸುವ ಮೂಲಕ ಭಾರತ ಸಹಿತ ಜಗತ್ತಿನಾದ್ಯಂತ. ಸುಭಾಷರ ಶೌರ್ಯ ಸಾಹಸ ಗುಣಗಾನ ಮಾಡಿದುದನ್ನು ನಾವು ಈ ಲಾವಣಿಯಲ್ಲಿ ನೋಡುತ್ತೇವೆ ಹೀಗೆ ಗುಣಗಾನ ಮಾಡುವುದರ ಹಿನ್ನೆಲೆ ಜನಸಾಮಾನ್ಯರನ್ನು ಸಂಘಟಿಸುವುದಾಗಿತ್ತು.

ಬ್ರಿಟೀಷರನ್ನು ಲುಚ್ಚಾ ಎಂದು ಕರೆಯುವುದರ ಮೂಲಕ ಅವರನ್ನು ಭಾರತದಿಂದ ಓಡಿಸಬೇಕು ಅವರಿಗೆ ಹೊಡೆದು ಮಣ್ಣು ಮುಚ್ಚಿ ಕಿಚ್ಚಿನೊಳಗೆ ಹಾಕಿ ಸುಡಬೇಕು ಎಂದು ನಿಶ್ಚಯ ಮಾಡಿ ಸಂಗ್ರಾಮಕ್ಕೆ ಸಜ್ಜಾಗಿ ನಿಂತ ಸುಭಾಷರ ಕುರಿತು ಹೇಳುವುದರ ಮೂಲಕ ಹೆಚ್ಚು ಹೆಚ್ಚು ಜನರು ಸುಭಾಷಚಂದ್ರರ ತಿವ್ರಗಾಮಿ ಸಂಘಟನೆಗೆ ಸೇರಿ ಅವರ ಜೊತೆ ಕೈಜೋಡಿಸಿದರು.

ಹೀಗೆ ಭಾರತೀಯ ಲಾವಣಿಕಾರರು ತಮ್ಮ ಲಾವಣಿಯಲ್ಲಿ ರಾಷ್ಟ್ರೀಯನಾಯಕರಾದ 'ಮಹಾತ್ಮಗಾಂಧೀ', 'ಸುಭಾಷಚಂದ್ರಬೋಸ್' ಲೋಕಮಾನ್ಯ ತಿಲಕ, ನೆಹರು ಮುಂತಾದ ರಾಷ್ಟ್ರೀಯ ನಾಯಕರ ಕುರಿತಾದ ಅವರ ವ್ಯಕ್ತಿತ್ವ, ಅವರ ತ್ಯಾಗ ಬಲಿದಾನ ಅವರ ಶ್ರಮ ಹೋರಾಟ ಅವರು ಭಾರತಕ್ಕೆ ತಮ್ಮ ಜೀವವನ್ನು ಮುಡುಪಾಗಿಟ್ಟಿದ್ದರು ಎನ್ನುವುದರ ಕುರಿತು ಜನಸಾಮಾನ್ಯರಿಗೆ ಲಾವಣಿಯ ಮೂಲಕ ಹೇಳುವುದರ ಮೂಲಕ ಅವರನ್ನು ಬ್ರಿಟೀಷರ ವಿರುದ್ಧ ಎತ್ತಿಕಟ್ಟುವಲ್ಲಿ ಯಶಸ್ವಿಯಾದರು ಎಂದು ನಾವು ಹೇಳಬಹುದು.

## ೩. ರಾಷ್ಟ್ರೀಯ ಪ್ರತಿಭಟನೆಗಳ ನೆಲೆ

ಭಾರತದ ಗತವೈಭದ ಪರಿಚಯ ಮಾಡಿಕೊಟ್ಟು ಅವರಲ್ಲಿ ರಾಷ್ಟ್ರ-ರಾಷ್ಟ್ರೀಯತೆಯ ಪರಿಕಲ್ಪನೆ ಮಾಡಿಸಲೆತ್ನಿಸಿದ ರಾಷ್ಟ್ರೀಯ ಲಾವಣಿಗಳು ದೇಶೀಯ ಆಳರಸರ ಅನೈಕ್ಯತೆಯ ದುರ್ಲಾಭ, ಪಡೆದು ರಾಜಕೀಯ ಪ್ರಭುತ್ವ ಸ್ಥಾಪಿಸಿ ಭಾರತದ ಸಂಪತ್ತು ಕೊಳ್ಳೆ ಹೊಡೆಯುವ ಬ್ರಿಟೀಷ್ ಸರಕಾರದ ಕ್ರಮಗಳನ್ನು ಕಾಂಗ್ರೆಸ್ ಸಂಸ್ಥೆಯ ಮೂಲಕ ಟಿಳಕ, ಗಾಂಧೀಜಿ, ಸುಭಾಷರಂಥ ರಾಷ್ಟ್ರೀಯ ಧುರೀಣರು ಪ್ರತಿಭಟಿಸುತ್ತ ಸ್ವರಾಜ್ಯ ಸ್ಥಾಪನೆಗಾಗಿ ರಾಷ್ಟ್ರೀಯ ಚಳವಳಿ ಮುನ್ನಡೆಸಿ ಕೊಂಡು ಹೋದರೆಂಬುದನ್ನು ಮನದಟ್ಟು ಮಾಡಿಕೊಡುವಲ್ಲಿ ಯಶಸ್ವಿಯಾಗಿವೆ. ಇದೀಗ ರಾಷ್ಟ್ರೀಯ ನೆಲೆಯ ಪ್ರತಿಭಟನೆಗಳ ಉದ್ದೇಶ ಹಾಗೂ ಅದನ್ನು ಸಾಧಿಸಿದ ಬಗೆ ವಿವರಿಸುವ ಲಾವಣಿಗಳನ್ನು ಪರಿಶೀಲಿಸೋಣ.

೧೯೨೦ ರಿಂದ ಗಾಂಧೀಜಿಯವರು ಕಾಂಗ್ರೆಸ್ ಹಾಗೂ ರಾಷ್ಟ್ರೀಯ ಪ್ರತಿಭಟನೆಗಳ ನೇತೃತ್ವ ವಹಿಸಿಕೊಂಡರು ಬ್ರಿಟೀಷರ ವಿರುದ್ಧ ಅಹಿಂಸಾತ್ಮಕ ಆಂದೋಲನ ಆರಂಭಿಸಿದರು ಇಂತಹ ಆಂದೋಲನಗಳನ್ನು ಹುಲಕುಂದ 'ಭೀಮಕವಿ' ತನ್ನ ಲಾವಣಿಯ ಮೂಲಕ ವಿವರಿಸುತ್ತಾನೆ.

"೧೯೧೯ನೇ ಇಸ್ವಿ ಫೆಬ್ರವರಿ ತಿಂಗಳ ಎರಡು ಬಿಲ್ ಹೊರಾಟ, ರಾಜದ್ರೋಹ ಪತ್ರಕ ಸಭೆ ಕೂಡಸುದಕ ನಿರ್ಬಂಧವಾದಿತ ಸರ್ವಸಗಟ ಕಾಯ್ದೆ ನಿಷೇಧ ಮಾಡಿ ಸಾವಿರ ಜನರು ಸತ್ತು ಗಾಯ ಆಗಿ ಬಿದ್ದವು ಗುಂಡಿನೇಟು ಪಂಜಾಬಿನೊಳಗೆ ಇಂಥ ಗೊಂದಲವಾದಿತು ಮುಂದ ಕೇಳರಿನ್ನು ಚಿತ್ತಿಟ್ಟ ಜಾಲಿಯನ್ವಾಲಾಬಾಗ್ ಎಂಬು ಮಿಗಿಲ ಜಾಗದೊಳೂ ಜಾತ್ರೆಗೆ ಬಂದಾರ ಜನ ಹೊಂದೊಂದು".

"ಹೆಣ್ಣು ಮಕ್ಕಳು ಸಣ್ಣ ಹುಡುಗರು, ಗಂಡಸರು ಘನವಾದ ಜಾತ್ರಿಯ ಆರ್ಭಟ ವಿಸ್ತಾರವಾದ ಬೈಲಸುತ್ತ ಕಟ್ಟಡ ಸಾಲ ಒಂದೇ ದಾರಿ ಮತ್ತೊಂದಿಲ್ಲ ಎಳ್ಳಷ್ಟು ನಾಲ್ಕು ಗಂಟೆಗೆ ಅಲ್ಲಿ ವ್ಯಾಖ್ಯಾನ ಆಗುವದೆಂದು ಜನರಲ್ ಡಾಯರ್ ೧೯೦೫ರಲ್ಲಿ ಸ್ವದೇಶಿ ಚಳವಳಿ ಅಂಗವಾಗಿ ಟಿಳಕ ಮುಂತಾದ ಉಗ್ರವಾದಿಗಳು ರಾಜ್ಯ ಬೇಡಿಕೆಯನ್ನು ಒತ್ತಾಯಿಸಿ ಬ್ರಿಟೀಷರ ವಿರುದ್ಧ ಉಗ್ರ ಆಂದೋಲನ ಕೈಕೊಂಡರೂ ಸೌಮ್ಯವಾದಿಗಳು ಅದಕ್ಕೆ ಸಹಮತ ವ್ಯಕ್ತಪಡಿಸದಿದ್ದುದರಿಂದ ಆಂದೋಲನ ದೀರ್ಘಕಾಲದವರೆಗೆ ಮುಂದುವರೆಯಲಿಲ್ಲ ಆದರೆ ೧೯೨೦ರಲ್ಲಿ ಗಾಂಧೀಜಿಯವರು ಕಾಂಗ್ರೆಸ್ ಹಾಗೂ ರಾಷ್ಟ್ರೀಯ ಚಳವಳಿ ನೇತೃತ್ವ ವಹಿಸಿಕೊಂಡು ಸ್ವರಾಜ್ಯಕ್ಕಾಗಿ ಒತ್ತಾಯಿಸಲು ಬ್ರಿಟೀಷರ ವಿರುದ್ಧ ಅಹಿಂಸಾತ್ಮಕ ಆಂದೋಲನ ಆರಂಭಿಸಿ ಸಮಾಜದ ಎಲ್ಲ ವರ್ಗದ ಜನತೆ ಅದರಲ್ಲಿ ಪಾಲ್ಗೊಂಡು ರಾಷ್ಟ್ರೀಯ ಚಳವಳಿ ಬಲಪಡಿಸಬೇಕೆಂದು ಕೇಳಿಕೊಂಡಾಗ ಕಾಂಗ್ರೆಸ್ ಸರ್ವಸದಸ್ಯರು ದೇಶದ ಜನತೆ ಗಾಂಧೀಜಿಯವರ ಕರೆ ಮನ್ನಿಸಿದ ಫಲವಾಗಿ ಚಳವಳಿ ದೇಶಾದ್ಯಂತ ಹರಡಿತು. ಹೀಗೆ ಸ್ವರಾಜ್ಯ ಸಂಪಾದನೆಗಾಗಿ ಬ್ರಿಟೀಷರ ವಿರುದ್ಧ ಭಾರತಾದ್ಯಂತ

ನಡೆಯುತ್ತಿರುವ ಆಂದೋಲನದ ಸಂದರ್ಭದಲ್ಲಿ ಹುಲಕುಂದ ಭೀಮಕವಿ ರಾಜ್ಯ ಮತ್ತು ರಾಷ್ಟ್ರ ಪರಿಕಲ್ಪನೆಯನ್ನು ಗ್ರಾಮಾಂತರ ಜನತೆಗೆ ಪರಿಚಯಿಸುವ ಮೂಲಕ ರಾಷ್ಟ್ರೀಯ ನೆಲೆಯ ಪ್ರತಿಭಟನೆಗಳಡೆಗೆ ಅವರನ್ನು ಆಕರ್ಷಿಸಲು ಪ್ರಯತ್ನಿಸಿದರು.

"ಕುಂತಜನರಿಗೆಲ್ಲ ಶಿರಬಾಗಿ ಹೇಳತೇನಿ ಕರುಣಿಸಿ ಕೇಳರಿ ಕುಂತ ಜನರ ಅಂದರೇನ ಪರ್ವತದ ಹಂಗಯಿಲ್ಲ ಸರಳ ಹಾದಿ ತಗದಾರ ಮಹಾತ್ಮರ ಕಲಂ ಬಿಟ್ಟು ಇನ್ನೊಂದರಾಗ ಇಲ್ಲ ಚೆನ್ನಾಗಿ ಹೇಳ್ಯಾರ ಪುಣ್ಯಾತ್ಮರ ಮೂರ್ತಿವಚನ ಧನ್ಯ ಆತಿ ನನ್ನ ಮನ ಅನ್ನ ಹಾಕಲಿಕ್ಕೆ ಅವನೇ ಆಧಾರ ಕಲಂದಾಗ ಸಧ್ಯಕ್ಕೆ ಮಧ್ಯಪಾನ ಬಂದ ಆಗಬೇಕ ಅನ್ನುತ ಹುಂಡಾವಳಿ ಭಾವ ಕಮ್ಮಿಮಾಡಬೇಕ ಅಂತ ಅನ್ನುವರ ಹೋಗಿ ಬೆಳೆ ಇಲ್ಲ ಅನ್ನುವಂಥ ರೈತರಿಗೆ ಬಿರಾಡ ಬಿಡುವದಿಲ್ಲ ಸರಕಾರಕೊಬ್ಬ ಬಾಳ ಮರುಗುತ ಕುಂತಾರ ಮನಿಯಾಗ ಉಳಿಯಲಿಲ್ಲ ಬಂಗಾರ ಇಳಸಂತ ಮೂರನೆಯ ಕಲಂದಾನ ಮಜಕೂರ"

ರಾಷ್ಟ್ರೀಯ ಚಳವಳಿಯ ನೈತಿಕ ಬಲ ಹೆಚ್ಚಿಸಲು ಹಾಗೂ ಭಾರತದ ಸಂಪತ್ತು ಇಂಗ್ಲಂಡಿಗೆ ಹರಿದುಹೋಗುವುದನ್ನು ತಪ್ಪಿಸಲು ಪಾನನಿರೋಧ ಜಾರಿಗೆ ತರುವ ಅನಾವೃಷ್ಟಿಯಿಂದ ಬೆಳೆ ಬೆಳೆದಿಲ್ಲವಾದ ಕಾರಣ ಕಂದಾಯ ತುಂಬಲು ರೈತ ಇದ್ದು ಬಿದ್ದು ಬಂಗಾರ ಮಾರಿ ಮರಗುತ್ತಿರುವದರಿಂದ ಕಂದಾಯ ಕಡಿತಗೊಳಿಸುವ ಎಲ್ಲರಿಗೂ ಬೇಕಾದ ಉಪ್ಪಿನ ಮೇಲಿನ ತೆರಿಗೆ ತಗೆದುಹಾಕುವ, ಸೈನ್ಯ ಖಾತೆಯ ಖರ್ಚು ಕಡಿತಗೊಳಿಸುವ, ಸರಕಾರಿ ಸೇವೆಯಲ್ಲಿರುವವರಿಗೆ ಸಮಾನ ಕೆಲಸಕ್ಕೆ ಸಮಾನ ವೇತನಕೊಡುವ, ಪರದೇಶಿ ಬಟ್ಟೆಯ ಮೇಲೆ ಕರವಿಧಿಸುವ ಹಾಗೂ ಸಮುದ್ರ ವ್ಯಾಪಾರದ ಮೇಲೆ ಭಾರತೀಯರ ಹಕ್ಕು ಪ್ರತಿಷ್ಠಾಪಿಸುವ, ಗುಪ್ತ ಪೋಲಿಸದಳ ತಗೆದು ಹಾಕುವ, ಕತ್ತಿ, ಕಠಾರಿ, ಬಂದೂಕ ಮುಂತಾದ ಆಯುಧಗಳನ್ನು ಆತ್ಮರಕ್ಷಣೆಗಾಗಿ ಭಾರತೀಯರು ಹೊಂದುವ, ಇವೇ ಮೊದಲಾದ ಹನ್ನೊಂದು ಬೇಡಿಕೆಗಳು ಅನುಷ್ಠಾನಗೊಂಡಲ್ಲಿ ಸ್ವರಾಜ್ಯ ಪರಿಕಲ್ಪನೆ ಸಾಕಾರಗೊಂಡು ಸರ್ವರ ಸುಖ, ಸಂತೋಷಗಳಿಗೆ ಕಾರಣವಾಗುವುದೆಂದು ಹಾಗೂ ಈ ದಿಸೆಯಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸುವ ಕಾಂಗ್ರೆಸ್‌ಗೆ ಸರ್ವರು ಸಹಾಯ ಸಹಕಾರವನ್ನು ನೀಡಬೇಕೆಂದು ಕೋರುತ್ತ ಸ್ವರಾಜ್ಯಕ್ಕಾಗಿ ಹೋರಾಡುತ್ತಿರು ಕಾಂಗ್ರೆಸ್‌ಗೆ 'ಭಿಮಕವಿ' ಭಾಗುವ ಮೂಲಕ ತನ್ನ ಆದರಾಭಿಮಾನಗಳನ್ನು ಪ್ರಕಟಪಡಿಸಿದ್ದಾನೆ.

ಗಾಂಧೀಜಿಯವರ ಕರೆಯ ಮೆರೆಗೆ ಅಹಿಂಸಾತ್ಮಕ ಆಂದೋಲನದಲ್ಲಿ ಪಾಲ್ಗೊಂಡು ಅದು ದೇಶಾದ್ಯಂತ ವ್ಯಾಪಿಸಿದಾಗ ಬ್ರಿಟೀಷ್ ಸರಕಾರ ಗಾಂಧೀಜಯವರಾಧಿಯಾಗಿ ಸಾವಿರಾರು ಪ್ರತಿಭಟನಕಾರರನ್ನು ಬಂಧಿಸಿ(ತುರಗ)ದಲ್ಲಿಡುವ ಮೂಲಕ ಪ್ರತಿಭಟನೆ ಹತ್ತಿಕ್ಕಲು ಸಂಕಲ್ಪಿಸಿತು. ಅಲ್ಲಿಯವರೆಗೆ ಕೊಲೆ ಸುಲಿಗೆಗಳ ಅಪರಾಧಗಳಿಗಾಗಿ ಶಿಕ್ಷೆಗೊಳಗಾದವರನ್ನು ತುರಗದಲ್ಲಿಟ್ಟು ಹೇಳಲಸದಳವಾದ ಕಷ್ಟಗಳಿಗೆ ಗುರಿಮಾಡುತ್ತಿದ್ದರೆಂಬ ಆತಂಕದಿಂದ ಜನಸಾಮಾನ್ಯರು ಪ್ರತಿಭಟನೆಯಲ್ಲಿ ಪಾಲ್ಗೊಳ್ಳಲು ಹಿಂದೆ ಮುಂದೆ ನೋಡುತ್ತಿದ್ದರು ಪ್ರತಿಭಟನೆಯಲ್ಲಿ ಭಾಗವಹಿಸಿ ತುರಂಗ

ವಾಸ ಅನುಭವಿಸಿ ಹೊರಬಂದ ಹುಲಕುಂದ 'ಭೀಮಕವಿ' ತುರುಂಗದ ಬಗ್ಗೆ ಜನಸಾಮಾನ್ಯರು ಹೊಂದಿದ್ದ ಆತಂಕ ನಿವಾರಿಸಲು ನಿರ್ಧರಿಸಿದ.

"ತುರಂಗದೊಳು ಜರಗುವ ಮರ್ಮಕೇಳಿರಿ ನಿರ್ಮಲ ಮನಸ್ಸಿನಿಂದ ನೀವೆಲ್ಲ ವೈರಾಗ್ಯಬಂದ ಮೇಲೆ ಆರಾಮ ಇರತಾರ ಯಾರ‍್ಯರ ಅಂಜಿಕಿ ಇರುವುದಿಲ್ಲ" ಎಂದು ಪ್ರಾರಂಭವಾಗುವ ಲಾವಣಿಯಲ್ಲಿ ಚಳವಳಿಕಾರರು ಜೈಲಿನೊಳಗೆ ಕಾಲಿಡುತ್ತಲೇ ಪೋಲಿಸರು ಅವರ ಮೈಮುಟ್ಟಿ ಹುದುಗಿಸಿಟ್ಟಿರಬಹುದಾದ ಆಯುಧಗಳ ತಪಾಸಣೆ ಮಾಡುವಾಗ ಸ್ವಲ್ಪ ಅಂಜಿಕೆಯೆನಿಸುವುದು ಸಹಜ, ಅನಂತರ ಪ್ರತಿಭಟನಾಕಾರರ ಬಟ್ಟೆಗಳನ್ನು ಬದಲಾಯಿಸಿ ಜೈಲಿನ ಉಡುಪು ಹಾಗೂ ಉಣ್ಣುವುದಕ್ಕೆ ತಾಟುಕೊಟ್ಟು ನಿಗದಿಪಡಿಸಿದ ಕೋಣೆಯೊಳಗೆ ಕೂಡಿಹಾಕುವದರೊಂದಿಗೆ ಚಳವಳಿಕಾರರ ದಿನಚರಿ ಆರಂಭಗೊಂಡಾಗ ಈ ಮುನ್ನ ಆವರಿಸಿದ್ದ ಅಂಜಿಕೆ ತನ್ನಿಂದ ತಾನೇ ಮಾಯವಾಗುವದೆಂದು ಸೋದಾರಣವಾಗಿ ವಿವರಿಸಲಾಗುತ್ತದೆ.

"ಮುಂಜಾನೆ ಎದ್ದು ಸ್ನಾನ ಸಂಧ್ಯಾವಂದನೆ ತೀರಿಸಿ ಗಂಜಿಯ ಕುಡಿಯಬೇಕ ಬಿಸಿಬಿಸಿದ ಹನ್ನೊಂದು ಘಂಟೇಕ ಇನ್ನೇನ ಹೇಳಲಿ ಉಣ್ಣುದಕ ಬ್ಯಾಳಿರೊಟ್ಟಿ ಬರುವುವದ ಹದಿನಾಲ್ಕು ಅಂಶ ತರಾಕ ಒಂದೊಂದ ರೊಟ್ಟಿ ಎರಡರೊಟ್ಟಿ ಬ್ಯಾಳಿ ಹಾಕಿ ಕಲಸುವದ ಒಂದು ಸೌಟ ಉಪ್ಪು ತಂದ ಒಗದರ ಕಣ್ಣು ಮುಚ್ಚಿ ಅಷ್ಟು ನುಂಗುವದ ಸಂಜೆ ಐದು ಘಂಟೇಕ ಸಜ್ಜೆ ಭಕ್ರಿ ಕೂಡ ಕಾಯಿಪಲ್ಲೆ ಬಾಜಿ ಅಂಬು ಹೆಸರಿನದ ಎಪ್ಪತ್ತ ತರದ ತೊಪ್ಪಲಪಪ್ಪಾಯಿಕಾಯಿ ಎಳ ಎಳ ಕಬಗಿ ಹುಳ ಒಂದೊಂದ ಹೆಸರ ಬ್ಯಾಳಿ ಕಡಿಬ್ಯಾಳಿ ಚೆನ್ನಂಗಿಬ್ಯಾಳಿ ತೊಗರಿಬ್ಯಾಳಿ ದಿವಸಕೊಂದು ಚಂದ ಚಂದ ಆದಿತ್ಯವಾರ ಗೋದಿರೊಟ್ಟಿ ಬೆಲ್ಲಕೊಬ್ರಿ ಮಾದಲಿ ಮಾಡು ವದುವನುಹದ".

ಹೀಗೆ ಪ್ರತಿಭಟನೆಕಾರರಿಗೆ ಜೈಲು ಅಧಿಕಾರಿಗಳು ಕೊಡುತ್ತಿದ್ದ ಉಟೋಪಚಾರಗಳನ್ನು ಸಾಧ್ಯಂತವಾಗಿ ವಿವರಿಸುವುದಲ್ಲದೆ ಚಳವಳಿಕಾರರ ಆರೋಗ್ಯ, ಕ್ಷಾರ, ಸ್ನಾನ ಮುಂತಾದವುಗಳ ಬಗೆಗೂ ಜೈಲು ಅಧಿಕಾರಿಗಳು ಗಮನ ಹರಿಸುವ ವಿಷಯ ಅರಹುತ್ತ ಜನಸಾಮಾನ್ಯರು ಜೈಲಿನ ಬಗ್ಗೆ ತಾಳಿದ್ದ ಅಂಜಿಕೆ ಆತಂಕಗಳನ್ನು ತೊಡೆದುಹಾಕಿ ಅವರು ಚಳವಳಿಯಲ್ಲಿ ಪಾಲ್ಗೊಳ್ಳಲು ಕಾರಣಕರ್ತನಾಗಿದ್ದಾನೆ. ಈತೆರ ಜೈಲಲ್ಲಿ ಅವರು ಭಾರತೀಯ ಪ್ರತಿಭಟನಕಾರರನ್ನು ಸೂಸುಕ್ತವಾಗಿ ನೋಡಿಕೊಂಡಿರುವುದನ್ನು ಇತಿಹಾಸದಲ್ಲಿ ಹೇಳಲಾಗುವುದಿಲ್ಲ ಆದರೆ ಲಾವಣಿಗಳಲ್ಲಿ ಮಾತ್ರ ಈ ತರ ಹೇಳಲಾಗುತ್ತದೆ. ಅಂದರೆ ಲಾವಣಿಗಳ ಉದ್ದೇಶವೆ ಜನರನ್ನು ಸಂಘಟಿಸಿ ಪ್ರತಿಭಟನೆಗೆ ಸಹಕಾರ ಕೊಡುವುದನ್ನು ಕಾಣಲಾಗುತ್ತದೆ ಇಂತಹ ಸಂದರ್ಭದಲ್ಲಿ ನಾವು ಲಾವಣಿಯ ವೈಶಿಷ್ಟತೆಯನ್ನು ನೋಡಬಹುದು ಹೀಗೆ ಹೇಳವುದರ ಪರಿಣಾಮವಾಗಿ ಚಳವಳಿಯಲ್ಲಿ ಹೆಚ್ಚು ಜನ ಪಾಲ್ಗೊಂಡು ಶಿಕ್ಷೆ ಹೊಂದಿ ಜೈಲಿಗೆ ಹೋದರೂ ಶಿಕ್ಷೆ ಮುಗಿದು ಬಿಡುಗಡೆ ಯಾಗುವಾಗ ಪುಃನ ಇಲ್ಲಿಗೆ ಬರುತ್ತೇವೆಂದು ಜೈಲು ಅಧಿಕಾರಿಗಳಿಗೆ ತಿಳಿಸಿ ಬರುತ್ತಿದ್ದರೆಂಬುದನ್ನು ಮೋದಿನಸಾಬರ ಲಾವಣಿಯಿಂದ ಮನಗಾಣಬಹುದು.

"ಶಿಕ್ಷೆಯ ಅವಧಿ ಮುಗಿದ ಮರುದಿನ ಸರಕಾರಕ ಹೇಳಿ ಬರುತ್ತಿತ್ತರಿ ಪುಃನ ನಾವು ಬರತೇವಿ ಇಲ್ಲೆ ಇರತೇವಿ ನಮ್ಮ ತಂಬಿಗಿ ತಾಲಿ ಮೊದಲಾದ ಸಾಮಾನ ಜೋಪಾನ" ಎಂಬ ಚಳವಳಿಕಾರರ ಮಾತಿನಲ್ಲಿ ಜೈಲಿನ ಬಗ್ಗೆ ಅವರು ಈ ಮೊದಲು ಹೊಂದಿದ್ದ ಅಂಜಿಕೆ ಆತಂಕಗಳು ಮಾಯವಾಗಿರುವುದು ವ್ಯಕ್ತವಾಗುತ್ತದೆ. ಹೀಗೆ ಸ್ವರಾಜ್ಯ ಬೇಡಿಕೆಗೆ ಒತ್ತಾಯಿಸಿ ದೇಶಾದ್ಯಂತ ಪ್ರತಿಭಟನೆಗಳನ್ನು ಹೂಡಿದ ಭಾರತೀಯರ ಅನುಮತಿ ಇಲ್ಲದೆ ಆಳುವ ಬ್ರಿಟೀಷ್ ಸರಕಾರ ಪ್ರತಿಭಟನಾಕಾರರನ್ನು ಬಂಧಿಸಿ ಜೈಲಿಗೆ ಕಳಿಸಿ ಪ್ರತಿಭಟನೆಗಳನ್ನು ಮಟ್ಟಹಾಕುವ ಸಾಹಸಕ್ಕಿಳಿದುದನ್ನು ಗಾಂಧೀಜಿಯವರಾದಿಯಾಗಿ ಪ್ರತಿಭಟನೆಕಾರರ ಟೀಕೆಗೆ ಗುರಿಯಾದುದನ್ನು ಹುಲಕುಂದ 'ಭೀಮಕವಿ' ಮಾತಿನಿಂದಲೇ ನೋಡಬಹುದು.

"ಜನತೆಯ ಮನಸಿನ ಅನುಮತಿ ಇಲ್ಲದೆ ರಾಜ್ಯವಾಳುವ ಹುಚ್ಚು! ಚು! ಚು ಏನ ಆದರೇನ ನಾನೇ ಅನ್ನುವ ಮಾನಗೇಡಿಗಳ್ಹೆಚ್ಚು! ಚು! ಚು ದಡಮಶಾಹಿಯಿಂದ ನಡೆಸುವ ಅಧಿಕಾರ ಗಿಡಕ ಬೀಳುವ ಕಚ್ಚು ಒಡಲತಾಪದ ಕೊಡಲಿಯ ಹೊಡೆತಕ ಸಿಡದ ನುಚ್ಚು! ಚು! ಚು..."

ಕಾಂಗ್ರೆಸ್ ಪ್ರತಿಭಟನೆಗೆ ತಲೆ ಬಾಗಿದ ಬ್ರಿಟೀಷ್ ಸರಕಾರ ೧೯೩೫ ಕಾಯ್ದೆ ಪಾಸುಮಾಡಿ ಭಾರತೀಯರೊಂದಿಗೆ ಅಧಿಕಾರ ಹಂಚಿಕೊಳ್ಳಲು ಸಿದ್ದವಾಯಿತು, ಕಾಂಗ್ರೇಸ್, ಫೆಡರಲ್ ಸರಕಾರ ಕುರಿತ ಕಾಯ್ದೆ ಭಾಗವನ್ನು ಮಾನ್ಯ ಮಾಡದಿದ್ದರೂ ಪ್ರಾಂತೀಯ ಸ್ವಾಯತ್ತತೆ ಕುರಿತ ಕಾಯ್ದೆ ಭಾಗವನ್ನು ಅಂಗೀಕರಿಸಿ ಚುನಾವಣೆ ಎದುರಿಸಲು ಸಜ್ಜಾಯಿತು. ೧೯೩೭ರಲ್ಲಿ ಪ್ರಾಂತೀಯ ಶಾಸನಸಭೆಗಳಿಗೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಎಂಟು ರಾಜ್ಯಗಳಲ್ಲಿ ಮುಸ್ಲಿಮ್ ಲೀಗ ಮೂರು ರಾಜ್ಯಗಳಲ್ಲಿ ಬಹುಮತ ಪಡೆದು ಅಧಿಕಾರಕ್ಕೆ ಬಂದವು. ೧೯೩೭ರಿಂದ ೧೯೩೯ರವರೆಗೆ ಅಧಿಕಾರ ನಡೆಸಿ ಜನಾನುರಾಗಿಯಾದ ಕಾಂಗ್ರೇಸ್ ೧೯೩೯ರಲ್ಲಿ ಆರಂಭಗೊಂಡ ದ್ವಿತೀಯ ಮಹಾಯುದ್ಧದಲ್ಲಿ ಭಾರತೀಯ ಆಕ್ರಮಣಕ್ಕೊಳಗಾದ ದೇಶವೆಂದು ವಾಯಸರಾಯರು ಏಕಪಕ್ಷೀಯ ವಾಗಿ ಘೋಷಿಸಿದುದನ್ನು ಪ್ರತಿಭಟಿಸಿ ಅಧಿಕಾರದಿಂದ ನಿರ್ಗಮಿಸಿತು.

೧೯೩೦ರಲ್ಲಿ ಜರ್ಮನಿ ಆಸ್ಟ್ರೇಲಿಯಾ ವಶಪಡಿಸಿಕೊಂಡೊಡನೆ ಇಂಗ್ಲೆಂಡ್ ಸಹಿತ ಯುರೋಪಿನ ಇತರೇ ರಾಷ್ಟ್ರಗಳ ಮೇಲೆ ಆಕ್ರಮಣ ಮಾಡಲೆಳಸುವುದಲ್ಲದೆ ರಷ್ಯಾ ಹಾಗೂ ಅಮೇರಿಕಾ ಬಲಾಡ್ಯ ರಾಷ್ಟ್ರಗಳನ್ನು ಕೆಣಕಿತು ತಮ್ಮ ರಾಷ್ಟ್ರಗಳ ಸಮಗ್ರತೆ ಸಾರ್ವಭೌಮತ್ವ ಹಾಗೂ ಪ್ರತಿಷ್ಠೆ ಕಾಯ್ದುಕೊಳ್ಳುವ ದೃಷ್ಟಿಯಿಂದ ಅಮೇರಿಕಾ ರಶಿಯಾಗಳು ಸೈದ್ಧಾಂತಿಕ ಭಿನ್ನತೆ ಇದ್ದಾಗಲೂ ಇಂಗ್ಲಂಡ ಜೊತೆ ಕೈಗೂಡಿಸಿ ಜರ್ಮನಿ ಎದುರಿಸಲು ಸಂಕಲ್ಪಿಸಿದವು. ೧೯೪೦ರಲ್ಲಿ ಜಪಾನ ಜರ್ಮನಿಯೊಂದಿಗೆ ಕೈಗೂಡಿಸಿದಾಗ ಯುರೋಪ ಯುದ್ಧ ಏಶಿಯಾ ಖಂಡಕ್ಕೆ ಹಬ್ಬುವ ಮೂಲಕ ಜಾಗತಿಕ ಸ್ವರೂಪ ಪಡೆಯಿತು. ಬಂಧನದಲ್ಲಿದ್ದ ಸುಭಾಸರು ಅಧಾವ ಮಾಯೆಯಿಂದಲೋ ತಪ್ಪಿಸಿಕೊಂಡು ಜರ್ಮನಿಗೆ ಓಡಿಹೋಗಿ ಹಿಟ್ಲರ್ ಕೈ ಕುಲಕಿದರು. ಅನಂತರ ಆಜಾದ ಹಿಂದ ಸೈನ್ಯ ಸಂಘಟಿಸಿ ಜಪಾನ ನೆರವಿನೊಂದಿಗೆ ಸಿಂಗಾಪುರ, ಬ್ರಹ್ಮದೇಶ

ಮುಂತಾದ ದೇಶಗಳನ್ನು ಸದೆಬಡಿದು ಭಾರತದ ಪೂರ್ವಗಡಿ ತಲುಪಿದರು 'ಅತ್ತದಾರಿ ಇತ್ತ ಪುಲಿ' ಎನ್ನುವಂತೆ ಬ್ರಿಟೀಷ್ ಸರಕಾರದ ಸ್ಥಿತಿಯಾಯಿತು. ಯುದ್ಧನಂತರ ಸ್ವಾತಂತ್ರ್ಯ ಕೊಡುವ ಬಗ್ಗೆ ಆಶ್ವಾಸನೆ ನೀಡುವುದಲ್ಲದೆ ಪ್ರಸ್ತುತ ಯುದ್ಧ ಪ್ರಜಾಪ್ರಭುತ್ವ ಹಾಗೂ ಸರ್ವಾಧಿಕಾರ ರಾಷ್ಟ್ರಗಳ ನಡುವಿನ ಯುದ್ಧವಾಗಿದ್ದು ಪ್ರಜಾಪ್ರಭುತ್ವ ರಕ್ಷಣೆಗೆ ಹೋರಾಡುತ್ತಿರುವ ಮಿತ್ರ ರಾಷ್ಟ್ರಗಳಿಗೆ ಸಹಾಯ ಮಾಡಬೇಕೆಂದು ಭಾರತದ ವಾಯಿಸರಾಯರ ಮೂಲಕ ಬ್ರಿಟೀಷ್ ಸರಕಾರ ಕಾಂಗ್ರೆಸ್ ಧುರೀಣರಲ್ಲಿ ಮನವಿ ಮಾಡಿಕೊಂಡಿತು. ಪ್ರತಿಯಾಗಿ, ಪ್ರಜಾಪ್ರಭುತ್ವ ಹಾಗೂ ಸರ್ವಾಧಿಕಾರ ನಡುವಿನ ಹೋರಾಟದಲ್ಲಿ ಭಾರತ ಪ್ರಜಾಪ್ರಭುತ್ವದ ಪರವಾಗಿದ್ದರೂ ಬ್ರಿಟೀಷ್ ಸರಕಾರ ಭಾರತೀಯರಿಗೆ ಸ್ವಾತಂತ್ರ ನಿರಾಕರಿಸುವದರಿಂದ ಬ್ರಿಟೀಷ್ ಸರಕಾರದ ಯುದ್ಧ ಪ್ರಯತ್ನಗಳನ್ನು ಬೆಂಬಲಿಸುವುದಕ್ಕೆ ಕಾಂಗ್ರೆಸ್ ನಿರಾಕರಿಸಿತಲ್ಲದೆ ಆಗಸ್ಟ್ ೯ ೧೯೪೨ರಂದು ಮುಂಬೈಯಲ್ಲಿ ಸೇರಿದ ಸಮಾವೇಶದಲ್ಲಿ 'ಭಾರತ ಬಿಟ್ಟು ತೊಲಗಿ' ಚರಿತ್ರಾರ್ಹ ಗೊತ್ತುವಳಿ ಪಾಸುಮಾಡಿತು, ಇದನ್ನು ಅನುಸರಿಸಿ ಗಾಂಧೀಜಿಯವರು ಕೊಟ್ಟು 'ಮಾಡು ಇಲ್ಲವೆ ಮಡಿ' ಅಮರ ಸಂದೇಶ ಭಾರತೀಯರಲ್ಲಿ ವಿದ್ಯುತ್ ಸಂಚಾರವನ್ನುಂಟು ಮಾಡಿತು. ಪರಿಣಾಮವಾಗಿ, ಗಾಂಧೀಜಿಯವರಾದಿಯಾಗಿ ಕಾಂಗ್ರೆಸ್ ಧುರೀಣರನ್ನು ಬಂದಿಸಿ ಚಳವಳಿ ದಮನ ಮಾಡಲು ಸರಕಾರ ಹವಣಿಸಿತು. ಆನಂತರ ಸಂಭವಿಸಿದ ಘಟನೆಗಳನ್ನು ಹುಲಕುಂದ 'ಭೀಮಕವಿ ವಿವರಿಸುತ್ತಾನೆ.

"ಬೆಂಕಿ ಹಚ್ಚಿತದು ಜನತೆ ರೊಚ್ಚಿನಲ್ಲಿ ಕಿಚ್ಚ ಹಚ್ಚತದು
ದೇಶಪೂರ ಹಳಿಯು ಹಾರಿದವು ಗಾಡಿ ಉರುಳಿದವು
ಬೋಟು ಮುಳಗಿದವು ಭರಪೂರ ಪೋಲಿಸರಲ್ಲಿಯ
ಬಂದೂಕ ಕಸೆವರು ತೆರಿಗೆ ಹಣ ಲೂಟಿ ಮಾಡಿದರ
ಕೈ ಕಂಬಗಳು ಮಾಯವಾದವೋ ಸುಟ್ಟು ಹೋದವೋ
ದಫ್ತದರ ಸಾಯ್ಬರ ಚೋಣ್ಣ ಸೈಲಾತಪ್ಪ ಜೀವ
ಹಿಡಿದುಕೊಂಡು ಓಡಿದರ ಬಂಗ್ಲೆ ಸಾಲ ಚಾವಡಿಗೆ
ಬೆಂಕಿ ಹಚ್ಚಿ ಸ್ಟೇಶನ್ ಸುಟ್ಟರೋ ಎದುರೆದುರ
ತಾರಕಂಬ ಕತ್ತರಿಸಿತು ಜನ ಬಪಾಲು ಹೊಡೆದರು"

ಚಲೇಜಾವ್ ಚಳವಳಿಯಿಂದ ದೇಶಾದ್ಯಂತ ಹಿಂಸೆ ದೊಂಬಿ ಲೂಟಿ ಮುಂತಾದ ಧ್ವಂಸಕ ಕಾರ್ಯಗಳು ಜರುಗಿ ಅರಾಜಕತೆ ತಾಂಡವವಾಡುತ್ತಿದ್ದಾಗ ಕರ್ನಾಟಕ ಇದಕ್ಕೆ ಹೊರತಾಗಿರಲಿಲ್ಲ, ಗಾಂಧೀಜಿಯವರ ಪ್ರಿಯ ಶಿಷ್ಯನಾದ ಮೈಲಾರ ಮಹಾದೇವಪ್ಪ ಗಾಂಧೀಜಿಯವರ 'ಮಾಡು ಇಲ್ಲವೆ ಮಡಿ' ಕರೆಯಿಂದ ಪ್ರೇರಿತನಾಗಿ ಧಾರವಾಡ ಜಿಲ್ಲೆಯ ಹೊಸರೀತಿಯನ್ನು ತನ್ನ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಸಂಗಡಿಗರೊಂದಿಗೆ ಚಾವಡಿ ಸುಡುವ, ಹಪ್ತಿ ಲೂಟಿ ಮಾಡುವ ಮುಂತಾದ ವಿಧ್ವಾಂಸಕ ಕಾರ್ಯದಲ್ಲಿ ತೊಡಗಿದುದಕ್ಕಾಗಿ ಪೋಲಿಸರ ಗುಂಡಿಗಾಹುತಿ ಯಾಗಿ ಹುತಾತ್ಮನಾದುದನ್ನು ರಾಣಿಬೆನ್ನೂರ ಸಮ್ಮದ ಸಾಹೇಬನ ಲಾವಣಿಯಿಂದ ನೋಡಬಹುದು.

"ಕಾಂತನ ಕಳಕೊಂಡ ಕಾಮಿನಿಯಂತೆ ಭಾರತ ಹಾಕ್ವದು ಕಣ್ಣೀರ ಶಾಂತಿ
ಸಮರಸದಲ್ಲಿ ಗುಂಡಿನೊಬನೊಳು ಮಡಿದ ಮಹದೇವ ಮೈಲಾರ.....
ಕೂಗಿದನು ನಮ್ಮ ಮಹದೇವಣ್ಣನು ಹಾಕಿದ ಖಾಸೆಯ ಪಣತೊಟ್ಟು
ಸಾಗಿರಿ ವೀರರೆ ಶಾಂತಿಯ ಕಾಳಗ ಮಾಡಲು ಸಿಕ್ಕಿದೆ
............................... ನಮಗೀ ಹೊತ್ತು
ಕಟ್ಟಿಕೊಂಡ ಸಣ್ಣದೊಂದು ಟೋಳಿಯನು ಮಹದೇವ ಭಂಟ
ಹೊತ್ತು ಸಾಧಿಸಿ ನೂರಾರು ಚಾವಡಿ ಸುಟ್ಟ
ಇಷ್ಟಲ್ಲದೆ ಸರಕಾರಿ ಹಣ ಲೂಟಿಗೆ ಹೋದ
ಶರ್ತಮಾಡಿದ ನೂರಾರು ಪೋಲೀಸರ ಬಂದೂಕ ಕಸಿದ
ಸುಸ್ತನು ಮಾಡದೆ ರುಸ್ತುಂ ನೆಗಳೂರ ಹಪ್ತಿಇಯ ಹೊಡೆದನು
ತೀವ್ರದಿ ಮುತ್ತಿತು ಸರಕಾರ ವಾರಂಟಿ ತಗೆಯತುಸಿಕ್ಕಲಿ
ಹಿಡಿದರು ಬೇಕೆನುತಲಿ"

ಮೈಲಾರ ಮಹಾದೇವಪ್ಪನಂತೆ ಸಂಪಗಾಂವಿ ವಾಲಿಚನ್ನಪ್ಪ ಚಲೇಜಾವ್ ಪ್ರತಿಭಟನೆಯಿಂದ ಪ್ರಭಾವಿತನಾಗಿ ಬೆಳಗಾಂವಿ ಜಿಲ್ಲೆಯ ಬಾಗೇವಾಡಿಯನ್ನು ತನ್ನ ಕಾರ್ಯಕ್ಷೇತ್ರವಾಗಿ ಮಾಡಿಕೊಂಡು ಕ್ರಾಂತಿಕಾರಕ ಚಟುವಟಿಕೆಗಳಿಂದ ಸರಕಾರಕ್ಕೆ ತಲೆನೋವಾದುದನ್ನು ಹುಲಕುಂದ 'ಭೀಮಕವಿ' ಹೇಳುತ್ತಾನೆ.

"ಕ್ರಾಂತಿವೀರ ವಾಲಿಚನ್ನಪ್ಪನವರ ಕಥೆ
ಪ್ರೀತಿಯಿಂದ ಕೇಳಿರಿ ಕುಂತ ಜನರ
ಸ್ವಾತಂತ್ರ್ಯ ಸಲುವಾಗಿ ಆತ್ಮದ ಪರಿವಿಲ್ಲ ದುಡಿದ
ಕೀರ್ತಿ ಪಡೆದ ಭಾರತಾಂಬೆ ಕುವರ
ಬೆಳಗಾಂವಿ ಜಿಲ್ಲೆ ಬಾಗೇವಾಡಿ ಊರಲ್ಲಿ
ಗೆಳೆಯರ ಕೂಡಿಕೊಂಡು ಮೊದಲ ಕಾರ್ಯ ನಡೆಸಿದ
ಬೆಳಗಾಗುದರೊಳಗೆ ಹನ್ನೊಂದು ಮೈಲತಾರ
ಕಂಬಕಿತ್ತ ತಂತಿ ಕತ್ತರಿಸಿದರ
ಮುಂದೆ ಒಂದು ತಿಂಗಳ ತನಕ
ಒಂದೊಂದು ಊರದ ತನಕ
ಇಬ್ಬಬ್ರ ಸತ್ಯಾಗ್ರಹ ಮಾಡುತ
ಪೋಷ್ಟ ಡಬ್ಬಿ ಬಾಂವ್ಯಾಗ ಒಗೆಯುತ
..........................................
ಗುರ್ತು ಹತ್ತದ್ಹಾಂಗ ಫೌಜದಾರ ಡ್ರೆಸ್ ಹಾಕಿ
ಬೆತ್ತ ಹಿಡಿಕೊಂಡ ತಿರಗ್ಯಾಡವರ ಸ್ವಾತಂತ್ರ್ಯಸಲುವಾಗಿ
ಅಕ್ಟೋಬರ ೨೨, ಆದಿನ ಸಂಪಗಾವಿಯಲ್ಲಿ

ಪೋಲಿಸರ ಬಂದೂಕ ಕಸಿದುಕೊಂಡಾರ
ಕಣ್ಣಿಗೆ ಕಾರಪುಡಿ ಎಸೆದ ರುಂಡ ಹಾರಿಸಿದರ
ಕೇಳೆತೆ ತಮ್ಮ ಕೆಲಸವನ್ನು ಸಾಧಿಸಿದರ
.........................................
ಹೇಳಿದರ ತೀರುದಿಲ್ಲ ಇವರ ಕೆಲಸ
ಕೇಳಿದವರಿಗೆ ಸಂತೋಷ ಮನಕ್ಕೆ ವೀರಾವೇಶ
ಇಂಥವರಿದ್ದಾಗ ಆಗವದು ಮಹಾಕೆಲಸ..."

ಹೀಗೆ ಭಾರತ ಸರಕಾರ ಆಂತರಿಕವಾಗಿ ಚಲೇಜಾವ್ ಚಳುವಳಿಯನ್ನು ಹತ್ತಿಕ್ಕಲು ಹಾಗೂ ಬಾಹ್ಯದಲ್ಲಿ ಜಪಾನ ನೆರವಿನೊಂದಿಗೆ ಆಕ್ರಮಣಕ್ಕೆ ಸಿದ್ದರಾಗಿರುವ ಸುಭಾಸರ ಸೈನ್ಯವನ್ನು ಎದುರಿಸಲು ಹೆಣಗಾಡುತ್ತಿದ್ದರೆ. ಯೂರೋಪಿನಲ್ಲಿ ಇಂಗ್ಲೆಂಡ್ ಮಿತ್ರರಾಷ್ಟ್ರಗಳ ನೆರವಿನೊಂದಿಗೆ ಜರ್ಮನಿ ವಿರುದ್ಧ ಸೆಣಸಾಡುತ್ತಿತ್ತು. ದೀರ್ಘಕಾಲದವರೆಗೆ ಯುದ್ಧ ಮುಂದುವರಿಸಲು ಇಚ್ಛಿಸದ ಮಿತ್ರಕೂಟ ಜರ್ಮನಿಯ ಮಿತ್ರರಾಷ್ಟ್ರವಾದ ಜಪಾನಿನ ಮೇಲೆ ಬಾಂಬ್ ಹಾಕುವ ಮೂಲಕ ವೈರಿಯನ್ನು ಅಂಜಿಸಲು ಸಂಕಲ್ಪಿಸಿದುದನ್ನು ಕೇಶವರಾವ್ ಕುಲಕರ್ಣಿ ಲಾವಣಿಯಿಂದ ನೋಡಬಹುದು.

"ಅಣುಬಾಂಬಿನಿಂದ ಸುಟ್ಟುಹೋಯಿತೋ ಜಪಾನದಲ್ಲಿದ್ದ ಹೈನಾನ
ಕೋಟಿ ಮೀರಿ ಜನ ಸತ್ತಿತು ವಿಷದಲ್ಲಿ ಉಳಿಯಲಿಲ್ಲ
ದನಕರ ಪ್ರಾಣ ಅಂಜಿ ಜಪಾನವು ಒಪ್ಪಂದಕೊಟ್ಟಿತು
ಕೆಳಗೆ ಇಟ್ಟು ಗಡ ಶಸ್ತ್ರವನ ಸಂಜೆಯಾಯಿತು.
ಸ್ವಾತಂತ್ರ್ಯರಾಜ್ಯದಾ ರಂಜಿಪ ಸೂರ್ಯನು ಮುಳುಗಿನು
ವರಿಹೋಯ್ತು ಆಂಗ್ಲರ ಸೈನ್ಯವು ತಾ ಆಜಾದ ಸೈನ್ಯವು
ಬಂತು ಶರಣ ಸಾರಿ ಹೋದರಪ್ಪ ಯುದ್ಧವಿಲ್ಲದಾಗ
ಶೌರ್ಯವನ್ನೆಷ್ಟಂತ ಹೇಳೋಣ ಹಿಡಿದು ಸೆರೆಯಾಳಿಟ್ಟು
ಬಹಳ ಕಷ್ಟಪಟ್ಟು ನಡೆಸುತ ತಂದರೋ ಅಕ್ಷರ"

ಜಪಾನದ ಹಿರೋಶಿಮಾ ನಾಗಸಾಕಿ ಪಟ್ಟಣಗಳ ಮೇಲೆ ಅಮೇರಿಕಾ ಅಣುಬಾಂಬ ಹಾಕಿ ಜರ್ಮನಿ ಜಪಾನಗಳು ಏಕಕಾಲಕ್ಕೆ ಶರಣರಾಗತವಾಗುವಂತೆ ಮಾಡುವ ಮೂಲಕ ಎರಡನೆಯ ಮಹಾಯುದ್ದಕ್ಕೆ ಮಂಗಳ ಹಾಡಿತು. ಯುದ್ಧನಂತರ ಇಂಗ್ಲೆಂಡಿನಲ್ಲಿ ಸಾರ್ವತ್ರಿಕ ಚುನಾವಣೆಗಳು ಜರುಗಿ ಆ್ಯಟ್ಲಿ ನೇತೃತ್ವದ ಕೂಲಿಕಾರ ಪಕ್ಷ ಅಧಿಕಾರಕ್ಕೆ ಬಂದು ಭಾರತಕ್ಕೆ ಸ್ವಾತಂತ್ರ್ಯ ದಯಪಾಲಿಸುವಲ್ಲಿ ವಿಶೇಷ ಆಸ್ತೆ ವಹಿಸಿತು. ೧೯೪೬ರಲ್ಲಿ ಭಾರತಕ್ಕೆ 'ಮಂತ್ರಿಮಂಡಳ ಆಯೋಗದ ಮೂಲಕ ಕಳಿಸಿಕೊಟ್ಟ ಯೋಜನೆಯಂತೆ 'ಘಟನಾಸಭೆಗೆ ಚುನಾವಣೆ ನಡೆಸುವದಲ್ಲದೆ ನಡುಗಾಲ ಸರಕಾರ ಸ್ಥಾಪಿಸುವ ಬಗ್ಗೆ ಕ್ರಮ ಕೈಕೊಂಡ ಮುಂತಾದ ವಿವರಗಳನ್ನು ಹುಲಕುಂದ ಭೀಮಕವಿ ಲಾವಣಿಯಿಂದ ಮನಗಾಣಬಹುದು.

"ಹತ್ತೊಂಬತ್ತನೂರ ನಾಲ್ವತ್ತಾರನೇ ಇಪ್ಪಿಸಪ್ಟೆಂಬರ ತಾರೀಖು
ಎರಡಕ್ಕೆ ಪೂರ ಮುಖಂಡರೆಲ್ಲ ಕೂಡಿ ತಕ್ಕೊಂಡಾರ ಕೈಯಾಗ
ಅಖಂಡ ಹಿಂದುಸ್ಥಾನದ ಕಾರಬಾರ ಹಿಂದುಸ್ಥಾನವನ್ನು
ಸಂದಿಗೊಂದಿ ಸಹಿತ ಬಂದ ನೋಡಿಕೊಂಡ್ರ ಮಂತ್ರಿತ್ರಯರ
ವಾತಾವರಣ ಬಹಳ ಘಾತಕ ಐತಿ ಅಂತ ಖಾತ್ರಿ ಮಾಡಿಕೊಂಡ್ರ
ಬ್ರಿಟೀಷರ ಒಳಗಿಂದೊಳಗ ವೈವೆಲ್ಗ ತಿಳಿಸ್ಯರ
ಬ್ರಿಟನ್‌ಕ ಬಾ ಅಂತವತ್ತರ ಹೇಳಿ ಹೋಗುವ ತಡ
ಗಾಳಿ ಹೋದ್ಹಂಗ ಹೋಗಿ ಬಿಟ್ಟ ಕೇಳಿಕೊಳ್ಳಲಾಕ ಅವರ ವಿಚಾರ
ಕಸಗೊಳ್ಳು ಜನರಿಗೆ ಕಡಾ ಕೊಡುದ ಲೇಸಂತ ಪಾರ್ಲಿಮೆಂಟಿ
ನೊಳ್ಳು ಪಾಸಮಾಡಿಕೊಂಡರ
ರಾಷ್ಟ್ರೀಯ ಸರಕಾರ ಕೊಟ್ಟ ರಾಜಿಯಾಗಿರಂತ ವಾಯಿಸರಾಯರ
ಕಿವಿಯೊಳು ಹೇಳಿದರ
ಒಲ್ಲೆವ್ವ ಅಂದ್ರ ಕೇಳುದಿಲ್ಲ ಒಕ್ಕೊಬ್ಬ ಬಿಡತೇನಂತ ದಿಕೆಬ್ಬ
ಓಡಿಬಂದ್ರ ವಾಯಿಸರಾಯರ"

"ವಂದನೆ ಮಾಡಿ ನೆಹರುನ ಮುಂದ ಹೇಳಿಕೊಂಡಾರ ಅಧಿಕಾರ ಮಾಡಿರೆಂತ ಸ್ವೀಕಾರ ಮಹಾತ್ಮಗಾಂಧಿ ಮೊದಲಾದ ಮುಖಂಡರ ಕಮಿಟಿಯ ಕೂಡಿಸಿದರು ಪಂಡಿತರವಾದ ವಿವಿಧ ಮಾಡಿ ಒಪ್ಪಿಕೊಂಡರು ಎಲ್ಲಾರು ಮಾಡಲಿಕ್ಕೆ ಮಧ್ಯವರ್ತಿ ಸರಕಾರ"

ನೆಹರು ನೇತೃತ್ವದ ನಡುಗಾಲ ಸರಕಾರ ಮಾನ್ಯಮಾಡದ ಮುಸ್ಲಿಂಲೀಗ ಧುರೀಣರಾದ ಜಿನ್ನ ಉಗ್ರಚಳವಳಿ ಹೂಡುವಂತೆ ದೇಶಾದ್ಯಂತ ಹರಡಿರುವ ಮುಸ್ಲಿಮರಿಗೆ ಚಿತಾವಣಿ ಮಾಡಿದುದನ್ನು ಮಾರನ ಬಸರಿಯ ಮೋದಿನ ಸಾಬ ಲಾವಣಿಯಲ್ಲಿ ನೋಡಬಹುದು.

"ಪಾಕಿಸ್ತಾನದ ಮುಖಂಡರಾದ ಜಿನ್ನಾಸಾಬಗ ಬಂತು ದುಸ್ತರ
ತನ್ನ ಕಬೂಲ ಇಲ್ಲದೆ ಕಾಂಗ್ರೆಸ್‌ದವರ ಕಡೆಗೆ ಹೆಂಗ ಕೊಟ್ಟರೆಂತ
ಅಧಿಕಾರ ಸತ್ಯಾಗ್ರಹ ಮಾಡತೇನಂತ ಸರಕಾರದವರ ಕಡೆಗೆ
ನಡಕಾಸಿ ಬರದಾನ ಪತ್ತರ ಬಂಗಾಲದೊಳಗೆ ಭಾರಿ ದಂಗೆ
ಏಳುಹಂಗ ಮುಸ್ಲಿಂರಿಗೆ ಮಾಡಿಬಿಟ್ಟ ಮಂತರ ರಾಜೀನಾ
ಮೆಕೊಟ್ಟು ಬಾಜು ಆಗಿರೆಂತ ಪದವೀಧರರಿಗೆ ಕೊಟ್ಟ
ಆರ್ಡರ ಮನಿ ಮಸೀದಿ ಮ್ಯಾಲ ಕರಿ ನಿಶಾನಿ ಹಚ್ಚಿ ದೀನ
ಎಂಬ ಜಯಕಾರ ಹೊಡೆಸಿದರ ಕಂಡಕಂಡ ಕಡೆಗೆ ಪುಂಡರೆಲ್ಲ
ಬಂಡು ಹೂಡಿದರ ಬರಪೂರ ನೌಕರಿಯೊಳಗ ನಡದೀತ
ಅತ್ಯಾಚಾರು ಹೇಳಲಾರೆ ನಡೆದ ವಿಸ್ತಾರ"....

ಜಿನ್ನಾ ಕರೆಯ ಮೇರೆಗೆ ಮುಸ್ಲಿಮರು ದೇಶಾದ್ಯಂತ ಉಗ್ರ ಚಳವಳಿ ಹೂಡಿ ಆಡಳಿತಕ್ಕೆ ಅಡ್ಡಿ-ಆತಂಕಗಳನ್ನುಂಟು ಮಾಡಿದಾಗ ವ್ಯಾಸರಾಯ ವ್ಯವೆಲ್ ಮಧ್ಯಸ್ಥಿಕೆಯಲ್ಲಿ ಕಾಂಗ್ರೆಸ್ ಮುಸ್ಲಿಂಲೀಗ್ ಧುರೀಣರ ನಡುವಿನ ಮತಭೇದ ಹೋಗಿ ಮುಸ್ಲಿಂಲೀಗ ಧುರೀಣರು ನಡುಗಾಲ ಸರಕಾರ ಸೇರಿದರೂ ಸರಕಾರಕ್ಕೆ ಕಿರಿಕಿರಿಯನ್ನುಂಟುಮಾಡುವುದನ್ನು ಮುಂದುವರಿಸಿದರು. ಪರಿಣಾಮವಾಗಿ, ಮುಸ್ಲಿಮ್‌ಲೀಗ ಸದಸ್ಯರನ್ನು ಸರಕಾರದಿಂದ ವಜಾ ಮಾಡುವಂತೆ ನೆಹರು ವಾಯಿಸರಾಯರಿಗೆ ಸಲಹೆ ನೀಡಿದುದು ಕಾಂಗ್ರೆಸ್ ಮುಸ್ಲಿಮ್ ಲೀಗ್ ನಡುವೆ ಮತ್ತಷ್ಟು ಕಂದಕ ನಿರ್ಮಾಣವಾಗಿ ಮುಸ್ಲಿಮ್ ಲೀಗ್ ಪಾಕಿಸ್ತಾನ ಬೇಡಿಕೆ ಮುಂದಿಟ್ಟುಕೊಂಡು ಆರಂಭಿಸಿದ ಹೋರಾಟ ಮತೀಯ ಘರ್ಷಣೆಗೆಡೆ ಮಾಡಿಕೊಟ್ಟಿತು. ಮತೀಯ ಘರ್ಷಣೆಗೆ ಶಾಶ್ವತವಾಗಿ ಮಂಗಳ ಹಾಡುವುದಕ್ಕಾಗಿ ಕಾಂಗ್ರೇಸ್ ಧುರೀಣರು ಮನಃಸಾಕ್ಷಿಗೆ ವಿರೋಧವಾಗಿ ದೇಶದ ವಿಭಜನೆಗೆ ಒಪ್ಪಿಕೊಳ್ಳಬೇಕಾಯಿತು. ಪರಿಣಾಮವಾಗಿ ಆಗಸ್ಟ್ ೧೫ ೧೯೪೭ರಂದು ದೇಶದ ವಿಭಜನೆಯೊಂದಿಗೆ ಭಾರತ ಸ್ವತಂತ್ರರಾಷ್ಟ್ರವಾಗಿ ಹೊರಹೊಯಿತು. ಭಾರತೀಯರ ಬಹುವರ್ಷಗಳ ಬೇಡಿಕೆ ನನಸಾದ ದಿನದ ಸಂಭ್ರಮದ ವರ್ಣನೆಯನ್ನು ಹುಲಕುಂದ ಕವಿಯ ಲಾವಣಿಯಲ್ಲಿ ನೋಡಬಹುದು.

ಹೀಗೆ ರಾಷ್ಟ್ರೀಯ ಪ್ರತಿಭಟನೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ರಾಷ್ಟ್ರೀಯ ಲಾವಣಿಗಳ ಮುಖೇನ ಭಾರತದ ಗತವೈಭವ ರಾಷ್ಟ್ರೀಯ ಪ್ರತಿಭಟನೆಗಳ ನೇತಾರರ ವ್ಯಕ್ತಿ ವಿಚಾರಗಳನ್ನು ಗ್ರಾಮಾಂತರ ಪ್ರದೇಶದ ಜನರಿಗೆ ಪರಿಚಯ ಮಾಡಿಕೊಟ್ಟು ಅವರನ್ನು ರಾಷ್ಟ್ರೀಯತೆಯ ನೆಲೆಯ ಪ್ರತಿಭಟನೆಗಳೆಡೆಗೆ ಆಕರ್ಷಿಸಿದ ಹಾಗೂ ಸ್ವರಾಜ ಪರಿಕಲ್ಪನೆಯ ಪರಿಚಯ ಮತ್ತು ಅದಕ್ಕಾಗಿ ನಡೆದ ರಾಷ್ಟ್ರೀಯತೆಯ ನೆಲೆಯ ಪ್ರತಿಭಟನೆಗಳಲ್ಲಿ ಪಾಲ್ಗೊಂಡು ತುರಂಗಕ್ಕೆ ತಳ್ಳಲ್ಪಟ್ಟರೂ ಅಂಜದಿರಲು ಜನಸಾಮಾನ್ಯರಿಗೆ ಧೈರ್ಯ ತುಂಬಿದವು. ಹಾಗೆಯೇ ಅಸಹಕಾರ ಪ್ರತಿಭಟನೆ, ಉಪ್ಪಿನ ಸತ್ಯಾಗ್ರಹ, ಚಲೇಜಾವ್ ಚಳವಳಿ ದ್ವಿತೀಯ ಮಹಾಯುದ್ಧ ಹಾಗೂ ಅನಂತರ ನಡೆದ ಸ್ವದೇಶ–ಜಾಗತಿಕ ಘಟನೆಗಳು ಭಾರತದ ರಾಷ್ಟ್ರೀಯತೆಯ ನೆಲೆಯ ಪ್ರತಿಭಟನೆಗಳ ಉದ್ದೇಶ ಈಡೇರಿಸುವಲ್ಲಿ ನೆರವಾದ ಬಗೆಯನ್ನು ಪ್ರತಿಕೋಪಾದಿಯಲ್ಲಿ ಅರಹುವ ಮೂಲಕ ಗ್ರಾಮಾಂತರ ಪ್ರದೇಶದ ಜನರ ರಾಷ್ಟ್ರ ರಾಷ್ಟ್ರೀಯತೆಯ ಪರಿಕಲ್ಪನೆ ಮೂಡಿಸಿ ರಾಷ್ಟ್ರೀಯ ಪ್ರತಿಭಟನೆ ಜಯಗೊಳ್ಳಬೇಕೆಂಬ ಪ್ರಬಲ ಆಕಾಂಕ್ಷೆ ವ್ಯಕ್ತಪಡಿಸುವುದಕ್ಕೆ ಕಾರಣವಾದವೆಂಬ ಸಂಗತಿಯನ್ನು ರಾಷ್ಟ್ರೀಯ ಲಾವಣಿ ಪ್ರಸ್ತುತಪಡಿಸುತ್ತದೆ.

"ಈ ನಮ್ಮ ಭಾರತದ ಸಂಗ್ರಾಮ ಸಂದೇಶಗಳು ಮಿಂಚಿನಂತೆ ಚಮಕಿದವು. ಪ್ರಸಾರ ಮಾಡಲಿಕ್ಕೆ ಸುರುಮಾಡಿದವು ಇದರಿಂದ ಜನರ ಮನಸ್ಸಿನ ಮೇಲೆ ಆರಂಭಕ್ಕೆ ಎಷ್ಟು ಪರಿಣಾಮವಾಗುತ್ತವೆಂಬುದನ್ನು ಜನತೆಯ ಹುರುಪು ಹುಮ್ಮಸಗಳಿಂದ ಅರಿತುಕೊಂಡೆವು. ಈ ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆಯ ನೆಲೆಯ ಪ್ರತಿಭಟನೆಗಳ ಕುರಿತು ಇರದಿದ್ದರೆ ರಾಷ್ಟ್ರೀಯತೆಯ

ಪ್ರತಿಭಟನೆಗಳಿಗೆ ಒಂದು ಸಂಘಟನೆ ಶಕ್ತಿ ಆಕ್ರೋಶ ಇರತಿರಲಿಲ್ಲ ಎಂದು ತಿಳಿಯಬಹುದು ಈ ಹೋರಾಟ ಹಳ್ಳಿ ಹಳ್ಳಿಗೂ ತಲುಪಿ ಅಖಂಡವಾದ ಪರಿಣಾಮದಿಂದ ಆಂದೋಲನ ಗಗನಕ್ಕೆ ಚಾಚಿತು ಎಂದು ಹೇಳಬಹುದು.

## ೫.೪. ಸಾಮಾಜಿಕ ನೆಲೆ

ಮನುಷ್ಯ ಹುಟ್ಟಿದ ತಕ್ಷಣವೇ ಸಾಮಾಜಿಕ ಜೀವಿಯಾಗುತ್ತಾನೆ. ಏಕೆಂದರೆ ಮಗು ಹುಟ್ಟಿದ ತಕ್ಷಣದಿಂದ ತಾಯಿಯನ್ನು ಹಂಬಲಸುತ್ತವೆ. ತನ್ನ ಹಸುವನ್ನು ಹಿಂಗಿಸಿಕೊಳ್ಳುವ ಸಲುವಾಗಿ. ಹಾಗಾಗಿ ಮನುಷ್ಯ ಜೀವಿ ಒಬ್ಬ ಸಮಾಜ ಜೀವಿ ಒಂಟಿಯಾಗಿ ಬದುಕಲು ಆಗುವುದಿಲ್ಲ. ಅವನು ಬೆಳೆಯುತ್ತಾ ಬೆಳೆಯುತ್ತಾ ತನ್ನ ಕುಟುಂಬವನ್ನು ಕಟ್ಟಿಕೊಳ್ಳುವುದರ ಜೊತೆ ತನ್ನ ಸಾಮಾಜಿಕ ಚೌಕಟ್ಟನ್ನು ಕಟ್ಟಿಕೊಳ್ಳುತ್ತಾನೆ. ಕುಟುಂಬ ಆದ ತಕ್ಷಣ ತನ್ನ ಸಂಬಂಧಿಕರು ತನ್ನ ಸುತ್ತಮುತ್ತಲಿರುವ ತನ್ನನ್ನು ಹೋಲುವ ಸಮುದಾಯ ನಂತರ ತನ್ನ ಊರು, ತನ್ನ ಜಿಲ್ಲೆ, ತನ್ನ ರಾಜ್ಯ, ತನ್ನ ದೇಶ ಹೀಗೆ ಅವನು ತನ್ನ ಸಮುದಾಯವನ್ನು ಕಟ್ಟಿಕೊಳ್ಳುತ್ತಾನೆ. ನಂತರ ತನ್ನ ಸಮುದಾಯವನ್ನು ತನ್ನ ಜನರನ್ನು ರಕ್ಷಣೆ ಮಾಡಿಕೊಳ್ಳುವ ಸಲುವಾಗಿ ಅವನು ಏನು ಬೇಕಾದರೂ ಮಾಡುತ್ತಾನೆ.

ಹೀಗೆ ಲಾವಣಿಗಳಲ್ಲಿ ತನ್ನ ಸಮಾಜವನ್ನು ತನ್ನ ಸಮುದಾಯವನ್ನು ಉಳಿಸಿಕೊಳ್ಳುವ ಸಲುವಾಗಿ ಹಲವಾರು ಪ್ರತಿಭಟನೆಗಳು ಇತಿಹಾಸದಲ್ಲಿ ನಡೆದಿರುವುದು ಕಂಡುಬರುತ್ತದೆ. ಅವು ಮಹಾಯುದ್ಧಗಳಾಗಿರಬಹುದು, ಹಲವಾರು ರೈತ ಹೋರಾಟಗಳಾಗಿರಬಹುದು, ಬ್ರಿಟೀಶರನ್ನು ಭಾರತದಿಂದ ಹೊಡೆದೋಡಿಸಲು ಬ್ರಿಟೀಶರ ಜೊತೆ ನಡೆದ ಭಾರತೀಯರ ಸಂಘಗಳಿರಬಹುದು. ಇವೆಲ್ಲ ಒಂದು ರೀತಿಯ ಸಾಮಾಜಿಕ ಸಂಘರ್ಷಗಳೆಂದು ಅನಿಸುತ್ತದೆ. ಯಾಕೆಂದರೆ ಬ್ರಿಟೀಶರ ವಿರುದ್ಧ ನಡೆದ ಈ ಎಲ್ಲ ಸಂಘರ್ಷಗಳು ಮೇಲುನೋಟಕ್ಕೆ ಇವು ರಾಜಕೀಯ ಮತ್ತು ರಾಷ್ಟ್ರೀಯ ಸಂಘರ್ಷಗಳಾಗಿದ್ದರೂ ಸಹಿತ ನಾವು ಸೂಕ್ಷ್ಮವಾಗಿ ಗಮನಿಸಿದಾಗ ಅವು ತನ್ನ ಸಮುದಾಯ ತನ್ನ ಜನರ ರಕ್ಷಣೆಯನ್ನು ಮಾಡಿಕೊಳ್ಳುವ ಸಲುವಾಗಿ ಈ ಸಂಘರ್ಷಗಳು ನಡೆದಿರುವುದು ಕಂಡುಬರುತ್ತವೆ. ಕಾಂಗ್ರೆಸ್ ಸಂಘ ಸ್ಥಾಪನೆಯಾದ ಮೇಲೆ ಜನರನ್ನು ಸಂಘಟಿಸಿ ಮಹಾತ್ಮಗಾಂಧಿ, ಜವರಲಾಲ ನೆಹರು, ವಲ್ಲಬಾಯಿ ಪಟೇಲ, ಲಾಲಾಲಜಪತರಾವ್ ಮುಂತಾದವರು ರಾಷ್ಟ್ರಮಟ್ಟದಲ್ಲಿ ರಾಷ್ಟ್ರೀಯ ಹೋರಾಟಗಳನ್ನು ಮಾಡಿದರೆ ಚಿಕ್ಕ ಚಿಕ್ಕದಾಗಿ ಅಲ್ಲಲ್ಲಿ ತನ್ನ ಸುತ್ತಮುತ್ತಲಿರುವ ಸಮುದಾಯ ಸಾಮಾನ್ಯ ಜನರ ರಕ್ಷಣೆ ಮತ್ತು ತಮ್ಮ ಬದುಕು, ತಮ್ಮ ಕುಟುಂಬ ತನ್ನ ರಾಜ್ಯಗಳನ್ನು ತಮ್ಮ ಆಡಳಿತ ಪ್ರದೇಶಗಳನ್ನು ಉಳಿಸಿಕೊಳ್ಳುವ ಸಲುವಾಗಿ ಹಲವಾರು ಹೋರಾಟಗಳಾಗಿರುವುದು ಕಂಡುಬರುತ್ತವೆ. ಅವು ಯಾವುವೆಂದರೆ;

೧. ದಾರ್ಶನಿಕ ಮತ್ತು ಪರೋಪಕಾರಿ ನೆಲೆಯ ಪ್ರತಿರೋಧಗಳು

೨. ಜಾತಿ ಅಸಮಾನತೆಯ ನೆಲೆಯ ಪ್ರತಿರೋಧಗಳು

### ೫.೪.೧. ದಾರ್ಶನಿಕ ಮತ್ತು ಪರೋಪಕಾರಿ ನೆಲೆಯ ಪ್ರತಿರೋಧಗಳು

ದಾರ್ಶನಿಕ ಮತ್ತು ಪರೋಪಕಾರಿ ನೆಲೆಯ ಪ್ರತಿರೋಧಗಳ ಕುರಿತು ಚರ್ಚೆ ಮಾಡುವುದು ಅಷ್ಟು ಸುಲಭದ ಮಾತಲ್ಲ. ಏಕೆಂದರೆ ಆಧುನಿಕ ಕಾಲದಲ್ಲ ಯಾರು ಇನ್ನೊಬ್ಬರ ಸಲುವಾಗಿ ತಮ್ಮ ಜೀವನವನ್ನು ಮುಡುಪಾಗಿ ಇಡುವುದಿಲ್ಲ. ಅಂತಹ ಸಂದರ್ಭದಲ್ಲಿ ತನ್ನ ಸಲುವಾಗಿ ಅಲ್ಲದೆ ತನ್ನ ಸುತ್ತಮುತ್ತಲಿರುವ ತನ್ನ ಸಮುದಾಯಕೋಸ್ಕರ ತಮ್ಮ ಪ್ರಾಣವನ್ನು ಕೊಟ್ಟಂತಹ ವೀರರಲ್ಲಿ ಅದು ವಸಾಹತುಶಾಹಿಗಳನ್ನು ಪ್ರತಿಭಟಿಸಿ ಸ್ಥಳೀಯ ತನ್ನ ಸಮುದಾಯವನ್ನು ಕಾಪಾಡಿಕೊಳ್ಳುವ ಸಲುವಾಗಿ ತಮ್ಮ ಪ್ರಾಣವನ್ನು ಕಳೆದುಕೊಂಡುವರಲ್ಲಿ 'ಸಿಂಧೂರ ಲಕ್ಷ್ಮಣ', 'ಮುಂಡರಗಿ ಭೀಮರಾಯ' ಇವರಿಬ್ಬರು ಮುಖ್ಯವಾಗಿ ಅಧ್ಯಯನದಿಂದ ಕಂಡುಬರುತ್ತಾರೆ. ವಸಾಹತುಶಾಹಿಗಳ ವಿರುದ್ಧ ಪ್ರತಿಭಟಿಸುವಲ್ಲಿ ಸ್ಥಳೀಯ ಪ್ರತಿಭಟನಕಾರರು ಒಂದು ರೀತಿಯಲ್ಲಿ ತನ್ನ ಸಮುದಾಯ ತನ್ನ ಜಿಲ್ಲೆ ತನ್ನ ರಾಜ್ಯ ಕೊನೆಗೆ ತನ್ನ ದೇಶಕ್ಕೆ ಅದನ್ನು ಬ್ರಿಟೀಶರಿಂದ ಕಾಪಾಡಲು ಹೋರಾಟ ಮಾಡಿದರೂ ಸಹಿತ ಯಾವುದೋ ಒಂದು ಚಿಕ್ಕ ಸಮುದಾಯದಲ್ಲಿ ಜನಿಸಿ ಅನಕ್ಷರಸ್ಥರಾಗಿ ತನ್ನ ಸಮುದಾಯವನ್ನು ರಕ್ಷಣೆ ಮಾಡಿ ಕೊನೆಗೆ ತಮ್ಮ ಪ್ರಾಣವನ್ನೇ ಅರ್ಪಿಸಿದ ವೀರರಲ್ಲಿ ಗಾಂಧಿಯನ್ನು ಬಿಟ್ಟರೆ ಈ ಇಬ್ಬರು ವೀರರಾದ ಸಿಂಧೂರ ಲಕ್ಷ್ಮಣ ಮತ್ತು ಮುಂಡರಗಿ ಭೀಮರಾಯ ಇನ್ನುಳಿದ ಹೋರಾಟಗಾರರಾದ ಸಂಗೊಳ್ಳಿ ರಾಯಣ್ಣ, ನರಗುಂದ ಬಾಬಾಸಾಹೇಬ, ಕಿತ್ತೂರುಚೆನ್ನಮ್ಮ, ಟಿಪ್ಪುಸುಲ್ತಾನ ಮುಂತಾದ ಹೋರಾಟಗಾರರಿದ್ದರೂ ಸಹಿತ ಇವರು ಒಂದಲ್ಲ ಒಂದು ರೀತಿಯಿಂದ ಸ್ವಾರ್ಥದಿಂದ ಆಗಲಿ, ರಾಜಕೀಯ ಹಿನ್ನೆಲೆಯಿಂದ ಅವರು ಬ್ರಿಟೀಶರನ್ನು ಪ್ರತಿಭಟಿಸಿರುವುದು ನನ್ನ ಅಧ್ಯಾಯದಲ್ಲಿ ತಿಳಿದುಬರುತ್ತದೆ. ಆದರೆ ಯಾವುದೇ ರಾಜಕೀಯ ಆಶೆ ಇಲ್ಲದೇ, ಯಾವುದೇ ಸ್ವಾರ್ಥ ಇಲ್ಲದೆ ಈ ಇಬ್ಬರು ಮಹನೀಯರಗಳು ಬ್ರಿಟೀಶರನ್ನು ಪ್ರತಿಭಟಿಸಿರುವುದನ್ನು ಕಂಡುಬರುತ್ತದೆ. ಹೀಗಾಗಿ ಈ ಇವರಿಬ್ಬರು ಮಹನೀಯರನ್ನು ನಾನು ನನ್ನ ಅಧ್ಯಯನದ ಸಾಮಾಜಿಕ ನೆಲೆಯಲ್ಲಿ ಬರುವ ದಾರ್ಶನಿಕರ ಮತ್ತು ಪರೋಪಕಾರಿ ನೆಲೆಯ ಹಿನ್ನೆಲೆಯಲ್ಲಿ ಇವರ ಪ್ರತಿಭಟನೆಯನ್ನು ನಾನು ಇಲ್ಲಿ ವಿಶ್ಲೇಷಿಸಿದ್ದೇನೆ.

*** ಸಿಂಧೂರ ಲಕ್ಷ್ಮಣನ ದಂಗೆ**

ಲಕ್ಷ್ಮಣ ಹುಟ್ಟಿದ್ದು ಮಹಾರಾಷ್ಟ್ರ ನೆಲದಲ್ಲಿ. ಬ್ರಿಟಿಷರ ಪಿತೂರಿಯಿಂದಾಗಿ ಗುಂಡಿಗಾ ಹುತಿಯಾದ ಅವನ ಪಾರ್ಥೀವ ಶರೀರ ಮಲಗಿದ್ದು ಬೀಳಗಿಯ ಮಣ್ಣಿನಲ್ಲಿ. ಎಲ್ಲಿಯೋ ಹುಟ್ಟಿ ಎಲ್ಲಿಯೋ ಬೆಳೆದು ಉಕ್ಕುತ್ತಿದ್ದ ತರುಣ ವಯಸ್ಸಿನಲ್ಲಿ ಯಾವುದೋ ವಿಷ ಘಳಿಗೆಯಲ್ಲಿ ಹುಟ್ಟಿ ದೂರನ್ನೂ, ಹೆತ್ತ ತಾಯಿಯನ್ನೂ ಕೈಹಿಡಿದ ಹೆಂಡತಿಯನ್ನು ತೊರೆದು ದೂರದ ನಾಡಿಗೆ ಬಂದು ಪ್ರಾಣ ಕಳೆದುಕೊಂಡಿದ್ದೊಂದು ವಿಧಿಯ ವೈಚಿತ್ರ. ಬ್ರಿಟಿಶ್ ಸರ್ಕಾರಕ್ಕೆ ಸಡ್ಡು ಹೊಡೆದು ಬಡಜನತೆಯ ಶೋಷಣೆಯ ವಿರುದ್ಧ ಸಿಡಿದೆದ್ದು ಮಾಡಿದ ಹೋರಾಟ, ತೋರಿದ ಸಾಹಸ ವೀರಗಾಥೆಯಾಗಿ ಇಂದು ಜನಪದರ ನಾಲಗೆಯ ಮೇಲೆ ಲಾವಣಿಗಳ ರೂಪದಲ್ಲಿ

ನಿಂತುಕೊಂಡಿವೆ. ಚಿತ್ರದುರ್ಗದ ವೀರ ಮದಕರಿನಾಯಕ, ಸುರಪುರದ ವೆಂಕಟಪ್ಪ ನಾಯಕ ಇವರ ಸಾಲಿನಲ್ಲಿ ಸೇರಿಕೊಳ್ಳಬೇಕಾದ ಇನ್ನೊಂದು ಹೆಸರು "ಸಿಂಧೂರ ಲಕ್ಷ್ಮಣನಾಯಕ".

ಮಹಾರಾಷ್ಟ್ರದ ಜತ್ತ ಸಂಸ್ಥಾನದಲ್ಲಿ ಸಿಂಧೂರ ಒಂದು ಸಣ್ಣ ಹಳ್ಳಿ. ಅಲ್ಲಿ ನಾಯಕರು ಸಾಬಣ್ಣ ಮತ್ತು ನರಸವ್ವ ದಂಪತಿಗಳ ಒಂದು ಚಿಕ್ಕ ಕುಟುಂಬ. ಕುಟೀರದಂಥ ಒಂದು ಸಣ್ಣ ಮನೆ. ಮನೆಯ ವಾತಾವರಣದಂತೆ ಲಕ್ಷ್ಮಣ ದೊಡ್ಡ ಮನಸ್ಸಿನ ಹೃದಯವಂತ ಮನಸ್ಸಿನವನು. ಜತ್ತ ಸಂಸ್ಥಾನದ ಸೇವೆಯಲ್ಲಿದ್ದ ಗ್ರಾಮದ ಗೌಡರ ಬಳಿಯಲ್ಲಿ ಸಾಬಣ್ಣ ವಾಲೀಕಾರನಾಗಿದ್ದ. ಅವನ ಚಾಕರಿಗಾಗಿ ಸಂಸ್ಥಾನ ಸರ್ಕಾರ ಒಂದಿಷ್ಟು ಭೂಮಿಯನ್ನು ಉಂಬಳಿಯಾಗಿ ನೀಡಿತ್ತು. ಆ ಭೂಮಿಯಲ್ಲಿಯೇ ಇವರ ಸಂಸಾರ ಸಾಗುತ್ತಿತ್ತು. ಇಂಥವರ ಮಗನಾದ ಸಿಂಧೂರ ಲಕ್ಷ್ಮಣನ ತನ್ನ ಸಮುದಾಯ ಮತ್ತು ತನ್ನ ಜನರ ಸಲುವಾಗಿ ಅವನು ತನ್ನ ಪ್ರಾಣವನ್ನು ಮುಡುಪಾಗಿಟ್ಟು ಕೆಲಸ ಮಾಡುತ್ತಿದ್ದ.

ಉಳ್ಳವರಿಗೆ ಸಿಂಹಸ್ವಪ್ನವಾಗಿ ಇಲ್ಲದವರಿಗೆ ಆತ್ಮೀಯನಾಗಿ, ಅಶಿಕ್ಷಿತನಾದರೂ ಅಸಂಸ್ಕೃತ ವ್ಯಕ್ತಿಯಾಗಿರದ, ಕಾಡುವಾಸಿಯಾಗಿದ್ದರೂ ನಾಡಿನ ಜನರಿಗಿಂತ ಉನ್ನತಮಟ್ಟದ ನಡೆ, ನುಡಿಯ ಹೃದಯವಂತ ವ್ಯಕ್ತಿ ಸಿಂಧೂರ ಲಕ್ಷ್ಮಣ.

ಲಕ್ಷ್ಮಣ ಬಡತನದಲ್ಲಿ ಬೆಳೆದರೂ ಗುಣದಲ್ಲಿ ಸಿರಿವಂತನಾಗಿದ್ದ. ಅಶಿಕ್ಷಿತನಾಗಿದ್ದರೂ ಸುಶಿಕ್ಷಿತರಲ್ಲಿ ಇರಬೇಕಾದ ಅನೇಕ ಒಳ್ಳೆಯ ಗುಣಗಳು ಅವನಲ್ಲಿದ್ದವು ಎಂದು ತಿಳಿದುಬರುತ್ತದೆ. ಲಕ್ಷ್ಮಣ ದೇಶಭಕ್ತನಾಗಿದ್ದ. ಬ್ರಿಟೀಶರ ವಿರುದ್ಧ ಹೋರಾಡಿದನು. ಮಾನವನಲ್ಲಿ ಇರಬೇಕಾದ ಮುಖ್ಯಗುಣ. 'ಪರೋಪಕಾರ' ಮತ್ತು 'ದಾರ್ಶನಿಕ' ವ್ಯಕ್ತಿತ್ವ ಲಕ್ಷ್ಮಣನಲ್ಲಿ ಹಾಸುಹೊಕ್ಕಾಗಿತ್ತು. ಜೀವನದುದ್ದಕ್ಕೆ ಪರೋಪಕಾರ ಮಾಡುತ್ತ ಬಂದ ಲಕ್ಷ್ಮಣ ಎಂದೂ ಅನ್ಯಾಯವನ್ನು ಸಹಿಸಿದವನಲ್ಲ, ನಮ್ಮ ವೇದಗಳಲ್ಲಿ ಪರೋಪಕಾರದ ಬಗ್ಗೆ ಹೇಳಿದ 'ಪರೋಪಕಾರಾರ್ಥಾಯ ಇದಂ ಶರೀರಂ' ಎಂಬ ಮಾತಿನಲ್ಲಿ ಮಾನವನ ಜನ್ಮದ ಅತಿಮುಖ್ಯವಾದ ಗುಣಗಳಲ್ಲಿ 'ಪರೋಪಕಾರ'ವು ಒಂದು ಎಂಬುದನ್ನು ತೋರಿಸುತ್ತದೆ. ಇಂತಹ ಗುಣಲಕ್ಷ್ಮಣ ಅವನದಲ್ಲಿದ್ದ ಕಾರಣ ಅವನು ಒಬ್ಬ ಆದರ್ಶ ಮತ್ತು ದಾರ್ಶನಿಕ ವ್ಯಕ್ತಿಯಾಗಿ ಅವನು ಕಂಡುಬರುತ್ತಾನೆ. ಲಕ್ಷ್ಮಣನಿಗೆ ತನ್ನದೇ ಆದ ಬಂಧು-ಬಳಗವಿದ್ದಾಗ್ಯೂ ಅದಕ್ಕೆ ಜೋಲು ಬೀಳದೆ ಬಡವರಿಗೆ ದೀನದಲಿತರಿಗೆ, ದುರ್ಬಲರಿಗೆ ಸಹಾಯ ಮಾಡಿದ್ದನ್ನು ನೋಡಿದರೆ ಅವನು ಎಂತಹ ಪರೋಪಕಾರಿ ಎಂದು ತಿಳಿಯಬಹುದು. ಧುರುಳ ಸಿರಿವಂತರಿಂದ ಸುಲಿದ ಹಣವನ್ನು ಎಂದೂ ತನಗಾಗಿ ಇಟ್ಟುಕೊಳ್ಳದ ಲಕ್ಷ್ಮಣ ಅದನ್ನು ನೊಂದ ಜನರಿಗೆ ಹಂಚಿ ಬಿಡುತ್ತಿದ್ದ ಎಂಬುದನ್ನು ನೋಡಿದರೆ ಆ ದಿನಗಳಲ್ಲಿಯೇ ಸಮಾಜವಾದದ ಕನಸು ಕಂಡ ಮಾನವತಾವಾದಿ ಎಂದು ತಿಳಿದುಬರುತ್ತದೆ. ಲಕ್ಷ್ಮಣನು ನೊಂದ ಜನರಿಗೆ ದುರ್ಬಲರಿಗೆ ಸಹಾಯ ಮಾಡುತ್ತಿದ್ದ ಎನ್ನುವುದರ ಕುರಿತು ಸಾಕಷ್ಟು ಕಥೆಗಳಿವೆ.

ಉಮರಾಣಿಯ ಒಂದು ಹೊಲದಲ್ಲಿ ಬಹಳ ಕರಿಕೆ ಬೆಳೆದಿತ್ತು. ಲಕ್ಷ್ಮಣ ನಿತ್ಯ ಬಂದು ನಟ್ಟು ಕಡಿಯುತ್ತಿದ್ದನಂತೆ. ಒಂದು ತಿಂಗಳಲ್ಲಿ ಅಂದವಾಗಿ ನಟ್ಟು ಕಡಿದಿದ್ದನು. ಅದನ್ನು ನೋಡಿ ಜನ ದಂಗಾಗಿದ್ದರು. ಇದರಿಂದ ಅವನಿಗೆ ದೊಡ್ಡ ಉಡುಗೊರೆ ಹಾಗೂ ಹಣ ದೊರಕಿತು. ಲಕ್ಷ್ಮಣ ವಾಪಸ್ಸು ಊರಿಗೆ ಬರುವಾಗ ದಾರಿಯಲ್ಲಿ ಒಬ್ಬ ಬಡವ ತನ್ನ ಮಡದಿ ಮಕ್ಕಳು ಉಪವಾಸವಿದ್ದ ಬಗ್ಗೆ ಹೇಳಿ ಬೇಡಿಕೊಂಡಾಗ ತನ್ನ ಹಣವನ್ನೆಲ್ಲ ಅವನ ಉಡಿಯಲ್ಲಿಟ್ಟು ತನ್ನ ಊರಿಗೆ ಬರುತ್ತಾನೆ. ಮನೆಯಲ್ಲಿ ತಾಯಿ ಹಣವಿಲ್ಲ ಎಂದು ಹೇಳಿದಾಗ ಲಕ್ಷ್ಮಣ ಹಣ ಕಳೆದವು ಎಂದು ಹೇಳುತ್ತಾನೆ.

ಇದೇ ರೀತಿ ಒಮ್ಮೆ ಕೆರೆಯ ಕೆಲಸ ನಡೆದಿತ್ತು. ದಿನನಿತ್ಯ ಮುಂಜಾನೆ ಬೇಗ ಬಂದು ಮೈಮುರಿದು ಕೆರೆ ಒಡ್ಡ ಹಾಕಿ ನಡೆಯುತ್ತಿದ್ದ. ವಾರಕ್ಕೊಮ್ಮೆ ದೊಡ್ಡ ಮೊತ್ತದ ಹಣ ಪಡೆದು ಊರಿನ ದಾರಿ ಹಿಡಿಯುತ್ತಿದ್ದ ದಾರಿಯಲ್ಲಿ ಬರುವಾಗ ಭೆಟ್ಟಿಯಾಗುತ್ತಿದ್ದ. ಬಡವರಿಗೆ, ಅಸಹಾಯಕರಿಗೆ, ನೊಂದವರಿಗೆ ಹಣಕೊಟ್ಟು ಮನೆಗೆ ಬರುತ್ತಾನೆ. ವಾರದ ಗಳಿಕೆಯನ್ನು ಮನೆಯಲ್ಲಿ ಕೇಳಿದಾಗ ದಾರ್‍ಯಾಗ ಕಳೆದವು ಎಂದು ದೊಡ್ಡ ಸುಳ್ಳನ್ನು ಹೇಳುತ್ತಿದ್ದ. ಇಂತಹ ಘಟನೆಗಳನ್ನು ನೋಡಿದರೆ ಲಕ್ಷ್ಮಣ ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ ಮತ್ತು ಎಂತಹ ಹೃದಯವಂತ. ಇದ್ದುದರಲ್ಲಿಯೇ ಹಂಚಿ ತಿನ್ನೋಣ ಎಂಬ ಅತ್ಯಂತ ದೊಡ್ಡ ಗುಣವುಳ್ಳ ಬಡವನಾದ ಲಕ್ಷ್ಮಣನಲ್ಲಿ ನಾವು ಕಾಣಬಹುದು.

ಒಮ್ಮೆ ಸಿಂಧೂರಿನಲ್ಲಿ ಡೊಳ್ಳಿ ಮನೆತನದ ಒಬ್ಬ ಮುದುಕಿಯ ಮಕ್ಕಳು ಆಕೆಯನ್ನು ಮುಪ್ಪಿನಲ್ಲಿ ನೋಡದೇ ಕಡೆಗಣಿಸಿ ಆಕೆಯು ಹೊಟ್ಟೆಗೂ ಪರದಾಡುವ ಸ್ಥಿತಿ ತಂದೊಡ್ಡಿದ್ದರು. ಮುದುಕಿ ದೂರನ್ನು ಲಕ್ಷ್ಮಣನಲ್ಲಿಗೆ ಕೊಂಡೊಯ್ದಳು. ಲಕ್ಷ್ಮಣ ಆಕೆಯ ಮಕ್ಕಳನ್ನು ಕರೆಯಿಸಿ ಕೇಳಿದಾಗ ಅವರು 'ಕೇಳಲು ನೀನ್ಯಾರು' ಎಂದಾಗ ಅವರನ್ನು ಚೆನ್ನಾಗಿ ಥಳಿಸಿ ಬುದ್ಧಿ ಹೇಳಿದನು. ಅವರು ತಪ್ಪೊಪ್ಪಿಕೊಂಡು ತಾಯಿಯನ್ನು ಜೋಪಾನ ಮಾಡಿದರು. ಈ ಘಟನೆಯನ್ನು ನೋಡಿದಾಗ ಲಕ್ಷ್ಮಣ ದುರ್ಬಲರ, ನೊಂದವರ ತೊಂದರೆಗಳನ್ನು ತೊಲಗಿಸುವಲ್ಲಿ ಶ್ರಮಿಸುತ್ತಿದ್ದ ಹಾಗೂ 'ಉಪಕಾರ' ಮಾಡುತ್ತಿದ್ದ ಎಂಬುದನ್ನು ಕಾಣಬಹುದು.

ಒಮ್ಮೆ ಕೋಟ್ಯಾಳ ದಾರಿಯಲ್ಲಿ ಹೋಗುವಾಗ ಹೊಟ್ಟೆ ಹಸೆದಿತ್ತು. ದಾರಿಯಲ್ಲಿ ಒಬ್ಬ ಹೆಣ್ಣುಮಗಳು ಬುತ್ತಿ ತೆಗೆದುಕೊಂಡು ಬರುತ್ತಿದ್ದಳು. ಲಕ್ಷ್ಮಣ ಹಸಿವಿನಿಂದ ಕಂಗೆಟ್ಟ ಬುತ್ತಿ ಕೇಳಿದಾಗ ಅವಳು ನನ್ನ ಗಂಡ ಸಿಡುಕ ಎಂದು ಹೇಳುತ್ತಾಳೆ. ಆಗ ನಾನು ನಿನ್ನ ಅಣ್ಣ ನಿನಗೆ ತೊಂದರೆಯಾಗದಂತೆ ನೋಡಿಕೊಳ್ಳುತ್ತೇನೆ ಎನ್ನುತ್ತಾನೆ. ಆಗ ಆ ಹೆಣ್ಣು ಮಗಳು ಬುತ್ತಿ ಬಿಚ್ಚಿ ಊಟಕ್ಕೆ ಕೊಡುತ್ತಾಳೆ. ಅಷ್ಟರಲ್ಲಿ ಗಂಡ ಬಂದು ಅವಳನ್ನು ಬಡಿಯತೊಡಗುತ್ತಾನೆ. ಇದನ್ನು ಕಂಡ ಲಕ್ಷ್ಮಣ ತನ್ನ ಹೆಸರನ್ನು ಹೇಳಿ 'ತಪ್ಪಾಗಿದೆ' ಎಂದಾಗ ಯುವಕ ದಂಗಾಗುತ್ತಾನೆ. ಊಟದ ನಂತರ ಲಕ್ಷ್ಮಣ ರೊಟ್ಟಿ ತುಣಕೊಂದನ್ನು ಬಿಟ್ಟಿರುತ್ತಾನೆ. ಅದರ ಕೆಳಗೆ ಬಂಗಾರ ಇಟ್ಟು ಹೋಗಿರುತ್ತಾನೆ.

ಇದೇ ರೀತಿ ಲಕ್ಷ್ಮನನ್ನು ಪೊಲೀಸರು ಬೆನ್ನು ಹತ್ತಿದಾಗ ಅವನು ಹೊಲದಲ್ಲಿ ಅಡ್ಡಬಿದ್ದು ಓಡುತ್ತಿದ್ದ ದಾರಿಯಲ್ಲಿ ಒಬ್ಬ ಅತ್ತೆ ಮನೆ ಸೊಸೆ ಬರುತ್ತಿರುತ್ತಾಳೆ. ಆಗ ಲಕ್ಷ್ಮಣ ತನ್ನನ್ನು ಉಳಿಸಲು ಕೇಳಿಕೊಂಡಾಗ ಅವಳು ಹೊಲದಲ್ಲಿಯೇ ಮೆದೆ ಹೊಚ್ಚಿ ಉಳಿಸಿದಾಗ ಲಕ್ಷ್ಮಣ ಹೊನ್ನ, ಲಾಭಂಶಾ ಮುಂದಿಟ್ಟು, ಆ ಹೆಣ್ಣು ಮಗಳು "ಹೊನ್ನು ಏಕೆ?" ಹೊನ್ನು ತೆಗೆದುಕೊಂಡರೆ ಅತ್ತೆ ಏನಂದಾಳು ಅನ್ನುವಷ್ಟರಲ್ಲಿ ಅತ್ತೆ ಬಂದಳು. ಅತ್ತೆಗೆ ಲಕ್ಷ್ಮಣ ಎಂದು ಗೊತ್ತಾದಾಗ ಬಹಳ ಸಂತೋಷದಿಂದ ಬುತ್ತಿ ಬಿಚ್ಚಿ ಊಟ ಮಾಡಿಸಿದಳು. ಲಕ್ಷ್ಮಣ ಪ್ರತಿಯಾಗಿ ಹೊನ್ನು ಹಾಕಿ ದಾರಿ ಹಿಡಿಯುತ್ತಾನೆ. ಇದನ್ನು ನೋಡಿದಾಗ ಲಕ್ಷ್ಮಣನ ಬಗ್ಗೆ ಹೆಣ್ಣುಮಕ್ಕಳಿಗೆ ಇದ್ದ ಅಪಾರವಾದ ನಂಬಿಕೆಯನ್ನು ಕಾಣಬಹುದು. ಆ ದಿನಗಳಲ್ಲಿ ಹೆಣ್ಣುಮಕ್ಕಳು ಬೀಸುವಾಗ ಲಕ್ಷ್ಮಣನ ಹೆಸರಿನ ಮೇಲೆ 'ನನ್ನಣ್ಣ ಲಕ್ಷ್ಮಣ' ಎಂದು ಅವನ ಗುಣಗಾನ ಮಾಡುತ್ತಿದ್ದಾರೆಂದು ಹೇಳುವುದನ್ನು ನೋಡಿದರೆ ಲಕ್ಷ್ಮಣನಿಗೆ ನಿಜವಾಗಿಯೂ 'ಪರನಾರಿ ಸಹೋದರ' ಎಂಬ ಮಾತು ಅನ್ವಯಿಸುತ್ತದೆ ಮತ್ತು ಅವನ ಪರೋಪಕಾರ ಪ್ರವೃತ್ತಿಯ ಬಗ್ಗೆ ಗೊತ್ತಾಗುತ್ತದೆ.

ಮುತ್ತೂರಿನಲ್ಲಿ ಒಬ್ಬ ಮುದುಕ. ಉತ್ತಮ ಕವಣೆ ಹೆಣೆದಿದ್ದ, ಅವನ ಬಳಿ ಲಕ್ಷ್ಮಣ ಹಾಗೂ ಸಂಗಡಿಗರು ಬಂದು ವಸತಿ ಮಾಡಿ ಕೆಲವು ದಿನ ಕಳೆದಿದ್ದರೂ ಧನದಾಸೆ ಮಾಡದ ಮುದುಕ ಬಹಳ ಆಸಕ್ತಿಯಿಂದ ಕವಣೆ ಮಾಡಿಕೊಟ್ಟು ಕಳಿಸುತ್ತಾನೆ. ಮುದುಕನ ಋಣ ಬಹಳ ಆಯಿತೆಂದಗ ಲಕ್ಷ್ಮಣ ಮುದುಕನ ಮನೆಗೆ ಹಣ ತಂದು ಕೊಟ್ಟಗ್ಯಾಗ ಹೂಳಿದ್ದನಂತೆ ಮುಂದೆ ಕೆಲವು ದಿನಗಳ ನಂತರ ಮುದುಕನ ಮರಣದ ಸುದ್ದಿ ತಿಳಿದ ಲಕ್ಷ್ಮಣ ಮುದುಕನ ಮನೆಗೆ ಬಂದು ಹೊನ್ನು ಅಗೆದು ಮುದುಕಿಗೆ ಕೊಟ್ಟು ಬರುತ್ತಾನೆ. ಇದರಿಂದ ಉಪಕಾರ ಮಾಡಿದವರನ್ನು ಮರೆಯದೇ ಅವರಿಗೆ 'ಪ್ರತ್ಯುಪಕಾರ' ಮಾಡುತ್ತಿದ್ದ 'ಕೃತಜ್ಞ' ವ್ಯಕ್ತಿಯಾಗಿದ್ದ ಎಂದು ತಿಳಿದು ಬರುತ್ತದೆ.

ಒಮ್ಮೆ ಅಡವಿಯಲ್ಲಿ ಸುತ್ತಾಡುವಾಗ ಊಟಕ್ಕೆ ಏನು ಸಿಗದಾಗ ಲಕ್ಷ್ಮಣನ ಸಂಗಡಿಗರು ಕುರಿ ಹಿಂಡಿನಲ್ಲಿಯ ಹೋತವನ್ನು ತಿನ್ನಲು ತಂದಿದ್ದರು. ಲಕ್ಷ್ಮಣ ಅವರಿಗೆ ಬುದ್ಧಿ ಹೇಳಿ ಈ ರೀತಿ ಬದುಕುವ ದಾರಿ ಸರಿಯಲ್ಲ ಎಂದು ಹೇಳಿ ಬಂದ ಕುರುಬನಿಗೆ ಹೋತುಕೊಟ್ಟ ಕುರುಬನಿಗೆ ಸಂತೋಷವಾಗಿ ಅವಸರದಿಂದ ಕುರಿಹಿಂಡಿ ಅವರಿಗೆ ಹಾಲು ಕೊಟ್ಟಾಗ ಅವನಿಗೆ ಬೆರಳುಂಗುರ ಕೊಟ್ಟು ಹೋಗುತ್ತಾನೆ.

ಹರನಾಳದ ಒಂದು ಮನೆಯಲ್ಲಿ ದರೋಡೆ ನಡೆದಾಗ ಆ ಮನೆಯಲ್ಲಿ ಹೆಣ್ಣು ಮಕ್ಕಳು ಧರಿಸುವ ಬಂಗಾರದ ಆಭರಣಗಳನ್ನು ಬಿಟ್ಟು ಮನೆಯಲ್ಲಿನ ಹೆಚ್ಚಿನ ಬಂಗಾರ ಮಾತ್ರ ಕೊಡಲು ಹೇಳುತ್ತಾನೆ ಮತ್ತು ತಂದಂತಹ ಬಂಗಾರವನ್ನು ಬಡವರಿಗೆ ಹಂಚುತ್ತಾನೆ. ಇದರಿಂದ ಹೆಣ್ಣು ಮಕ್ಕಳ ಬಗ್ಗೆ ಇದ್ದ ಗೌರವ ಭಾವನೆ ಹಾಗೂ ಅವನ ಉಚ್ಚ ವಿಚಾರಧಾರೆ ಕಂಡುಬರುತ್ತದೆ.

ಒಂದು ಸಲ ಹೆಬ್ಬಾಳ ದಾರಿಯಲ್ಲಿ ಮಬ್ಬು ಕವಿದಿತ್ತು. ನಿಬ್ಬನಾದ ಗಾಡಿಗಳನ್ನು ಕಳ್ಳರು ತಡೆದು ಸುಲಿಗೆ ಮಾಡುತ್ತಾರೆ. ದಾರೀಲಿ ಲಕ್ಷ್ಮಣ ಕಳ್ಳರನ್ನು ಬಡಿದು ಎಲ್ಲ ಒಡವೆಗಳನ್ನು ನಿಬ್ಬಣದ ಜನರಿಗೆ ಹಂಚಿ ಕಳ್ಳರಿಗೆ ದುರುಳ ಸಿರಿವಂತರನ್ನು ಸುಲಿದು ನಮ್ಮಂತೆ ಬಡವರಿಗೆ ಹಂಚಬೇಕು ಎಂದು ಬುದ್ಧಿ ಹೇಳಿ ಕಳಿಸುತ್ತಾನೆ.

ಕೆಲವು ಸಿರಿವಂತರು, ಬಡವರಿಗೆ ಹಣ ಕೊಟ್ಟ ಬಗ್ಗೆ ಖೊಟ್ಟಿ ಕಾಗದ ಬರೆಯಿಸಿಕೊಂಡಾಗ ಲಕ್ಷ್ಮಣ ಊರಗೌಡ ಬಿರಾಡ ಒಪ್ಪಿಸಲು ರೈತರಿಗೆ ತಿಳಿಸಿದಾಗ ಲಕ್ಷ್ಮಣ ಅರೆಹೊಟ್ಟೆ, ಅರೆಬಟ್ಟೆ ಇರುವಾಗ ರೈತ ಬಿರಾಡ ಹ್ಯಾಂಗ ಕೊಟ್ಟಾನು ಎಂದು ಹೇಳುವುದನ್ನು ನೋಡಿದರೆ ಬಡವರ ಬಗ್ಗೆ ಇದ್ದ ಕಳಕಳಿ ಹಾಗೂ ಅವರಿಗೆ ಉಪಕಾರ ಮಾಡುವ ಗುಣ ತಿಳಿದುಬರುತ್ತದೆ. ನಮ್ಮ ಸಮಾಜದ ಮೂಲ ತತ್ವಗಳಾದ ಹಂಚಿ ತಿನ್ನುವುದು, ಹೆಣ್ಣು ಮಕ್ಕಳ ಬಗ್ಗೆ ಗೌರವ ಭಾವನೆ, ಅಸಹಾಯಕರಿಗೆ ಸಹಾಯ ಮಾಡುವುದು ಪರೋಪಕಾರ ಮುಂತಾದ ಒಳ್ಳೆಯ ಗುಣಗಳು ಲಕ್ಷ್ಮಣನಲ್ಲಿ ಕಂಡುಬರುತ್ತವೆ.

ಸ್ವ-ಸಾಮರ್ಥ್ಯದಿಂದ ತನ್ನ ಊರಿನ ಹೆಸರನ್ನು ಭಾರತದ ಭೂಪಟದ ಮೇಲೆ ಅನವರತವೂ ರಾರಾಜಿಸುವಂತೆ ಮಾಡಿದ, ಹೆಡಿಯ ದಾರಿಯನ್ನು ತೊರೆದು, ವೀರರ ಹಾದಿ ಹಿಡಿದು ಶೌರ್ಯದ ಕಿಡಿ ಹಾರಿಸಿದ ಈ ವೀರ ಇಂದಿಗೂ ಜನಮಾನಸದ ಸರೋವರದಲ್ಲಿಯ ಸೌರಭ ಸೂಸುವ ಸುಗಮವಾಗಿ ಅರಳಿ ನಿಂತಿದ್ದಾನೆ.

ಕಿತ್ತು ತಿನ್ನುವ ಅಸಹನೀಯ, ಸ್ವಾರ್ಥ ಆತನ ಸುತ್ತ ಎಂದೂ ಸುಳಿಯಲ್ಲೇ ಇಲ್ಲ. ಸರಿಯಾದುದನ್ನು ಸಮರ್ಥಿಸುವ ಸಾಮರ್ಥ್ಯ, ಪರೋಪಕಾರದಲ್ಲಿಯೇ ಪರಮಾನಂದ, ಇಂಥ ವ್ಯಕ್ತಿಗೆ ಕಾರ್ಯ ವ್ಯಕ್ತಿಯ ಮಿತಿ ಎಲ್ಲಿದೆ? ಹುಡುಕಾಟದ ವಯಸ್ಸಿನಲ್ಲಿಯೇ ನ್ಯಾಯ ನೀತಿಯ ಹುಡುಕಾಟ, ನಕಲಿ ಬಂದೂಕನ್ನು ಹಿಡಿದು ಆಡುವ ವಯಸ್ಸಿನಲ್ಲಿ ಅಸಲಿ ಬಂದೂಕನ್ನು ಹಿಡಿದು ಬ್ರಿಟೀಶರನ್ನು ಬೆದರಿಸಿ ಬೆಚ್ಚಿಸಿದ, ಆವತ್ತಿನ ಸಂದರ್ಭದಲ್ಲಿ ಬ್ರಿಟೀಶರು ಭಾರತೀಯರನ್ನು ನಡೆಸಿಕೊಳ್ಳುತ್ತಿದ್ದ ರೀತಿ ಮಾಡುತ್ತಿದ್ದ ಶೋಷಣೆಯನ್ನು ಗಮನಿಸಿ ಹೇಗಾದರೂ ಮಾಡಿ ತನ್ನ ಸುತ್ತಮುತ್ತಲಿರುವ ಜನರನ್ನು ಮತ್ತು ಅದರ ಜೊತೆಗೆ ಭಾರತ ದೇಶವನ್ನು ಬ್ರಿಟೀಶರಿಂದ ಕಾಪಾಡಬೇಕು ಎಂದು ಪಣತೊಟ್ಟು ನಿಂತುಕೊಂಡು ಹದಿನೆಂಟರ ಹರೆಯದ ಬಂಟ ಪಾರತಂತ್ರದ ಪರತುತ್ತದ ಪರದೆಯನ್ನು ಹರಿದು ಹಾಕುವುದಕ್ಕಾಗಿ ಪಣತೊಟ್ಟು ಊರು, ಮನೆಯನ್ನು ಬಿಟ್ಟು ಬ್ರಿಟೀಶರ ಬೇಟೆಯಾಡಲು ಪ್ರಾರಂಭಿಸಿದ. ಹೋಗುವಾಗ ತನ್ನ ಪತ್ನಿ ಚಂದ್ರಪ್ಪಳಿಗೂ ಸುಳಿವು ನೀಡಲಿಲ್ಲ. ಊರುಬಿಟ್ಟ ಊರುಬಿಟ್ಟು ಹೋದವ ತಿರುಗಿ ಊರಿಗೆ ಬರಲೇ ಇಲ್ಲ. ಬೀಳಗಿ ತಾಲೂಕನ್ನು ತನ್ನ ಕಾರ್ಯಕ್ಷೇತ್ರವಾಗಿ ಆಯ್ದುಕೊಂಡಿದ್ದ ಇಲ್ಲಿಯೇ ಅವನು ಬ್ರಿಟೀಶರಿಗೆ ದಿಕ್ಕು ತಪ್ಪಿಸಿದ ಅವರಿಗೊಂದು ಸವಾಲಾದ, ಇವನ ತಂತ್ರಕ್ಕೆ ಅವರ ಕುತಂತ್ರ ತತ್ತರಿಸಿತು. ನಿಷ್ಕ್ರಿಯವಾಯಿತು. ಬ್ರಿಟೀಷರ ಮುಖದಲ್ಲಿ ಬೆವರೊಡೆಯಿತು. ಹೇಗಾದರೂ ಮಾಡಿ ಅವನನ್ನು

ಸೆರೆ ಹಿಡಿಯಬೇಕೆಂಬ ಅವರ ಸರ್ವ ಪ್ರಯತ್ನಗಳು ವಿಫಲವಾದವು. ಜೀವಿತ ಸಮಯದಲ್ಲಿ ಇವನ ಮುಖ ನೋಡುವುದು. ಬ್ರಿಟೀಶರಿಗೆ ಆಗಲೇ ಇಲ್ಲ ಅವರಿಗೆ ಸಿಂಹಸ್ವಪ್ನಾಗಿದ್ದ.

ಶೋಷಿತರ ಏಳ್ಗೆಗಾಗಿ ತನ್ನ ಸಂಸಾರ ಸುಖ, ತ್ಯಾಗ ಮಾಡಿದ ಬ್ರಿಟೀಶರ ವಿರುದ್ಧ ಹೋರಾಡಿದ ಧೈರ್ಯಶಾಲಿ. ಸಾಹಸಿ ಪುರುಷನೇ ವೀರ ಸಿಂಧೂರಲಕ್ಷ್ಮಣ, ಬಡತನದಲ್ಲಿ ಬೆವರು ಸುರಿಸಿ ಸಾಮಾಜಿಕ ಶೋಷಣೆಗೆ ಒಳಪಡುವವರ ರಕ್ಷಕ, ಆರ್ಥಿಕವಾಗಿ ಹಿಂದುಳಿದವರಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡುವಲ್ಲಿ ಪ್ರಯತ್ನಿಸಿದ ಲಕ್ಷ್ಮಣನ ಬದುಕಿನ ಕಥೆ ರೋಮಾಂಚನಕಾರಿಯಾದುದು, ಬ್ರಿಟೀಶರ ವಿರುದ್ಧ ಬಂಡಾಯಗಾರನಾಗಿ ತಂಡವೊಂದನ್ನು ಕಟ್ಟಿಕೊಂಡು ಗುಡ್ಡ ಬೆಟ್ಟಗಳಲ್ಲೆಲ್ಲ ಅಲೆದು ಸಾಮಾಜಿಕ ಅಸಮಾನತೆ ವಿರುದ್ಧ ಹೋರಾಡಿದ ಲಕ್ಷ್ಮಣನ ಸಾಹಸ ಕಥೆ ಇಂದಿಗೂ ಚಿರಸ್ಥಾಯಿಯಾಗಿ ಉಳಿದಿದೆ. ಈ ವೀರಪುರುಷನ ಪರೋಪಕಾರಿ ಮತ್ತು ದಾರ್ಶನಿಕ ಇಂದಿಗೂ ಚಿರಸ್ಥಾಯಿಯಾಗಿ ಉಳಿದಿದೆ.

ಲಕ್ಷ್ಮಣ ತಮ್ಮೂರಿನ ಶೆಟ್ಟರ ಮಗಳ ಮದುವೆಗೆ ತುಂಗಳಕ್ಕೆ ಬಂದಾಗ ಮದುವೆ ಊಟದ ಸಮಯದಲ್ಲಿ ಪರಪಂತಿ ಮಾಡಿ ದೂರ ಕೂಡಿಸಿ ಊಟ ಹಾಕಿದಾಗ ಲಕ್ಷ್ಮಣನ ಹದಿಹರೆಯದ ಮನಸ್ಸಿಗೆ ಎಷ್ಟು ನೋವಾಗಬೇಡ. ಆಗಲೇ ಆತ "ನಮ್ಮದ ಮನುಷ್ಯ ಜಾತಿ, ನಾಯಗಿಂತ ಕೀಳಲ್ಲವೆಂದು" ತನ್ನ ಸಾಮಾಜಿಕ ಸಮಾನತೆಯನ್ನು ಜನರಿಗೆ ಮನವರಿಕೆ ಮಾಡಿ ಹೊರಟು ಹೋದ ಇದರಿಂದ ತಿಳಿಯುತ್ತದೆ. ಅವನು ಸಮಾನತೆಗೆ ಎಷ್ಟೊಂದು ಪ್ರಾಮುಖ್ಯತೆಯನ್ನು ಕೊಡುತ್ತಿದ್ದ ಎನ್ನುವುದು. ಈ ಕ್ಷಣದಿಂದಲೇ ಜಾತಿ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿದ. ತಾರತಮ್ಯತೆಯ ವಿರುದ್ಧ ಸೆಡ್ಡು ಹೊಡೆಯಲಾರಂಭಿಸಿದ. ಹೀಗೆ ನಿಧಾನವಾಗಿ ಲಕ್ಷ್ಮಣ ಬ್ರಿಟೀಶರ ಗಮನವನ್ನು ಸೆಳೆದ. ಕೌಲೆಟ್ ಕಾಯಿದೆ ಜಾರಿಗೆ ಬಂದ ಕಾಲ ಭಾರತದ ಯುವಕರನ್ನು ಬಲಾತ್ಕಾರವಾಗಿ ಸೇನೆಗೆ ಸೇರಿಸಿಕೊಳ್ಳುವ ಸಮಯ. ಈ ಕಾಯಿದೆಯನ್ವಯ ಭಾರತೀಯರನ್ನು ಸಕಾರಣವೂ ಇಲ್ಲದೇ ರಾಜದ್ರೋಹಿ ಎಂದು ಶಿಕ್ಷಿಸುವ ಕಾಲ. ಬರಗಾಲದಲ್ಲೂ ಕಂದಾಯವನ್ನು ಕೊಡಲೇಬೇಕು. ಅಂತಹ ಕಂದಾಯ ವಸೂಲಿ ಮಾಡುವ ವಾಲೀಕಾರ ಸಿಂಧೂರ ಲಕ್ಷ್ಮಣ. ಕಂದಾಯ ವಸೂಲಿ ಮಾಡುವ ಬದಲು ಸರಕಾರಕ್ಕೆ ಕಂದಾಯವನ್ನು ಯಾರು ಕೊಡಬಾರದೆಂದು ಬ್ರಿಟೀಶರ ವಿರುದ್ಧ ಮೊದಲ ಕಹಳೆಯನ್ನು ಊದಿದ ಮನೋಬಲದ ಛಲಗಾರ, ಅಂದಿನಿಂದ ವಾಲಿಕಾರಿಗೆ ಶರಣೆಂದು ಶ್ರಮದ ಬದುಕನ್ನು ಆರಿಸಿಕೊಂಡಾತ. ಬ್ರಿಟೀಶರಿಗೆ ಕಾಸಿಗೆ ಉಂಬಳಿಗೆ ಬೆಲೆ ಕೊಡದೇ ಸಾರ್ವಜನಿಕ ವ್ಯಕ್ತಿಯಾಗಿ ಸಮಾಜದ ಮಗನಾಗಿ ಜನಮನ ಸೂರೆಗೊಂಡ.

"ಸಿಂಧೂರ ಲಕ್ಷ್ಮಣ ಹುಟ್ಯಾನ ಬಂಟ ಅನಿಸ್ಯಾನ
ಕೊಟ್ಟ ವಚನವ ಮೆಟ್ಟಿದ ಮ್ಯಾಲ ಎಂದೂ ತಪ್ಪಲು
ಛಟಾ ದೋಗೋತನಕ ಹಿಡ್ದ ಹಟಾ ಬಿಡಲಿಲ್ಲ"

ಯಾರಿಗಾದರೂ ಸಹಾಯ ಮಾಡುತ್ತೇನೆ ಎಂದು ಮಾತು ಕೊಟ್ಟಿದ್ದರೆ ಅದನ್ನು ಬಿಡದೆ ಮಾಡುತ್ತಿದ್ದ. ಸಿಂಧೂರಿಗೆ ಬಂದ ಫೌಜುದಾರ ಲಕ್ಷ್ಮಣನನ್ನು ಹಿಡಿದು ಬೇಡಿ ಹಾಕಲು ಹೋದಾಗ,

"ಲಕ್ಷ್ಮಣ ಹೇಳತಾನ
ಬಾಳ ಹುಷಾರಲಿಂದ ಬಾ ಎದ್ದು
ಏನು ಆಗೋದು ಆಗಲಿ ಎಂದ
ಇಷ್ಟ ಹೇಳಿ ಕಟ್ಟಿ ಜಿಗಿದಾನು
ಹಂಗೆ ನಡೆದಾನು ಊರಬಿಟ್ಟು ಊರು"

ಕಂದಾಯ ವಸೂಲಿ ಮಾಡಿಕೊಟ್ಟರೆ ಮುಗಿದೇ ಹೋಗುವುದು. ಆದರೆ ಬ್ರಿಟೀಶರ ಅನ್ಯಾಯವಾಗಿ ಭಾರತೀಯ ಬಡಜನರ ಹಣವನ್ನು ದೋಚುತ್ತಿರುವುದನ್ನು ಕಂಡು ಲಕ್ಷ್ಮಣನಿಗೆ ಕೋಪ ಬಂದು ಬ್ರಿಟೀಶರನ್ನು ಪ್ರತಿಭಟಿಸಲು ಅದರಲ್ಲೂ ತುಂಬಾ ಉಗ್ರವಾಗಿ ಅವರ ಜೊತೆ ಹೋರಟ ಮಾಡುತ್ತಾನೆ.

"ಅವ್ರು ಮ್ಯಾಲಿಂದ ಕುದುರಿ ಹೊಡದಾರ
ಎದ್ದು ನಿಂತು ಗಾಬ ಆಗ್ಯಾರ, ಬೆಗರಿ ಬೆದರಿದಾಗ
ಸರದು ನಿಂತು ತಗೊಂಡ್ರು ಕೈಗೆ ಮನಸ್ಕಗೊಂದಕಲ್ಲ
ಕುದರೀಗಿ ವಗದಾರ ಕಲ್ಲ, ವಗದು ಮುರದಾಕಕಾಲ
ಜೀವಕ ಹೆದರಲಿಲ್ಲ ಹ್ಯಾದ್ರು ಸಾಗಲ್ದಾಂಗ"

ಹೀಗೆ ತನ್ನ ಜೀವದ ಹಂಗು ಇಲ್ಲದೆ ಎದುರು ನಿಲ್ಲುವ, ಪ್ರತಿಭಟಿಸುವ ಬಂದ ಪ್ರಸಂಗವನ್ನು ನಾವೆಲ್ಲರೂ ಮೆಚ್ಚಲೇಬೇಕು.

"ಇನ್‌ಸ್ಪೆಕ್ಟರ್ ರಾವಗಂತಾರ ನಾಳೆ ಬರತೀನಿ
ಹುಷಾರ ಇರು ನೀ ಗುಡ್ಡ ಒಳಗ
ನಿನಗ ಹಿಡಿಲಿಲ್ಲಂದ್ರ ಹೆಂಗಸಂತ ಕರಿಲಕ್ಷ್ಯಾ
ನನಗ" ಎಂದಾಗ ಲಕ್ಷ್ಮಣ "ಮಾತ್ರ ಇಲ್ಲೇ
ಅಲ್ಲ, ನಾಳೆ ನಾ ಊರಾಗ ಬರ್ತೀ ನಿನಿನ್ನತ್ರ
ಆ ತಾಕತ್ತಿದ್ರ ಹಿಡ್ದು ತೋರು
ನಾಳೆ ಬರತೀನಿ, ಹುಷಾರ ಇರು ಚಾವಡಿ ಒಳಗ

ಈ ಮಾತು ಸುಳ್ಳಲ್ಲ, ಗಂಟುದಾಗೂ ಪದರಾಗ" ಎನ್ನುವ ಪ್ರತಿಯಾಗಿ ನೀಡುವ ಉತ್ತರದೊಳಗ "ನಾನು ಹೇಡಿಯಲ್ಲ ಹೇಳಿದ ವ್ಯಾಳೇದಾಗ ನಾ ಬಂದ ಬರ್ತೀನಿ ನೀ ಹುಷಾರಿರು ಎನ್ನುವಲ್ಲಿ ಚಾಲೇಂಚಾಗಿ ಮಾತನಾಡುವ ದಿಟ್ಟತನಕ್ಕೆ ಲಾವಣಿ ಸಾಕ್ಷಿಯಾಗಿದೆ".[೧]

"ಸಾಬ್ಯಾ ಗೋಪ್ಯಾ ಸರಸ್ಯಾ
ಲಕ್ಷ್ಮಣ ಸೈತ ಚಾವಡಿಗೆ ಬಂದಾರ
ಜಗ್ಗಿನಿಸ್ಪೆಟರಿಗೆ ಬೀಸಾದರ
ಒಬ್ಬ ನೆಪ್ಪಮೀಸೆ ಬೋಳಿಸಿದರ

ಕುದರಿಯ ಬಾಲ ಕೋಯ್ದಾರ
ಗುದ್ದಿ ವಾಲಿಕಾರ್‍ನ ಹಲ್ಲ ಮುರದಾರ
ಕತ್ತಿ ಬಂದೂಕ ಎಲ್ಲ ತಗೊಂಡಾರ"

ಎನ್ನುವ ಸನ್ನಿವೇಶ ಹಾಡುಹಗಲೇ ಸರಕಾರದ ವಿರುದ್ಧ ಜನರ ಸಮ್ಮುಖದೊಳಗೆ ಈ ರೀತಿ ಹೋರಾಟ ನಡೆಸುವುದು ಸುಲಭವಲ್ಲ. "ಅವರನ್ನೇ ಶಿಕ್ಷಿಸಿ ಅವರ ಬಂದೂಕುಗಳನ್ನು ಕಸಿದೊಯ್ಯುವುದು ಶೂರತನವನ್ನು ಮೀರಿದ್ದಾಗಿದೆ".[೪೧] ಹೀಗೆ ಅಲ್ಲಿಂದ ಅಕ್ಕಲಕೋಟದಿಂದ ಅಲೆದಾಡುತ್ತ ಜಮಖಂಡಿಯ ಕುಲ್ಲಳ್ಳಿಗುಡ್ಡಕ್ಕೆ ಬಂದ ಸಂಗತಿ ತಿಳಿದ ಫೌಜುದಾರ -

"ಲಕ್ಷ್ಮಣ ಸಿಕ್ಕಾರ ಕುಡುವ್ರುಲೇನಿ ನೆತ್ರ
ನಿಂತ ಕರಾಕರಾ ಹಲ್ಲ ತಿಂದಾನ
ಇಷ್ಟ ಅನುದರಾಗ ಲಕ್ಷ್ಮಣ ಬಂದ ನಿಂತಾನ"

ಈ ಸನ್ನಿವೇಶವನ್ನು ಏನು ಹೇಗೆಂದು ವರ್ಣಿಸಬೇಕು. ಆಗ ಲಕ್ಷ್ಮಣನಿಗೂ ಫೌಜುದಾರನಿಗೂ ತೆಕ್ಕಿ ಮುಕ್ಕಿ ಬಿದ್ದಾಗ ಫೌಜುದಾರನ

"ತಲಿ ತಗೊಂಡು ಹ್ಯಾಗ ಕಲ್ಲೋಳ್ಯಾಗ
ಇಟಗೊಂಡು ಕುಂತ್ರು ಚಾವಡ್ಯಾಗ
ಯಾರ್‍ಯಾರ ಬಂದಿಲ್ಲ ಸನಿದಾಗ
ಧಂಗ್ ಹೊಡ್ದು ಹೊಂಟ್ರು ಊರಾಗ
ಜತ್ತೀಗಿ ಹೋಗ್ಯಾರ ಬೆಳಗಾಗುದರೊಳ
ತೆಲಿಕಟ್ಟಿ ನಡದಾರ ಅಗಸ್ಯಾಗ"

ಲಕ್ಷ್ಮಣ ಆಂಗ್ರೇಜಿಯವರ ಮೇಲಿನ ಸೇಡನ್ನು ಮುಯ್ಯಿಗೆ ಮುಯ್ಯಿ ತೀರಿಸಿಕೊಂಡು ಚಾವಡಿಗೆ ತಲೆ ಕಟ್ಟುವದೆಂದು ಸಾಹಸದ ಕೆಲಸ,

"ತ್ವಾಳಮಟ್ಟಿ ಮುಮ್ಮರಮಟ್ಟಿ ಬಂದು ಬಿದ್ದರ ಗುಡ್ಡದಾಗ
ಸುದ್ದಿ ಕೇಳಿ ಇನ್‌ಸ್ಪೆಕ್ಟರ್ ಅಲ್ಲಿಗೆ ಬಂದ ಮೊಟರ
ತಂದ ಗುಡ್ಡವಳೆದೊಡದ ಬಿಗಲ್ ಮ್ಯಾಗ ಮ್ಯಾಗ
ನಾಬಾಗಿ ಲಕ್ಷ್ಮಣ ನಿಂತಾನ ಗುಡ್ಡದ ಮ್ಯಾಗ
ಬಮಖಂಡಿ ಸರಕಾರಕ ಬಂದೂಕ
ಲಕ್ಷ್ಯಾನ ಹಂತ್ಯಾಕ ಅನುಮಾನ ಇವ್ಯಾಕ
ತಗೊಂಡು ಕಯ್ಯಾಗ ಹತ್ತಿಲಿತ ಲಡಾಯಿ
ಗಾರ್‍ಮನ್ ಸಾಯ್ಬಾಗ ಲಕ್ಷ್ಮಣಗ
ಸಾಯ್ಬ ಕುಂತೀದ ಮೋಟರ ಮ್ಯಾಲ
ಲಕ್ಷ್ಮಣ ಒಗದ ರೈಫಾಲ

ಟೊಪಗೀಗೆ ಗುಂಡ ಬಡದೀತಲ್ಲ
ಟೊಪಗಿ ಶಿಡಿದು ಬಿತ್ತ ಭೂಮಿ ಮ್ಯಾಲ
ಸಾಹೆಬ ತಿಂತಾನ ಕರಿಕರಿ ಹಲ್ಲ
ತೆಗ್ಗಿ ನಾಯ್ಕಗ ಹಾಕ್ಯಾನ ಜಾಲ

ಹೀಗೆ ಲಕ್ಷ್ಮಣ ಕೇವಲ ಧೀರ ಶೂರನಷ್ಟೇ ಅಲ್ಲ, ಗುರಿಯಲ್ಲೂ ನಿಸ್ಸೀಮ ಎನ್ನುವುದಕ್ಕೆ ಈ ಘಟನೆಯೇ ಸಾಕ್ಷಿ. ಹೀಗೆ "ಲಕ್ಷ್ಮಣ ಸಿಂಧೂರಿನ ಹುಗಿದ ನೊಗದ ರಂಧ್ರದೋಳುಗಿಂದ ಹಾಯ್ದು ಹೋಗುವ ಹಾಗೆ ಕವಣೆಕಲ್ಲು. ಬೀಸಿ, ಗುರಿಯಲ್ಲೂ ಜನರಿಂದ ಸೈ ಎನಿಸಿಕೊಂಡ"[೩] ಪರಾಕ್ರಮಶಾಲಿ.

"ವಾಲಿಕಾರ ಗುಂಡ ವನದಾನು
ಫಕಡ್ಯಾಗ ಗುಂಡ ಬಡದಿತ್ತಲ್ಲ
ನಾಯ್ಕ ಒಡಿಹ್ವಾದ ಲಕ್ಷ್ಮಣ ಬಿದ್ದಾನ
ಮೋಸ ಮಾಡಿ ಅಭಿಮನ್ಯಾಗ ಹೊಡದಾಂಗ್ಯೆತಿ ಕೌರವರ"

ಎನ್ನುವ ಲಾವಣಿಯಲ್ಲಿ "ಸಿಂಧೂರ ಲಕ್ಷ್ಮಣನ ಪರ್ರಾಕಮವನ್ನು ವೀರ ಅಭಿಮನ್ಯುವಿಗೆ ಹೋಲಿಸಲಾಗಿದೆ."[೪೪] ಲಾವಣಿಯಲ್ಲಿ ಇಂಗ್ರೇಜ್ ಸರ್ಕಾರಕ್ಕೆ ಸವಾಲನ್ನು ಹಾಕಿದ ಸಿಂಧೂರ ಲಕ್ಷ್ಮಣನದು.

"ಇಂಥವರ ಕಾಲಾಗ ನೆವೆಂತು ಬದುಕೇನ
ಇಂಥ ಜನಕಾಗಿ ನಾನಿರುವೆ | ಅವರನ್ನ
ಕೂತಲ್ಲಿ ನಿಂತಲ್ಲಿ ನಾ ಸುಡುವೆನೆನ್ನುವಲ್ಲಿ"

ಬಡಜನರ ಕಷ್ಟ-ನಷ್ಟ ಅವರ ಬದುಕಿನ ಪರಿಯನ್ನು ಕಂಡು ಬಂಡೆದ್ದ ಲಕ್ಷ್ಮಣನ ಮನಸ್ಸು ಈ ರೀತಿ ತುಡಿದಿದೆನ್ನಬಹುದು. ಹೀಗೆ ಲಕ್ಷ್ಮಣ ಎಲ್ಲ ಸ್ಥಳಗಳಲ್ಲೂ ನಡೆದ ಶೋಷಣೆ ವಿರುದ್ಧ ಕಿಡಿಕಾರಿದ ನಿಜ ಪುರುಷ ಹೃದಯ,

"ಊರೂರು ಅಲೆದಾಡಿ ಕೊರ್‍ಯಾಗ ಸುಳಿದಾಡಿ
ಊರ ದುಷ್ಟರಿಗೆ ಹುಲಿಯಾಗಿ | ಮೆರೆದಾನ
ನಾರೇರ ಕಾಲೀಗೆ ಶಿರ ಬಾಗಿ

"ಈ ನುಡಿಯಲ್ಲಿ ಆತನಲ್ಲಿ ಹುಲಿಯ ಹಾಗೆ ಹೋರಾಟ ಮಾಡುವ ಧೀಮಂತಿಕೆಯ ಶಕ್ತಿ ಬೆಳೆದು ಬಂದಿತ್ತೆಂಬುದು ಸತ್ಯ. ಆದರೆ ಅಷ್ಟೇ ಸಹೃದಯಿಯೂ ದಯಾಮಯಿಯೂ ಆಗಿದ್ದಾನೆಂಬುದನ್ನು ಕಂಡುಕೊಳ್ಳಬಹುದು".[೪೫]

ಈತನ ಈ ಶೂರತನ ಮತ್ತು ಅವನ ಹೃದಯಶೀಲತೆಯನ್ನು ನೋಡಿ ಸ್ವತಃ ಗಾರ್ಮನ್ ಸಾಹೇಬನು ವರ್ಣಿಸಿದ ಮನಸಾರೆ ಹೊಗಳಿದ ಪರಿ ಇಲ್ಲಿ ವ್ಯಕ್ತವಾಗಿದೆ.

"ಶೂರ ಲಕ್ಷ್ಮಣನಿಗಿಂದು ವೀರಮರಣವು ಬರಲಿ
ಧೀರನಾಯಕನು ಬದುಕಲಿ | ನಾಡೋಳು
ಈರ್ವರ ಕೀರ್ತಿ ಹಬ್ಬಿರಲಿ"

ಸಮಾಜಮುಖಿ ವ್ಯಕ್ತಿಯಾಗಿ ಸಾರ್ವಜನಿಕರ ಮಗನಾಗಿ ಇಷ್ಟೊಂದು ಕಷ್ಟಪಟ್ಟು ಅನುಭವಸಿದ ಲಕ್ಷ್ಮಣನ ಪರಾಕ್ರಮತೆಯ ಎತ್ತರವನ್ನು ಇಲ್ಲಿ ಸೂಚಿಸಲಾಗಿದೆ.

"ಮುಂಡರಗಿ ಭೀಮಣ್ಣ ಸಂಗೊಳ್ಳಿ ರಾಯಣ್ಣ
ಕಟ್ಟಿ ಚೆನ್ನಪ್ಪ ಇವರಾಗ | ಲಕ್ಷ್ಮಣ
ದಿಟ್ಟದಿ ಕಾದಿ ಮೆರೆದಿದ್ದ"

ಈಗಾಗಲೇ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮ ಜೀವವನ್ನೇ ತೆಯ್ದು ಮುಂಡರಗಿಭೀಮಣ್ಣ, ಸಂಗೊಳ್ಳಿರಾಯಣ್ಣರಂತೆ ಸಮಾನತೆಗಾಗಿ ಹೋರಾಡಿದ ಸಿಂಧೂರ ಲಕ್ಷ್ಮಣನೂ ಇವರ ಸರಿಸಾಟಿ ಎನ್ನುವ ಮಾತು ಇಲ್ಲಿದೆ.

"ಕಾಜಿನ ಕಂಬ ನೆಲಗಚ್ಚಿದ ಲಾವ್ಯಾಗ
ಅಣ್ಣ ಬಸವಣ್ಣ ಬೆಳಕಾನ ಮಾಡ್ಕೊಂಡು
ಬಾರಿನ ಬಂದೂಕ ಬಗಲೀಗೆ ಹಾಕ್ಕೊಂಡು
ಬೆಳಗಾಂವಿ ಚೈಲ ಜಗಿದಾನ"

-ಎನ್ನುವಲ್ಲಿ ಬಸವಣ್ಣನಂತೆ ಲಕ್ಷ್ಮಣನೂ ಸಮಾನತೆಗಾಗಿ, ಶೋಷಣೆರಹಿತ ಸಮಾಜಕ್ಕಾಗಿ ಶ್ರಮಿಸಿದ ಶ್ರಮವಂತನೆಂಬ ಆತನ ಶಕ್ತಿಯ ಸ್ವರೂಪಿನಲ್ಲಿ ಚಿತ್ರಿಸಲಾಗಿದೆ".[೪೬] ಸಿಂಧೂರ ಲಕ್ಷ್ಮಣನ ಕಾಲ ಕರ್ನಾಟಕದ ನೆಲ ವಸಾಹತುಗಳ ಹಿಡಿತಕ್ಕೆ ತುಳಿತಕ್ಕೆ ತುತ್ತಾದ ಕಾಲ, ಸಾಮಾಜಿಕ ಅಸಮಾನತೆ ಜಿಡ್ಡುಗಟ್ಟಾತ್ತ ಒಳಗೊಳಗೆ ಸ್ವಾಮ್ಯದ ಕಹಳೆಯು ಹೊಗೆಯಾಡುತ್ತಿತ್ತು. ಆರ್ಥಿಕ ಹಾಗೂ ಶೈಕ್ಷಣಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಇಬ್ಬಗೆಯ ನೀತಿ ತುಂಬಿ ತುಳುಕುತ್ತಿತ್ತು. ಉಳ್ಳವರಿಗಷ್ಟೇ ಪ್ರಮುಖ ಸ್ಥಾನ, ಇನ್ನುಳಿದವರಿಗೆ ಇಲ್ಲ. ಮಾನವೆನ್ನುವ ಕಾಲವದು. ಇವನ್ನೆಲ್ಲವನ್ನು ಕಣ್ಣಾರೆ ಕಂಡ ಸಿಂಧೂರಿನ ಲಕ್ಷ್ಮಣ ಬ್ರಿಟೀಶರ ವಸಾಹತುಶಾಹಿ ವಿರುದ್ಧ ಶ್ರೀಮಂತರ ಸೊಕ್ಕಡಗಿಸುವ ದಿಸೆಯಲ್ಲಿ ಬಂಡೆದ್ದ ಈತನ ಹರಸಾಹಸವನ್ನು ಎಷ್ಟು ಬಣ್ಣಿಸಿದರೂ ಸಾಲದು. ಅಂತೆಯೇ ಈತನನ್ನು ಎಂಟೆದೆಯಭಂಟ ಎಂದು ಕರೆಯಲಾಗಿದೆ. ಕಂದಾಯದ ನೆಪದಲ್ಲಿ ಸರಕಾರಕ್ಕೆ ಬಡಜನರ ಆಸ್ತಿಪಾಸ್ತಿ ಸೇರಿಸುವ ವ್ಯವಸ್ಥೆ ವಿರುದ್ಧ ಸಿಡಿದೆದ್ದ ಸಿಡಿಲ ಮರಿ, ಬಡವರ ಜಮೀನುಗಳನ್ನು ಕಸಿದುಕೊಳ್ಳುವವರ ವಿರುದ್ಧ ಹೋರಾಡಿದ ಬಲಶಾಲಿ, ತನ್ನ ತೋಳ್ಬಲವನ್ನು ನಂಬಿಕೊಂಡು ಬ್ರಿಟೀಶರೊಂದಿಗೆ ಸೆಣಸಾಡಿದ ಆತನ ಧೈರ್ಯ ಸ್ಥೈರ್ಯದ ಸನ್ನಿವೇಶಗಳು ಬಹುರೋಮಾಂಚನಕಾರಿಯಾದುವುಗಳೆಂದು ಹೇಳಬಹುದು. ಬಡವರ ಬೆಳಕಾಗಿ ಆಸರೆಯಾಗಿ ಮೆರೆದ ಮನೋಸ್ಥೈರ್ಯದ ಧೀಮಂತ ಸಿಂಧೂರ ಲಕ್ಷ್ಮಣ ಅಂತೆಯೇ ಇಂದಿಗೂ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾನೆ.

ಇಲ್ಲಿಯವರೆಗೆ ಧೀರ ಸಿಂಧೂರ ಲಕ್ಷ್ಮಣನು ಒಬ್ಬ ಪರೋಪಕಾರಿಯಾಗಿ ಸಾಮಾಜಿಕ ಸಮಾನತೆಗಾಗಿ ವಸಾಹತುಶಾಹಿಗಳ ವಿರುದ್ಧ ಹೋರಾಟ ಮಾಡಿದ ಎಂದು ಅವನ ಕೆಲವು ಪ್ರಸಂಗಗಳನ್ನು ಲಾವಣಿಗಳ ಮೂಲಕ ನೋಡಲಾಯಿತು. ಲಾವಣಿಗಳಲ್ಲಿ ಅವನ ಸಂಪೂರ್ಣವಾದ, ನಿಜವಾದ ಕಾರಣ ಮತ್ತು ಪರಿಣಾಮಗಳನ್ನು ತುಂಬಾ ಸ್ಪಷ್ಟವಾಗಿ ನೀಡಲಾಗಿದೆ. ಆದರೆ ಇತಿಹಾಸದಲ್ಲಿ ಅವನ ಚರಿತ್ರೆಯನ್ನು ಮತ್ತು ಅವನೊಬ್ಬ ರೌಡಿ ಗುಂಡಾ ಎನ್ನುವ ರೀತಿಯಲ್ಲಿ ಚಿತ್ರಿಸಲಾಗಿದೆ. ಚರಿತ್ರೆಗೆ ವಸಾಹುತಶಾಹಿಗಳ ಪ್ರಭಾವವಿರುವುದರಿಂದ ಅದರಲ್ಲಿ ಅವನನ್ನು 'ರೆಬಲ್‌ಸ್ಟಾರ್' ದರೋಡೆಕೋರ, ಕಳ್ಳ, ವಂಚಕ ಎನ್ನುವ ಹಾಗೆ ಚಿತ್ರಿಸಲಾಗಿದೆ. ಆದರೆ ಲಾವಣಿಗಳಲ್ಲಿ ಹಾಗಲ್ಲ, ಅವನೊಬ್ಬ ಶೂರ, ಧೀರ, ಪರೋಪಕಾರಿ, ದಾರ್ಶನಿಕ, ಸಮಾಜದ ಸಮಾನತೆಯನ್ನು ಕಾಪಾಡುವ ಸಮಾಜಮುಖಿ ಎಂದು ಚಿತ್ರಿಸಿರುವುದು ಕಂಡುಬರುತ್ತದೆ. ಇವನ ತಂದೆ ಸಮಾಜಕ್ಕೋಸ್ಕರ ತನ್ನ ಪ್ರಾಣವನ್ನೇ ಮುಡುಪಾಗಿಟ್ಟು ಬ್ರಿಟೀಶರನ್ನು ಪ್ರತಿಭಟಿಸಿದ ಮತ್ತೊಬ್ಬ ವೀರ ಮುಂಡರಗಿ ಭೀಮರಾಯ. ಅವನನ್ನು ಕುರಿತು ನೋಡೋಣ.

*** ಮುಂಡರಗಿ ಭೀಮರಾಯ**

"ಕ್ರಿ.ಶ. ೧೮೫೭ರ ಹೋರಾಟದಲ್ಲಿ ಭಾಗವಹಿಸಿದ್ದ ವೀರಯೋಧ ಮುಂಡರಗಿ ಭೀಮರಾಯ. ಇವನು ದೊರೆಯಲ್ಲ, ದೇಸಾಯಿಯಲ್ಲ, ಕಲಕೇರಿಯ ನೌಡಗೌಡಿಕೆ ಮನೆತನದ ನ್ಯಾಯಾಧೀಶ ರಂಗರಾಯನ ಮಗ. ಈತನ ತಾತ ಡಂಬಳದ ದೇಸಾಯಿಯ ಮಂತ್ರಿಯಾಗಿದ್ದನು. ಆಗ ಬ್ರಿಟೀಶರು ಸಾಮಾನ್ಯ ಜನತೆಯನ್ನು ಶೋಷಣೆ ಮಾಡುತ್ತಿದ್ದುದನ್ನು ಖಂಡಿಸಿ ಆ ಕೆಲಸವನ್ನು ಬಿಟ್ಟು ತನ್ನ ಊರು ಬೆಣ್ಣೆಹಳ್ಳಿಗೆ ಬಂದನು. ಅಲ್ಲಿದ್ದಾಗಲೇ ಅವನಿಗೆ ಬ್ರಿಟೀಶರ ವಿರುದ್ಧ ಹೋರಾಟ ಮಾಡುವ ಚಿಂತನೆ ಮಾಡಿದ್ದು, ಆ ವೇಳೆಗಾಗಲೇ ಕರ್ನಾಟಕದಲ್ಲಿ ಬ್ರಿಟೀಶರ ವಿರುದ್ಧ ನಡೆದಿದ್ದ ಮತ್ತು ನಡೆಯುತ್ತಿದ್ದ ಪ್ರತಿಭಟನೆಗಳನ್ನೆಲ್ಲಾ ಗಮನಿಸಿದ್ದನು. ಅವುಗಳ ಬಗ್ಗೆ ಮಾಹಿತಿ ಸಂಗ್ರಹಿಸಿದ್ದನು. ದತ್ತಕ ವಿಷಯದಲ್ಲಿನ ಬ್ರಿಟೀಶರ ಧೋರಣೆ, ಲೂಟಿ ಮಾಡುತ್ತಿದ್ದ ಈ ದೇಶದ ಸಂಪತ್ತು, ಸಾಮ್ರಾಜ್ಯಶಾಹಿ ಮನೋಭಾವ ಇವುಗಳನ್ನೆಲ್ಲಾ ಕಂಡು ಆತನ ಮನಸ್ಸು ರೋಸಿಹೋಗಿತ್ತು. ಅಲ್ಲದೇ ಇವನು ಸೊರಟೂರು ದೇಸಾಯಿ, ಹಮ್ಮಿಗೆಯ ಕೆಂಚನಗೌಡ ದೇಸಾಯಿ, ಗೋವಿನಕೊಪ್ಪದ ಸದಾನಂದಗೌಡ ದೇಸಾಯಿ, ನರಗುಂದದ ಭಾಸ್ಕರರಾವ್ ಭಾವೆಯೊಂದಿಗೆ ಸಂಪರ್ಕ ಬೆಳೆಸಿದ್ದನು".

ಭೀಮರಾಯ ತನ್ನ ಚಟುವಟಿಕೆಗಳನ್ನು ಆರಂಭಿಸಲು ಬಳ್ಳಾರಿ ಪ್ರದೇಶಕ್ಕೆ ಹೋದನು. ಆನೆಗೊಂದಿ ಸಂಸ್ಥಾನದ ದೊರೆಗೆ ಮತ್ತು ಭಾಸ್ಕರರಾವ್ ಭಾವೆಗೆ ಪತ್ರ ಬರೆದು ಹೋರಾಟಕ್ಕೆ ಬೆಂಬಲ ಪಡೆದುಕೊಂಡನು. ಈ ಕ್ರಾಂತಿಕಾರರ ಪ್ರಭಾವಕ್ಕೆ ಒಳಗಾಗಿ ಅಲ್ಲಿನ ಸ್ಥಳೀಯ ಜನರು ಕಂದಾಯ ಕೊಡಲು ನಿರಾಕರಿಸಿದರು. ಇವನ ಪ್ರಚೋದನೆಯಿಂದ ಜನರು ಕಂದಾಯ ಕೊಡುತ್ತಿಲ್ಲ ಎಂದು ಬ್ರಿಟೀಶರ ಅಧಿಕಾರಿ ವರದಿ ಮಾಡಿದನು. ಬ್ರಿಟೀಶರು ಭೀಮರಾಯನನ್ನು ಬಂಧಿಸಲು ಪ್ರಯತ್ನಿಸಿದರು. ಆದರೆ ಅವನು ಬ್ರಿಟೀಶರಿಗೆ ಶರಣಾಗಲಿಲ್ಲ. ಬ್ರಿಟೀಶರಿಗೂ ಮತ್ತು

ಭೀಮರಾಯನಿಗೆ ಹೋರಾಟ ಆರಂಭವಾಯಿತು. ಕೊನೆಗೆ ೧೮೫೮ರ ಜೂನ್ ೧೨ರಂದು ಬ್ರಿಟೀಶರ ಗುಂಡಿಗೆ ಬಲಿಯಾದನು.

*** ಲಾವಣಿ ಸಾಹಿತ್ಯ ಮತ್ತು ಭೀಮರಾಯ**

ಭೀಮರಾಯನಿಗೆ ಯಾರದೇ ಸಹಾಯವಿರದೇ ಒಬ್ಬಂಟಿಗನಾಗಿ ಬ್ರಿಟೀಶರ ಜೊತೆ ಕಾದಾಟಕ್ಕಿಳಿಯುತ್ತಾನೆ. ಇವನಿಗೆ ಯಾವುದೇ ಸ್ವಾರ್ಥವಿರಲಿಲ್ಲ. ಜನಸಾಮಾನ್ಯರಿಗೆ ಆಗುತ್ತಿರುವ ಅನ್ಯಾಯವನ್ನು ವಿರೋಧಿಸಿ ಇವನು ಬ್ರಿಟೀಷರನ್ನು ಪ್ರತಿಭಟಿಸುತ್ತಾನೆ. ಇವನ ನಿಲುವು ಕೇವಲ ಪರೋಪಕಾರ ಮತ್ತು ದಾರ್ಶನಿಕ ನಿಲುವಾಗಿ ಕಂಡುಬರುತ್ತದೆ. ಭಾರತದಲ್ಲಿ ಶಸ್ತ್ರಾಸ್ತ್ರಗಳ ನಿಷೇಧ ಕಾಯಿದೆಯನ್ನು ಜಾರಿಗೆ ತಂದಾಗಲೂ ಕೂಡಾ ಭೀಮರಾಯ ಅದನ್ನು ವಿರೋಧಿಸುತ್ತಾನೆ.

“ಮದ್ದು ಗುಂಡು ಸೋರುಪ್ಪುಗಂಧಕ
ಯುದ್ಧಡಗಿಸಿಕೊಂಡವರು
ಭಾರಿ ಶಿಕ್ಷೆ ಕಡೆ ಒಳಗಾಗುವರು
ಕಂಪನಿಯವರು ಸಾರಿ ಹೇಳಿದರು
ದೇಶದ ಮದ್ದುಗುಂಡು ಕೊಂಡಾರು
ಹಮ್ಮಿಗೆ ದೇಸಾಯಿ ಬಳಿಗೆ ಬಂದಾರ
ಮದ್ದುಗುಂಡು ಕಠಾರಕತ್ತಿ
ನಿಮಗಿದ್ದರೆ ಕೊಡುಯೆಂದಾರು”

ನಂತರ ಭೀಮರಾಯ ಮತ್ತು ಶಾನುಭೋಗ ಇಬ್ಬರನ್ನೇ ಬ್ರಿಟೀಷರು ಹಿಡಿದು ಕೊಂದು ಹಾಕುತ್ತಾರೆ.

“ಬಿಡು ಬಿಡು ದೇಸಾಯಿ ಹಿಡಿ ಹಿಡಿ ಕತ್ತಿಯ
ನಡಿ ನಡಿ ಕುದುರಿಯನೇರು
ಹೊನ್ನು ತಿನ್ನೋ ಭಂಟರ ಕರಸಿದರು
ಹಮ್ಮಿಗೆ ಪುರವಾಕ್ಷಣ ಹೊಕ್ಕರು
ಕಿವಿ ಮೂಗು ಶಾನಭೋಗನ ಕೊಯಿಸಿದರು
ಬಂದ ಸವಾಕರ ಕಡಿ ಬಡಿಯೆಂದು
ದುಂದುಕರ ಮಾಡಿ ಬಿಟ್ಟಾರು”

ಪಿತೂರಿ ಮಾಡಿದ ಶಾನಭೋಗ ಕಿವಿ, ಮೂಗು ಕೊಯಿಸಿ ಅವನ ಕೈಕೆಳಗಿರುವ ಸವಾರರನ್ನು ಹಿಡಿದು ಬಡಿಯುತ್ತಾರೆ.

ಮದ್ದು ಗುಂಡುಗಳನ್ನು ದೋಚಿಕೊಂಡು ಖಜಾನೆಯ ಎಲ್ಲಾ ಬಂಗಾರ, ಬೆಳ್ಳಿಯನ್ನು ಚಕ್ಕಡಿಯಲ್ಲಿ ತುಂಬಿಕೊಂಡು ಡಂಬಳದಲ್ಲಿ ಸುಲಿಗೆ ಮಾಡಿ ಹಣವನ್ನು ತೆಗೆದುಕೊಂಡು ಹಾರೂಗೇರಿಯಲ್ಲಿ ಹಗಲಲ್ಲಿಯೆ ದರೋಡೆ ಮಾಡಿ ಕೌಲೂರ ಮೇಲೆ ಇಳಿದು ರಾತ್ರಿಯಲ್ಲಿ ಕಳ್ಳನಾಗಿ ಈ ಶೂರಮಿತ್ರನನ್ನು ಮತ್ತು ಕೆಲವರು ಕೂಡಿಕೊಂಡು ಗದಗಿನತ್ತ ಹೊರಟರು.

ಹೀಗೆ ಸುಸಜ್ಜಿತ ಜನಸಮುದಾಯದೊಂದಿಗೆ ಗದುಗಿಗೆ ಹೋಗಿ ಅಂಚೆ ಕಾರ್ಯಾಲಯ, ತಂತಿ ಕಾರ್ಯಾಲಯವನ್ನು ಸುಟ್ಟರು. ಅಲ್ಲಿಯ ಆಸ್ತೆಯೆಲ್ಲಾ ವಿಪ್ಲವದಲ್ಲಿ ಹಾಳಾಯಿತು. ಆದರೆ ಪೋಲೀಸರು ಈತನನ್ನು ಹಿಂಬಾಲಿಸಿಕೊಂಡು ಬಂದ ಸುದ್ದಿ ಕೇಳಿ ಸಮೀಪದ ಕೊಪ್ಪಳಕ್ಕೆ ಪಲಾಯನ ಮಾಡಿದರು. ಭೀಮರಾಯನು ದೇಸಾಯಿಯು ಬಹಿರಂಗವಾಗಿ ದಂಗೆ ಎಬ್ಬಿಸುವಿರೆಂದು ಖಚಿತವಾದ ಮೇಲೆ ಪೋಲೀಸರು ದೆಸಾಯಿಯ ಮನೆಗೆ ಬೆಂಕಿ ಇಟ್ಟು ಭೀಮರಾಯನನ್ನು ಹಿಡಿಯಲು ಕೊಪ್ಪಳಕ್ಕೆ ಹೋದರು.

ಹೀಗೆ ಮುಂಡರಗಿ ಭೀಮರಾಯನು ಬ್ರಿಟೀಶರ ಜೊತೆ ಹೋರಾಟ ಮಾಡಿ ವೀರಮರಣವನ್ನು ಹೊಂದಿದನು ಎಂದು ಹೇಳಬಹುದು.

**೫.೪.೨. ಜಾತಿ ಅಸಮಾನತೆಯ ನೆಲೆಯ ಪ್ರತಿರೋಧಗಳು**

ನಮ್ಮ ಹಿಂದೂ ಧರ್ಮದಲ್ಲಿ ಮೇಲ್ಜಾತಿ ಮತ್ತು ಕೆಳಜಾತಿ ಎನ್ನುವ ಕಲ್ಪನೆ ಇಂದಿನದಲ್ಲ, ಅದು ಮಾನವನು ಯಾವಾಗ ನಾಗರಿಕನಾಗುತ್ತಾ ಬಂದನೊ ಅವತ್ತಿನಿಂದಲೇ ಈ ಜಾತಿ ತಾರತಮ್ಯ ಅವನಲ್ಲಿ ಆಳವಾಗಿ ಬೇರೂರಿದೆ. ಹಿಂದಿನ ಕಾಲದಲ್ಲಿ ಮೇಲ್ಜಾತಿಯವರು ಕೆಳಜಾತಿಯವರನ್ನು ಶೈಕ್ಷಣಿಕವಾಗಿ, ಧಾರ್ಮಿಕವಾಗಿ, ರಾಜಕೀಯಾಗಿ ಎಲ್ಲ ಕ್ಷೇತ್ರಗಳಿಂದಲೂ ಶೋಷಣೆಯನ್ನು ಮಾಡುತ್ತಾ ಬಂದಿದ್ದಾರೆ. ಆದರೆ ಇಂದು ಅಂಬೇಡ್ಕರ್‌ರವರ ಹೋರಾಟ ಮತ್ತು ಪ್ರತಿಭಟನೆಯಿಂದ ಇವತ್ತು ಸ್ವಲ್ಪಮಟ್ಟಿಗೆ ಸಮಾನತೆಯನ್ನು ನಾವು ಕಾಣುತ್ತೇವೆ.

ಆದರೆ ವಸಾಹತುಶಾಹಿಗಳ ಕಾಲಾವಧಿಯಲ್ಲಿ ವಸಾಹತುಶಾಹಿಗಳ ಒಂದು ಪ್ರಭಾವ ಮತ್ತು ಪ್ರೇರಣೆಯಿಂದ ನಮ್ಮ ಸ್ಥಳೀಯ ಭಾರತೀಯ ಸಮಾಜ ಜಾತಿ ಅಸಮಾನತೆಯಿಂದ ಕೂಡಿರುವುದರಿಂದ ಈ ಅಸಮಾನತೆಯನ್ನು ವಿರೋಧಿಸಿರುವುದು ನಿರೂಪಿತವಾಗುತ್ತದೆ.

ಸಿಂಧೂರ ಲಕ್ಷ್ಮಣನು ಪಳಗಿ ನಗರದಲ್ಲಿ ಅಲ್ಲಿಯ ಬ್ರಿಟೀಶರಿಗೆ ಸಿಂಹಸ್ವಪ್ನವಾಗಿ ತನ್ನ ಹೋರಾಟವನ್ನು ಮುಂದುವರಿಸಿದ್ದನು. ಅಂತಹ ಸಂದರ್ಭದಲ್ಲಿ ಸಮಾಜದ ಭೇದಭಾವ ವ್ಯವಸ್ಥೆಗೆ ರೋಸಿಹೋದ ಮನಸ್ಸು ಈ ರೀತಿ ಮರುಗಿರಲು ಸಾಕು.

"ಗಪ್ಪನ ಲಕ್ಷ್ಮಣ ಕುಪ್ಪಳಿಸಿ ಮ್ಯಾಲಿಂದ
ತಪ್ಪದೇ ಗೌಡನ ಹಿಡಿದಾನ ಎಳೆದಾಡಿ
ರೊಚ್ಚೀಲೆ ಕಾಲ ಮಂದಾಗ"

ಅಂದು ಗೌಡನೆಂಬ ರಾಜನ ಮುಂದೆ ಹಾಯುವುದು ಕಣ್ಣಿಗೆ ಬೀಳುವುದು ಒಂದು ಅಪರಾಧವಾಗಿರುವ ಆ ಕಾಲದಲ್ಲಿ ಈ ಸನ್ನಿವೇಶ ಜರುಗಿಸುವುದು ಪ್ರಾಣತೆತ್ತಲು ಸಿದ್ಧರಾದವರಿಗೆ ಮಾತ್ರ ಸಾಧ್ಯವಾಗುತ್ತದೆ.

"ಇಂದಾದ ಅಪಮಾನ ಎಂದಿಗೂ ಸಹಿಸದೆ
ಮುಂದೆ ಮರೆಯದೆ ಬಂದೇನು ಮುಯ್ಯಕ್ಕೆ
ಒಂದಿನ ಮುಯ್ಯ ಮಾಡೇನು"

ಹೀಗೆ ಬ್ರಿಟೀಶರ ಪ್ರತಿನಿಧಿಯಾದ ಗೌಡನನ್ನು ಕುರಿತು ಅವನ ಜಾತಿ ತಾರತಮ್ಯದ ಮನೋಭಾವವನ್ನು ವಿರೋಧಿಸಿ ಲಕ್ಷ್ಮಣ ಇವತ್ತಿನ ದಿನ ಆಗಿರುವ ಅಪಮಾನದಿಂದ ಒಂದಿಲ್ಲ ಒಂದಿನ ಅದನ್ನು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುತ್ತೇನೆ ಎಂದು ಹೇಳಿದ.

ಇದೇ ತೆರನಾಗಿ ಸಂಗೊಳ್ಳಿರಾಯಣ್ಣನಿಗೂ ಒಂದು ಅಗ್ನಿ ಪರೀಕ್ಷೆ ಬರುತ್ತದೆ. ಸಂಗೊಳ್ಳಿ ರಾಯಣ್ಣನು ಸಂಗೊಳ್ಳಿರಾಯಣ್ಣನ ಕುಲದಿಂದ ಕೆಳಜಾತಿಯವನು ಎಂದು ತಿಳಿದು ಅದೇ ತೆರನಾಗಿ ಬ್ರಿಟೀಶರ ಪ್ರತಿನಿಧಿಯಾದ ಕುಲಕರ್ಣಿ ಬಾಳಪ್ಪನು ರಾಯಣ್ಣನಿಗೆ ಹೊಳೆಯಲ್ಲಿ ಸ್ನಾನ ಮಾಡುವಾಗ ತನ್ನ ಬಟ್ಟೆಯನ್ನು ತೊಳೆದುಕೊಡು ಎಂದು ಹೇಳುತ್ತಾನೆ. ಇದನ್ನು ವಿರೋಧಿಸಿದ ರಾಯಣ್ಣ ಕಡುಕೋಪಗೊಂಡು ಅವನನ್ನು ಉಗ್ರವಾಗಿ ಪ್ರತಿಭಟಿಸುತ್ತಾನೆ.

"ಪೂರ್ವಿದ ಮಾತ ಹೇಳತೀನಿ ನಿಮಗ,
ಸರ್ವರು ಕುಂತ ಕೇಳಿರಿ |
ಗರ್ವ ಬಂತೋ ಸಂಗೊಳ್ಳಿ ಕುಲಕರ್ಣಿಗಿ
ಚಂದದಿಂದ ರಾಯ ನಾಯಕ ಹೊಂದಿಕೊಂಡ ಇದ್ದ ಅವರ
ಮುಂದ ಹುಟ್ಟಿತ ಕದನದ ಬ್ಯಾಗಿ ||

ಹೊತ್ತಿನಾಗ ಧೋತ್ರಾ ಸಳತಾ ಅಂತ ಕೊಟ್ಟ ಅವನ
ಕ್ಯಾಯಿಗೆ ಇಷ್ಟ ಮಟ್ಟಿಗೆ ಸೆಟ್ಟ ಮಾಡಿ
ದಿಟ್ಟತನ ಹಿಡಿದ ರಾಯಣ್ಣ
ಮುಟ್ಟಾಕ್ಕಿಲ್ಲ ಅರವಿ ಎಂದೆಂದಿಗೆ
ಯಾಕಲೆ ಹಳಬಾ ಜೊತ್ಯಾಗಿದ್ದಿ ಸೊಕ್ಕ ಬಂತವನೋ ಈಗ
ದಿಗರ ಆಡತಿಯೋ ನಿಂತ ಇದರೀಗಿ
ಒಳ್ಳೇದ ಬಾಳಣ್ಣ ನನ್ನ ತಳ್ಳಿ ಮಾತ್ರ ಹಿಡಿಯೋ ಇನ್ನ
ದಾಳಿ ಬಂಟ ತಿಳಿಯೋ ಸುತ್ತಿನ ಹಳ್ಳಿಗಿ
ಬತ್ತರದಿಂದ ರಾಯ ನಾಟಕ ಹೆತ್ತ ತಾಯಿ
ಪಾದಕಬಿದ್ದು ಮತ್ತೆ ಕಟ್ಟಿಕೊಂಡ ಹತ್ತೀತಬ್ಯಾಗಿ"

ಹೀಗೆ ರಾಯಣ್ಣನ ಬ್ರಿಟೀಶ್ ಅಧಿಕಾರಿ ಕೈಕೆಳಗೆ ಊರಿನ ಕಂದಾಯ ವಸೂಲಿಗಾರನಾದ ಕುಲಕರ್ಣಿ ಬಾಳಪ್ಪನ ಒಂದು ಜಾತಿ ಅಸಮಾನತೆಯ ತಾರತಮ್ಯದಿಂದ ಕೋಪಗೊಂಡ ರಾಯಣ್ಣನು ಬಾಳಪ್ಪನನ್ನು ಬಯ್ಯುತ್ತಾನೆ ಎಂದು ಲಾವಣಿಯಲ್ಲಿ ಹೇಳಲಾಗಿದ. ಆದರೆ ಇತಿಹಾಸದಲ್ಲಿ ಇದನ್ನು ಎಲ್ಲೂ ಹೇಳಿಲ್ಲ. ಇದಕ್ಕೆ ಮುಖ್ಯಕಾರಣ ಚರಿತ್ರೆಯನ್ನು ರಚನೆ ಮಾಡಿದವರು ಬ್ರಿಟೀಶರ ಕೈಗೊಂಬೆಗಳಾಗಿದ್ದರಿಂದ ಹೀಗೆ ಮಾಡಿರಬಹುದು ಎಂದು ತಿಳಿಯುತ್ತದೆ.

### ೫.೫. ಆರ್ಥಿಕ ನೆಲೆ

ಆರ್ಥಿಕವಾದ ನೆಲೆ ಎನ್ನುವುದು ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ತುಂಬಾ ಪ್ರಮುಖವಾದದ್ದು. ಮನುಷ್ಯನು ತನ್ನ ಬದುಕನ್ನು ನಿಭಾಯಿಸಲು ಅವನಿಗೆ ಅನ್ನ, ಆಹಾರ, ದುಡ್ಡು ತುಂಬಾ ಅವಶ್ಯಕವಾದದ್ದು, ಅನಾಗರಿಕನಾದ ಮನುಷ್ಯ ಕೇವಲ ಬದುಕಿಗೋಸ್ಕರ ದುಡ್ಡಿಗೆ ಅಲ್ಲದೆ ಅನ್ನ ಆಹಾರಕ್ಕೆ ಅವಲಂಬಿತನಾಗಿರುತ್ತಾನೆ. ಆದರೆ ಇವತ್ತಿನ ಮುಂದುವರಿದ ನಾಗರಿಕ ಮನುಷ್ಯ ತನ್ನ ಅವಶ್ಯಕತೆಗಿಂತಲೂ ಹೆಚ್ಚಿನ ದುಡ್ಡಿನಾಸೆಗೆ ಒಳಗಾಗಿದ್ದಾನೆ. ಅದರಲ್ಲಿ ಬ್ರಿಟೀಷರು ಇದರಿಂದ ಹೊರತಾಗಿಲ್ಲ ಬ್ರಿಟೀಷರಿಗೆ ಹಣದ ದಾಹ ಅತಿಯಾಗಿದ್ದಿದ್ದರಿಂದ ಅವರು ವ್ಯಾಪಾರದ ನೆಪದಲ್ಲಿ ಭಾರತಕ್ಕೆ ಪ್ರವೇಶ ಮಾಡಿದರು. ಆದರೆ ಮುಂದೆ ಅವರ ವ್ಯಾಪಾರದ ಉದ್ದೇಶ ಭಾರತದ ಸಂಪತ್ತನ್ನು ಸಂಪೂರ್ಣವಾಗಿ ಕೊಳ್ಳೆಹೊಡೆಯುದಾಗಿತ್ತು. ಬ್ರಿಟೀಷರು ಭಾರತದ ತುಂಬೆಲ್ಲ ತಮ್ಮ ವ್ಯಾಪಾರದ ಮಳಿಗೆಗಳನ್ನು ಸ್ಥಾಪಿಸಿದರು. ಅಲ್ಲದೆ ಅನೇಕ ಆರ್ಥಿಕ ನೀತಿಗಳ ಬದಲಾಗಿ ಅನೀತಿಗಳ ಮೂಲಕ ಭಾರತದ ಸಂಪತ್ತನ್ನು ದೊಚುತ್ತಾ ಹೋದರು. ಈ ಆರ್ಥಿಕ ಅಸಮಾನತೆಯ ನೀತಿಯನ್ನು ನಮ್ಮ ಸ್ಥಳೀಯ ಪ್ರತಿಭಟನಾಕಾರರು ಅವುಗಳನ್ನು ವಿರೋಧಿಸಿದರು. ಇಂತಹ ವಿರೋಧಗಳನ್ನು ಈ ಅಧ್ಯಯನದ ನೆಲೆಯಲ್ಲಿ

೧. ವ್ಯವಹಾರದ ನೆಲೆಯ ಪ್ರತಿರೋಧಗಳು

೨. ಆದಾಯ ತೆರಿಗೆ ನೆಲೆಯ ಪ್ರತಿರೋಧಗಳು

ಎಂದು ವಿಂಗಡಿಸಿಕೊಂಡು ಆರ್ಥಿಕ ನೆಲೆಯ ಸ್ಥಳೀಯ ಪ್ರತಿಭಟನೆಗಳನ್ನು ಅಧ್ಯಯನ ಮಾಡಲಾಗಿದೆ.

#### ೫.೫.೧. ವ್ಯವಹಾರದ ನೆಲೆಯ ಪ್ರತಿರೋಧಗಳು

ಭಾರತಕ್ಕೆ ಯುರೋಪಿನ್ನರ ಆಗಮನವು ವ್ಯಾಪಾರಕ್ಕೆ ನಾಂದಿಯಾಗುವುದರ ಮೂಲಕ ಇಲ್ಲಿನ ಸಂಪರ್ಕ ಬೆಳೆಯಲು ಕಾರಣವಾಯಿತು. ೧೪೯೮ ರಂದು ವಾಸ್ಕೋಡಿಗಾಮ ಭಾರತದ ಗುಡ್‌ಹೋಪ್ ಭೂಶಿರಕ್ಕೆ (ಕಲ್ಲಿಕೋಟೆ) ಬಂದಾಗಲೇ ಇದನ್ನು ಯುರೋಪಿಗೆ ಪರಿಚಯಿಸಿದಂತಾಯಿತು. ಪೋರ್ಚುಗೀಸರು, ಡಚ್ಚರು, ಇಂಗ್ಲೀಷರು ಮತ್ತು ಫ್ರೆಂಚರು ಈ ನೆಲದಲ್ಲಿ ಕಾಲಿಟ್ಟಾಗಲೇ ಆಂತರಿಕ ಸಂಘರ್ಷ ಆಳ್ವಿಕೆ, ಶೋಷಣೆ, ಹೀಗೆ ನಾನಾ ಮುಖಗಳು ಸಾರ್ವತ್ರಿಕವಾಗಿ ಅನಾವರಣಗೊಂಡವು. ಅಲ್ಪಾನ್ಸೊ, ಅಲ್ಬುಕರ್ಕ್, ಡಚ್ಚರ ಗೌರ್ನರ್ ಡೂಪ್ಲೆ, ಫ್ರೆಂಚ್ ಮತ್ತು ಇಂಗ್ಲೀಷರು ವ್ಯಾಪಾರದ ಕೋಟೆಗಳನ್ನು ಇಲ್ಲಿ ಸ್ಥಾಪಿಸಿಕೊಂಡರು. ಸರ್ ಥಾಮಸ್ ರೋ ಎಂಬ ರಾಯಭಾರಿ ಮೋಘಲ್ ಅರಸ ಜಹಾಂಗೀರನ ಆಸ್ಥಾನಕ್ಕೆ ಬಂದು ಭಾರತದ ನೆಲದಲ್ಲಿ (ಬಾಂಬೆ, ಕಲ್ಲಿಕೋಟೆ, ಮಚಲಿಪಟ್ಟಣ) ಇತರೆ ವ್ಯಾಪಾರದ ಕೋಟೆಗಳನ್ನು ಸ್ಥಾಪಿಸಲು ಅನುಮತಿ ಕೇಳಿದನು. ರಾಯಭಾರಿ ಮಾತಿಗೆ ಒಪ್ಪಿದ ಜಹಾಂಗೀರ್ ಭಾರತವು ದಾಸ್ಯದ ಕೂಪಕ್ಕೆ ಬೀಳುವಂತಾಯಿತು. ಅಂದು ವಿದೇಶಿಯರ ಆಕ್ರಮಣವನ್ನು ಮೊಘಲರು

ತಡೆದಿದ್ದರೆ ಇಡಿ ಭಾರತದ ಭವಿಷ್ಯವೇ ಬದಲಾಗುತ್ತಿತ್ತು. ವ್ಯಾಪಾರದ ಕೋಟೆಗಳನ್ನು ಸ್ಥಾಪಿಸುವ ಮೂಲಕ ಈ ನೆಲದಲ್ಲಿ ಪಾದಾರ್ಪಣೆ ಮಾಡಿದ ವಿದೇಶಿಯರು, ವಿದೇಶಿ ಮಾದಕ ವಸ್ತುಗಳಾದ ಅಫೀಮು, ಗಾಂಜಾ, ಹೆರಾಯಿನ್, ಜೊತೆಗೆ ಮಸಾತಿ ಪದಾರ್ಥಗಳನ್ನು ಪಿಂಗಾಣಿ ಸಾಮಾನುಗಳನ್ನು ಇತರೆ ಬೆಲೆ ಬಾಳುವ ವಸ್ತುಗಳನ್ನು ಇಲ್ಲಿ ಕಡಿಮೆ ದರದಲ್ಲಿ ಮಾರಾಟ ಮಾಡಿ ಸ್ಥಳೀಯ ಜನರನ್ನು ಓಲೈಸಿಕೊಂಡರು. ದಕ್ಷಿಣ ಏಷ್ಯಾದ ಎಲ್ಲಾ ರಾಷ್ಟ್ರಗಳ ಪಾಡು ಇದೇ ಆಗಿತ್ತು. ಚೀನಾದಲ್ಲಿ ಆಫೀಮು ಯುದ್ಧಗಳೆ ನಡೆದವು. ಜಪಾನ್ ಇಂಡೋನೇಷಿಯಾ ಮಲೇಷಿಯಾ, ಬರ್ಮಾ, ಥೈಲ್ಯಾಂಡ್, ಸಿಂಗಾಪುರ, ವಿಯೆಟ್ನಾಂ ಮೊದಲಾದವು ಭಾರತದಂತೆ ವಸಾಹತು ರಾಷ್ಟ್ರಗಳಾಗಿದ್ದವು ಇಂಗ್ಲೆಂಡ್ ವಸಾಹತುಶಾಹಿ ರಾಷ್ಟ್ರವಾಗಿತ್ತು.

ಹೀಗೆ ಭಾರತದಲ್ಲಿ ಬ್ರಿಟೀಷರು ವ್ಯಾಪಾರ ಮಾಡುವ ಮೂಲಕ ಇಲ್ಲಿನ ಆಡಳಿತ ಚುಕ್ಕಾಣಿ ಹಿಡಿಯಲು ಪ್ರಯತ್ನಿಸಿದ್ದು ತನ್ನ 'ಈಸ್ಟ್ ಇಂಡಿಯಾ ಕಂಪನಿ' ಮೂಲಕ(೧೬೦೦) ಆಡಳಿತ ಸಾಮಾಜಿಕ ಕ್ಷೇತ್ರದಲ್ಲಾದಂತೆ ಆರ್ಥಿಕ ಕ್ಷೇತ್ರದಲ್ಲಿ ವ್ಯಾಪಕ ಬದಲಾವಣೆ ಕಂಡುಬಂತು. ಒಂದು ಸರ್ಕಾರ ಯಶಸ್ವಿಯಾಗಿ ಆಡಳಿತ ನಡೆಸಬೇಕಾದರೆ ಅಲ್ಲಿನ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸುತ್ತದೆ. ಭಾರತದಲ್ಲಿ ಮೊದಲಿನಿಂದಲೂ ಕೃಷಿ ಜೀವನ ಸಾಗಿ ಬಂದಿದ್ದು, ಪಶುಪಾಲನೆ, ಬಲಿಷ್ಟವಾಗಿ ಬೆಳೆಯಿತಲ್ಲದೆ ಆರ್ಥಿಕ ಸ್ವರೂಪವನ್ನು ಬದಲಿಸಿತು. ಇಲ್ಲಿ ಖನಿಜ ಸಂಪತ್ತು ಹೇರಳವಾಗಿದ್ದರಿಂದ ಕೈಗಾರಿಕೆಗಳು ಸ್ಥಾಪನೆಗೊಂಡು ವಾಣಿಜ್ಯೋದ್ಯಮಿಗಳ ಸೃಷ್ಟಿಗೆ, ಖಾಸಗಿ ಕೈಗಾರಿಕೆಗಳ ಸ್ಥಾಪನೆಗೆ ಕಾರಣವಾಯಿತು. ವ್ಯಾಪಾರ ಅಭಿವೃದ್ಧಿಗೊಂಡು ರಫ್ತು ಮತ್ತು ಆಮದಿನಿಂದ ವಿದೇಶಗಳೊಂದಿಗೆ ಕಂಡುಬಂದವು. ಬದಲಾದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿ ಕ್ಷೇತ್ರ ಪ್ರಮುಖವಾದುದು. ಆಹಾರ, ವಾಣಿಜ್ಯ ಬೆಳೆಗಳಿಗೆ ಇಲ್ಲಿ ಅತೀ ಹೆಚ್ಚಿನ ಬೇಡಿಕೆ ಇತ್ತು ಆಹಾರ ಧಾನ್ಯ ಬೆಳೆಯುವುದರಿಂದ, ಧಾನ್ಯಕೊಂಡುಕೊಳ್ಳುವುದು ಕಡಿಮೆಯಾಗಿ ವಸ್ತುವಿನಿಮಯ ಪದ್ಧತಿ ಹೆಚ್ಚಾಯಿತು. ಫಲವತ್ತಾದ ಭೂಮಿಗೆ ವಿವಿಧ ರೀತಿಯ ಹೆಚ್ಚಿನ ಕಂದಾಯ ನಿಗದಿಪಡಿಸಲಾಯಿತು. ಕಂದಾಯವನ್ನು ಬ್ರಿಟೀಷ ಅಧಿಕಾರಿಗಳು ಕಂತುಗಳಲ್ಲಿ ಪಡೆಯುತ್ತಿದ್ದರು. ವಾಣಿಜ್ಯ ಧಾನ್ಯಗಳಿಗೆ ಬೇಡಿಕೆ ಹೆಚ್ಚಾಗಿ ಭಾರತೀಯ ಜನಸಾಮಾನ್ಯರಿಗೆ ದೊರಕದೆ ಹೋಯಿತು. ಇವುಗಳನ್ನು ಇಲ್ಲಿ ಕಡಿಮೆ ಬೆಲೆಗೆ ತೆಗೆದುಕೊಂಡು ತಮ್ಮ ದೇಶಕ್ಕೆ ಹೋಗಿ ಅತೀ ಹೆಚ್ಚಿನ ಬೆಲೆಗೆ ಮಾರಾಟ ಮಾಡಿ ಅತೀ ಹೆಚ್ಚಿನ ಲಾಭ ಪಡೆಯುವುದನ್ನು ಬ್ರಿಟೀಷರು ರೂಢಿಸಿಕೊಂಡರು. ಅದರ ಜೊತೆಗೆ ವಾಣಿಜ್ಯ ರಫ್ತು ಆಮದು ಹೆಚ್ಚಾಗಿ ಆಧಿಕಲಾಭಗಳಿಸುತ್ತಿದ್ದರು. ತರುವಾಯ ಸಾರಿಗೆ ಸಂಪರ್ಕಕ್ಕೆ ಬ್ರಿಟೀಷ ಅಧಿಕಾರಿಗಳು ಹೆಚ್ಚಿನ ಗಮನಕೊಟ್ಟರು. ಇದು ಅಂತಾರಾಷ್ಟ್ರೀಯ ಮಟ್ಟದಲ್ಲಿ ವ್ಯವಹರಿಸಲು ಸುಲಭ ಸಾಧನವಾಗಿ ಮತ್ತು ಇಲ್ಲಿ ಜನಸಾಮಾನ್ಯರಿಗೆ ದುಬಾರಿ ವೆಚ್ಚದಲ್ಲಿ ಸಂಚಾರ ಮಾಡುವುದು ಅನಿವಾರ್ಯವಾಯಿತು. ರೈಲ್ವೆ ಸಾರಿಗೆ ಮೊದಲು ಸರಕು ಸಾಗಾಣಿಕೆಗೆ ಮೀಸಲಾಗಿದ್ದರಿಂದ ಇಲ್ಲಿನ ಸಂಪತ್ತನ್ನು ಇಂಗ್ಲೀಷರು ತಮ್ಮ ದೇಶಕ್ಕೆ ರವಾನಿಸುತ್ತಿದ್ದರು.

**ಕೃಷಿ**

ವಸಾಹತುಶಾಹಿ ಆಳ್ವಿಕೆಯಲ್ಲಿ ಕೃಷಿ ಕ್ಷೇತ್ರದಲ್ಲಿ ಅಸಮಾನತೆಯನ್ನು ಬ್ರಿಟೀಷರು ಜಾರಿಗೆ ತಂದರು. ಆಗಿನ ಪ್ರಾಂತ್ಯದ ಉತ್ಪನ್ನ ಆದಾಯದ ಮೂಲಗಳು ಕೃಷಿಯಾಗಿದ್ದುದು ಸ್ಪಷ್ಟ ಕಲ್ಕತ್ತ ಮುಂಬಯಿ ಮತ್ತು ಮೈಸೂರು ಪ್ರಾಂತಗಳಿಗಿಂತ ಮದ್ರಾಸ್ ಅಧಿಪತ್ಯದಲ್ಲಿ ಬ್ರಿಟೀಷರ ಆಡಳಿತ ಪ್ರಾರಂಭವಾಗಿನಿಂದಲೇ ಕೃಷಿಗೆ ಹೆಚ್ಚಿನ ಗಮನಕೊಟ್ಟು ಇಲ್ಲಿಯ ಕೃಷಿಉತ್ಪನ್ನಗಳನ್ನು ಕಡಿಮೆ ಬೆಲೆಗೆ ಕೊಂಡುಕೊಂಡು ಹೆಚ್ಚು ಬೆಲೆಗೆ ಮಾರಾಟ ಮಾಡುತ್ತಿದ್ದರು. ಸರ್ ಥಾಮಸ್ ಮನ್ರೋ ಕೃಷಿಯಲ್ಲಿ ಮಾರ್ಪಾಟುಗಳನ್ನು ತಂದು, ರೈತವಾರಿ ಪದ್ಧತಿಯನ್ನು ಅಳವಡಿಸಿದನು. ತರುವಾಯ ಅದರ ಪರಿಣಾಮವಾಗಿ ರೈತವಾರಿ ಇನಾಂ ಭೂಮಿಗಳನ್ನು ಜನವರಿ ೧೮೮೫ರಲ್ಲಿ ಸರ್ಕಾರಕ್ಕೆ ಒಪ್ಪಿಸಲು ಕಲೆಕ್ಟರ್ ಗೂಡಾಚಾರರನ್ನು ಆದೇಶಿಸಿದನು. ಆಗ ಭಾರತದಲ್ಲಿ ಕ್ಷಾಮ, ಬರಗಾಲಗಳು ತಲೆಎತ್ತಿದಾಗ ಪರಿಹಾರದ ನೆಪದಲ್ಲಿ ಜನಸಾಮಾನ್ಯರಿಗೆ ಕಮ್ಮಿದುಡ್ಡನ್ನು ಕೊಟ್ಟು ಜಾಸ್ತಿ ಕೆಲಸಕಾರ್ಯಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಕೃಷಿಕರು ಶೇ. ೪೦ರಷ್ಟು ಉತ್ಪಾದನೆಯಲ್ಲಿ ತೊಡಗಿದ್ದರು. ಬೆಳೆದಂತಹ ಬೆಳೆಗಳ ಮೇಲೆ ಅತಿಯಾದ ಕಂದಾಯ ನಿಗದಿಯಾಗುತ್ತಿತ್ತು. ಆಗಾಗ ತಲೆದೋರುತ್ತಿದ್ದ ಕ್ಷಾಮ, ಬರಗಾಲ(ಅತಿವೃಷ್ಟಿ, ಅನಾವೃಷ್ಟಿ)ಗಳಿಂದ ಕಲೆಕ್ಟರ್‌ಗಳು ಭೂಕಂದಾಯವನ್ನು ನಿರ್ಧಾರ ಮಾಡುತ್ತಿದ್ದರು ಅದೇ ರೀತಿ ತೆರಿಗೆಗಳನ್ನು ಹೆಚ್ಚಿಸುತ್ತಿದ್ದರು. ಬ್ರಿಟೀಷರು ಕೃಷಿಗೆ ಬ್ಯಾಂಕ್‌ಗಳ ಮೂಲಕ ಸಾಲ ನೀಡಿ ಹೆಚ್ಚಿನ ಬೆಲೆಯಲ್ಲಿ ವ್ಯವಸಾಯ ಉಪಕರಣಗಳನ್ನು ಕೊಡಿಸುತ್ತಿದ್ದರು. ಕೃಷಿ ಮಾರುಕಟ್ಟೆಗಳನ್ನು ಬ್ರಿಟೀಷರು ಜಾರಿಗೆ ತಂದರು ಅವರ ಆರ್ಥಿಕ ಅನೀತಿಯ ನೀಯಮಗಳಿಂದ ಭಾರತೀಯ ಕೃಷಿ ಪದ್ಧತಿ ದುಬಾರಿಯಾಗುತ್ತಾ ಬಂತು.

**ಕೈಗಾರಿಕೆ**

೧೭ನೇ ಶತಮಾನದಲ್ಲಿ ಮಧ್ಯಭಾಗದಲ್ಲಿ ಯುರೋಪ್ ಆಫ್ರಿಕಾಗಳಿಗೆ ಭಾರತದಿಂದ ಬಟ್ಟೆ ರಫ್ತಾಗುತ್ತಿತ್ತು. ಈ ಕೆಲಸ ಯುರೋಪಿಯನ್ನರು ಮಾಡುತ್ತಿದ್ದರು. ಹದಿನೆಂಟನೇ ಶತಮಾನದಲ್ಲಿ ಇಂಗ್ಲೀಷರು ಕೈಗಾರಿಕೆಯ ಸಂರಕ್ಷಣೆಯ ನೆಪದಲ್ಲಿ ಭಾರತದ ಬಟ್ಟೆಗಳನ್ನು ನಿಷೇಧಿಸಿದರು ಭಾರತ ದೇಶದಲ್ಲಿದ್ದಂತೆ ಆಂಗ್ಲರ ನೀತಿ ಔದ್ಯೋಗಿಕ ಕ್ರಾಂತಿಯ ನಂತರ ಕೈಗಾರಿಕಾ ಕ್ಷೇತ್ರದಲ್ಲಿ ಬದಲಾವಣೆಗಳಾದವು. ಯಂತ್ರಗಳ ಬಳಕೆ, ಉಗಿಶಕ್ತಿಯ ಉಪಯೋಗ, ಇಂಗ್ಲೆಂಡಿನ ಕೈಗಾರಿಕಾ ಅಭಿವೃದ್ಧಿಗೆ ಭಾರತೀಯರನ್ನು ಬಳಸಿಕೊಂಡರು.

**ವ್ಯಾಪಾರ**

ಸ್ಥಳೀಯ ಅರಸರ ವ್ಯಾಪಾರಕ್ಕೂ ಮತ್ತು ಆಂಗ್ಲ ಪದ್ಧತಿಯ ವ್ಯಾಪಾರಕ್ಕೂ ವ್ಯತ್ಯಾಸವಿತ್ತು. ಭಾರತದಲ್ಲಿ ಬ್ರಿಟೀಷರು ಸಾರಿಗೆ ಸಂಪರ್ಕ ಗಣಿಗಾರಿಕೆ ಮತ್ತು ಕೈಗಾರಿಕೆಗಳನ್ನು ಸ್ಥಾಪಿಸಿ ವ್ಯಾಪಾರದಲ್ಲಿ ಭಾರತದ ಸಂಪತ್ತನ್ನು ಸಂಪೂರ್ಣವಾಗಿ ದೋಚಿಕೊಂಡರು. ದೇಶಿಯವನ್ನು ಮಿರಿಸಿ ವಿದೇಶಿ ವ್ಯಾಪಾರ ಪದ್ಧತಿಯನ್ನು ಜಾರಿಗೆ ತಂದರು.

ವ್ಯಾಪಾರವನ್ನು ಆಂಗ್ಲರು ಎರಡು ರೀತಿಗಳಲ್ಲಿ ಮಾಡುತ್ತಿದ್ದರು. ಸಮುದ್ರದ ಮೂಲಕ ವ್ಯಾಪಾರ ಮತ್ತು ಭೂಮಾರ್ಗಗಳ ಮೂಲಕ ಮಾಡುವ ವ್ಯಾಪಾರ ಅಂತರ್ದೇಶೀಯ ವ್ಯಾಪಾರದಲ್ಲಿ ಬ್ರಿಟೀಷ ಅಧಿಪತ್ಯಗಳು ರಫ್ತು ಮತ್ತು ಆಮದು ಮಾಡಿಕೊಳ್ಳುತ್ತಿದ್ದವು. ಇಲ್ಲಿ ಬೆಳೆದಂತಹ ಸರಕುಗಳನ್ನು ಕೊಂಡೊಯ್ದು ಮಾರಾಟಮಾಡುತ್ತಿದ್ದರು. ಬಂದರುಗಳ ಸಗಟು ವ್ಯಾಪಾರದ ಮೂಲಕ ಸಾಮಗ್ರಿಗಳನ್ನು ವಿದೇಶಕ್ಕೆ ಕಳುಹಿಸುತ್ತಿದ್ದರು. ಜಿಲ್ಲಾ ಕಲೆಕ್ಟರನೇ ವ್ಯಾಪಾರದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದನು. ಪ್ರೆಸಿಡೆನ್ಸಿಯ ಅಧೀನದಲ್ಲಿ ಎಲ್ಲಾ ವಸ್ತುಗಳ ವ್ಯಾಪಾರ ನಡೆಯುತ್ತಿತ್ತು. ವ್ಯಾಪಾರ ಮತತ್ತು ವಹಿವಾಟಿನಲ್ಲಿ ಭಾರತೀಯರಿಗೆ ಯಾವುದೇ ತೆರನಾದ ಸ್ವಾತಂತ್ರತೆ ಇರಲಿಲ್ಲ. ಬ್ರಿಟೀಷ ಪದ್ಧತಿಗಳಿಗೆ ಅನುಗುಣವಾಗಿರಬೇಕಾಗಿತ್ತು. ಇಲ್ಲಿಂದ ಸರಕುಗಳನ್ನು ಕೊಂಡು ಬ್ರಿಟೀಷರು ಬೇರೆ ಬೇರೆ ದೇಶಗಳೊಡನೆ ರಫ್ತು ಮತ್ತು ಆಮದುನ್ನು ಮಾಡಿಕೊಳ್ಳುತ್ತಿದ್ದರು.

ಬ್ರಿಟೀಷರಿಗೆ ಆಮದಿಗಿಂತ ರಫ್ತುವಿನಲ್ಲಿ ಲಾಭವಿತ್ತು. ಇಲ್ಲಿ ಬೆಳೆಯುತ್ತಿದ್ದ ಧಾನ್ಯಗಳು ಭತ್ತ, ರಾಗಿ, ಜೋಳ, ತಂಬಾಕು, ಎಣ್ಣೆ ಬೀಜಗಳು, ಹತ್ತಿ, ತುಪ್ಪ, ತೆಂಗಿನಕಾಯಿ, ಸಕ್ಕರೆ, ಮರ-ಮುಟ್ಟುಗಳನ್ನು ತಮ್ಮ ದೇಶಕ್ಕೆ ಸಾಗಿಸುತ್ತಿದ್ದರು. ಯಾವ ದೇಶಕ್ಕೆ ಸರಕನ್ನು ರಫ್ತು ಮಾಡುತ್ತಿದ್ದರೋ ಆ ದೇಶದಿಂದ ಬೇಡಿಕೆ ಸಲ್ಲಿಸಿದ ಸರಕುಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ವಿದೇಶಿ ವ್ಯಾಪಾರದಿಂದ ರಫ್ತು ಮತ್ತು ಆಮದಿನಿಂದ ಬ್ರಿಟೀಷ ಸರಕಾರಕ್ಕೆ ಅತೀ ಹೆಚ್ಚಿನ ಲಾಭ ಮಾಡಿಕೊಳ್ಳುತ್ತಿದ್ದರು.

ಈಸ್ಟ್ ಇಂಡಿಯಾ ಕಂಪನಿ ವ್ಯಾಪಾರ ನೀತಿಯಲ್ಲಿ ಬದಲಾವಣೆ ತಂದಿತು. ೧೮೩೩ರಲ್ಲಿ ಕ್ರೈಸ್ತ ಧರ್ಮೀಯರು ಯಾರೇ ಆಗಲಿ ವ್ಯಾಪಾರ ಸ್ವಾತಂತ್ರ್ಯವನ್ನು ಮುರಿದು, ಭಾರತದೊಂದಿಗೆ ನೇರವಾಗಿ ವ್ಯಾಪಾರ ಮಾಡುತ್ತಿದ್ದರು. ವ್ಯಾಪಾರ ದೇವರ ಸೇವೆಯು ಆಗಿರುತ್ತದೆಂದು ಆಂಗ್ಲರು ಹೇಳುತ್ತಿದ್ದರು.

**ಭೂಕಂದಾಯ**

ಭೂಕಂದಾಯವು ಸರ್ಕಾರಕ್ಕೆ ಸಲ್ಲುವ ಹಲವು ಕಂದಾಯಗಳಲ್ಲಿ ಲಾಭಕರವಾದುದು. ಬ್ರಿಟೀಷರ ಆಡಳಿತದಲ್ಲಿ ಖಜಾನೆಗೆ ಭೂಕಂದಾಯದಿಂದ ಹೇರಳವಾಗಿ ಹಣ ಬರುತ್ತಿತ್ತು. ಭೂಕಂದಾಯ ಸಂಗ್ರಹಣೆಯನ್ನು ಹಳ್ಳಿಯಲ್ಲಿ ಶ್ಯಾನಭೋಗ ಅಥವಾ ಗ್ರಾಮ ಸಹಾಯಕ, ಹೋಬಳಿಗಳಲ್ಲಿ (ಫಿರ್ಕಾ) ಜಿಲ್ಲೆದಾರ (ರೆವಿನ್ಯೂ ಇನ್ಸ್‌ಪೆಕ್ಟರ್) ತಾಲ್ಲೂಕುಗಳಲ್ಲಿ ತಹಶೀಲ್ದಾರ ಉಪವಿಭಾಗದಲ್ಲಿ ಸಬ್‌ಲೆಕ್ಟರ್ ಜಿಲ್ಲೆಯಲ್ಲಿ ಕಲೆಕ್ಟರ್ ರೆವಿನ್ಯೂ ಬೋರ್ಡಿನ ಕಾರ್ಯದರ್ಶಿ ನೋಡಿಕೊಳ್ಳುತ್ತಿದ್ದರು. ಮನ್ರೋ ರೈತವಾರಿ ಭೂಕಂದಾಯ ವ್ಯವಸ್ಥೆಯನ್ನು ಜಾರಿಗೆ ತಂದನು. ಒಂದು ವರ್ಷಕ್ಕೆ ಭೂಕಂದಾಯ ೨೦ ಲಕ್ಷ ಕೋಟೆಯ ಪಗೋಡಗಳು ಸಂಗ್ರಹಿಸುತ್ತಿದ್ದರು. ಈ ರೀತಿ ಸಂಗ್ರಹವಾಗಲು ಮನ್ರೋ ತಂದ ರೈತವಾರಿ ಪದ್ಧತಿಯಿಂದ ನೇರವಾಗಿ ಕಂದಾಯ ಸರ್ಕಾರಕ್ಕೆ ಸಲ್ಲುತ್ತಿತ್ತು. ಆಗ ಕೃಷಿ ಭೂಮಿ, ನೀರಾವರಿ ಭೂಮಿ, ಫಲವತ್ತಾದ ಮಣ್ಣಿನ ವಿವಿಧ ಬಗೆಗಳನ್ನು ಕುರಿತಂತೆ ಕಂದಾಯ ಪಡೆಯುತ್ತಿದ್ದರು.

**ತೆರಿಗೆ**

ಆಂಗ್ಲರ ಅರ್ಥಿಕಾವಸ್ಥೆಯಲ್ಲಿ ವಿವಿಧ ಮೂಲಗಳಿಂದ ತೆರಿಗೆ ಬಂದು ಖಜಾನೆ ತುಂಬುತ್ತಿತ್ತು. ಪ್ರತಿಯೊಂದು ವಸ್ತುಗಳ ಮೇಲೆ ಕರ ವಿಧಿಸಿ ಅವರ ಮೌಲ್ಯವನ್ನು ನಿರ್ಧರಿಸುತ್ತಿದ್ದರು. ತೆರಿಗೆಯನ್ನು ವಾಣಿಜ್ಯ ವಸ್ತುಗಳಿಂದ ಪಡೆಯುತ್ತಿದ್ದರು. ಮದ್ಯಕ್ಕೆ ಅತೀ ಬೇಡಿಕೆ ಇದ್ದು, ಅಧಿಕ ತೆರಿಗೆ ಕಡ್ಡಾಯವಾಗಿತ್ತು ಎಣ್ಣೆ ಮಿಲ್ಲಿನ ತೆರಿಗೆ, ಅಕ್ಕಸಾಲಿಗ ಕರ, ಪಾನೀಯಗಳು, ಉಪ್ಪಿನ ತೆರಿಗೆ ಆನೆಗಳ ಕಟ್ಟುವ ಜಾಗಕ್ಕೆ ತೆರಿಗೆ ನೀಡಬೇಕಾಗಿತ್ತು. ಕುದುರೆ ಮತ್ತು ಲಾಯಗಳಿಗೂ ಸಹ ತೆರಿಗೆಯನ್ನು ಪಡೆಯುತ್ತಿದ್ದರು.

ಗ್ರಾಮದ ಲೆಕ್ಕಾಧಿಕಾರಿಗಳು, ರೈತರ ಹತ್ತಿರ ಸಂಗ್ರಹಿಸಿದ ತೆರಿಗೆಯನ್ನು ಗ್ರಾಮ ಸೇವಕರಿಂದ ಪಡೆಯುತ್ತಿದ್ದರು. ಕೆಲವೊಮ್ಮೆ ಅಸಾಮರ್ಥ್ಯದಿಂದ ಕೆಲವರು ಮನೆ ತೆರಿಗೆಯನ್ನು ಕೊಡುತ್ತಿರಲಿಲ್ಲ. ಅಂಥವರೆಂದರೆ, ಅತಿ ಕಡುಬಡವರು. ಇದು ಆಂಗ್ಲರ ಆರ್ಥಿಕ ನೀತಿಯ ದರ್ಪ ನಿಲುವುಗಳನ್ನು ತೋರಿಸುತ್ತದೆ. ಹೆಣ್ಣುಮಕ್ಕಳು ದಾರಿ ಪಕ್ಕದಲ್ಲಿ ಎಲೆ, ಅಡಿಕೆ, ತಂಬಾಕುಗಳನ್ನು ಮಾರಿದರೆ ತೆರಿಗೆಯನ್ನು ಕಡ್ಡಾಯ ಮಾಡಿದ್ದರು.

ಉನ್ನತ ವರ್ಗದವರ ಮನೆಗಳಿಗೆ ಪ್ರತ್ಯೇಕ ತೆರಿಗೆ ವಿಧಿಸಿದ್ದರು. ಒಂದು ಉರಿನಿಂದ ಮತ್ತೊಂದು ಊರಿಗೆ ಎತ್ತು, ಗಾಡಿಗಳು ಸಾರ್ವಜನಿಕ ಸ್ಥಳಗಳಲ್ಲಿ ನಡೆಯುವ ಸಮಾರಂಭಗಳಿಗೆ ತೆರಿಗೆ ಕೊಡಬೇಕಾಗಿತ್ತು.

**ಲಾವಣಿ ಸಾಹಿತ್ಯ ವ್ಯವಹಾರದ ನೆಲೆಯ ಪ್ರತಿರೋಧಗಳು**

ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಬ್ರಿಟೀಷರು ಆರಂಭದಲ್ಲಿ ಮುರ್ಶಿದಾಬಾದ ರೇಷ್ಮೆ, ವಸ್ತ್ರ, ಢಾಕಾ ಮಲಮಲಗಳನ್ನು ಕೊಂಡೊಯ್ದು ಮಾರಿ ೨೦೦ರಷ್ಟು ಲಾಭ ಸಂಪಾದಿಸುತ್ತಿದ್ದರು. ಕಾಲಕ್ರಮೇಣ ಇಲ್ಲಿ ತಮ್ಮ ವ್ಯಾಪಾರ ಕುದುರಿದಂತೆಲ್ಲ ಅವರ ಆಧಾರದ ಮೇಲೆ ರಾಜಕೀಯ ಸಾಮ್ರಾಜ್ಯವನ್ನು ಕಟ್ಟಿ ಇಂಗ್ಲೆಂಡಿನ ಮ್ಯಾಜೆಸ್ಟರ್ ಮತ್ತು ಲಂಕಾಶಾಯರಗಳಲ್ಲಿ ನಡೆಯುತ್ತಿದ್ದ. ನೂಲುವ ಮತ್ತು ವಿಸ್ತ್ರೋತ್ಪನ್ನ ಮಾಡುವ ಯಂತ್ರೋದ್ಯಮಕ್ಕೆ ನೆರವಾಗುವಂತೆ ಭಾರತದ ಆರ್ಥಿಕ ನೀತಿಯನ್ನು ರೂಪಿಸಿಕೊಂಡರು. ಇದರ ಆಘಾತಕ್ಕೆ ಸಿಕ್ಕಿ ಚೇತನ ಹೀನವಾದ ಭಾರತದ ಗ್ರಾಮೋದ್ಯೋಗಗಳ ಪೈಕಿ ನೂಲು ತೆಗೆಯುವ ಉದ್ಯಮ ಮತ್ತು ನೇಯ್ಗೆ ಪ್ರಧಾನವಾದವುಗಳು ಭಾರತದ ಆರ್ಥಿಕ ಅವನತಿ, ಇಂಗ್ಲೆಂಡಿನ ಆರ್ಥಿಕ ಸಾಮ್ರಾಜ್ಯದ ಅಭಿವೃದ್ಧಿಗೆ ಕಾರಣವಾಯಿತು. ಭಾರತ ಇಂಗ್ಲೆಂಡಿನ ಒಂದು ಅತ್ಯಧಿಕ ಲಾಭದ ಮಾರುಕಟ್ಟೆಯಾಗಿ ಪರಿಣಮಿಸಿತು. ೧೮೦೩ರಲ್ಲಿ ಕೇವಲ ಮೂರು ಲಕ್ಷ ರೂಪಾಯಿಗಳು ಬೆಲೆ ಬಾಳುವ ಬಟ್ಟೆ ಭಾರತಕ್ಕೆ ರಫ್ತಾದರೆ ೧೮೨೯ರಲ್ಲಿ ಅರವತ್ತಾರು ಕೋಟಿ ರೂಪಾಯಿಗಳ ಬೆಲೆಬಾಳುವ ಬಟ್ಟೆ ಭಾರತಕ್ಕೆ ರಫ್ತಾಯಿತು. ಬ್ರಿಟೀಷರು ಭಾರತದಲ್ಲಿ ಸ್ಥಾಪಿಸಿದ ವಿಶ್ವವಿದ್ಯಾಲಯ, ಶಿಕ್ಷಣ ಪದ್ಧತಿ ನ್ಯಾಯಾಲಯಗಳು ಹಾಗೂ ಶಾಸನ ಸಭೆಗಳು ಭಾರತದ ಸುತ್ತ ರಾಜಕೀಯ ದಾಸ್ಯ ಸಮೃದ್ಧಿ

ರಚಿಸಿದಂತೆಯೇ ಲಂಕಾಶಾಯರಿನ ಶಕ್ತಿ ಚಾಲಿತ ನೇಯ್ಗೆ ಯಂತ್ರಗಳು ಆರ್ಥಿಕ ದಾಸ್ಯ ಸಮೃದ್ಧಿ ರಚಿಸಿದವು.

"೧೯೦೫ರಲ್ಲಿ ಬರಗಾಲ ಪ್ರಾಂತ್ಯ ವಿಭಜನೆಯಿಂದಾಗಿ ಭಾರತದಲ್ಲಿ ರಾಷ್ಟ್ರೀಯ ಪ್ರಜ್ಞೆ ಜಾಗೃತವಾಯಿತು. ಲಾಲಾ ಲಜಪತಿರಾಯ, ಬಿಪಿನ್‌ಚಂದ್ರಪಾಲ ಹಾಗೂ ಬಾಲಗಂಗಾಧರ ತಿಲಕ, ತ್ರಿವಳಿ ಉಗ್ರವಾದಿಯಾಗಿ ಧುರೀಣರು ದೇಶಾದ್ಯಂತ ಸ್ವದೇಶಿ ಚಳುವಳಿಯ ಪ್ರಸಾರ ಮಾಡಿದರು. ರಾಜಕೀಯ ಉದ್ದೇಶದಿಂದ ಕೂಡಿದ ಸ್ವದೇಶಿ ಚಳುವಳಿ ವಿದೇಶಿ ಬಟ್ಟೆ ಬಹಿಷ್ಕಾರ ತಂತ್ರವನ್ನೊಳಗೊಂಡಿತು. ಇದು ಭಾವೋದ್ರೇಕ ಸ್ವರೂಪದ್ದಾಗಿದ್ದು ಬ್ರಿಟೀಷ್ ಪ್ರಭುತ್ವದ ಧೋರಣೆಗೆ ವಿರುದ್ಧವಾದ ಕಾರ್ಯಕ್ರಮವಾಗಿತ್ತು. ಹಾಗೆಯೇ ಸ್ವದೇಶಿ, ಕೈಗಾರಿಕೆಗಳಿಗೆ ರಕ್ಷಣೆ ಮತ್ತು ಪ್ರೋತ್ಸಾಹ ನೀಡುವ ಕಾರ್ಯಕ್ರಮ ಒಳಗೊಂಡಿತ್ತು."[೪೭]

ಗಾಂಧೀಜಿಯವರು ಸ್ವದೇಶಿ ಚಳವಳಿ ಹಿಡಿದುಕೊಂಡಾಗ ಅದು ಭಾವೋದ್ರೇಕದ ಮತ್ತು ಆರ್ಥಿಕ ಸ್ತರಗಳನ್ನು ಮೀರಿ ಮೇಲೆದ್ದು ಸ್ವರಾಜ್ಯ ಪ್ರಾಪ್ತಿಗೆ ಒಂದು ಪ್ರಭಾವಯುತ ಸಾಧನವಾಗಿ ಪರಿಣಮಿಸಿತು. ಸ್ವದೇಶಿ ಎಂದರೆ, ಕೇವಲ ವಸ್ತ್ರವೊಂದೇ ಅಲ್ಲದೇ ಎಲ್ಲಾ ಸ್ವದೇಶಿ ವಸ್ತುಗಳೆಂದು ಗಾಂಧೀಜಿ ವ್ಯಾಖ್ಯಾಯಿನಿಸಿದರು. ಹೀಗೆ ಮೊದಲು ವಿದ್ವಾಂಸಕ ಸ್ವರೂಪ ತಾಳಿದ್ದ ಸ್ವದೇಶಿ ಚಳವಳಿ ರಚನಾತ್ಮಕ ಸ್ವರೂಪ ತಾಳಿತು. ಈ ರಚನಾತ್ಮಕ ಚಳವಳಿಯಲ್ಲಿ ಖಾದಿ ಧರಿಸುವುದು ಭಾರತದ ರಾಷ್ಟ್ರೀಯತೆಯ ಸಂಕೇತವಾಯಿತು. ಸ್ವರಾಜ್ಯ ಪ್ರಾಪ್ತಿಗೆ ಸಾಧನವಾದ ಖಾದಿ ಸಪ್ತತತ್ವಗಳ ಮೇಲೆ ಅಧಿಷ್ಠಿತವಾಗಿದೆಯೆಂಬುದು ಗಾಂಧೀಜಿಯವರ ಅಭಿಮತ ಅವುಗಳೆಂದರೆ ಆಹಿಂಸೆ, ಸಾದಾ ಮತ್ತು ಸರಳ ಜೀವನ, ಕಾರ್ಯ, ಎಲ್ಲ ಕಾರ್ಯಗಳ ಬಗ್ಗೆ ಸಮಭಾವ ಮಾನವೀಯ ಜೀವನದ ಮೌಲ್ಯ, ಜೀವನ ವೇತನ ಹಾಗೂ ಸ್ವದೇಶಿ.

"ನೂಲೂವುದು ಹಾಗೂ ನೇಯುವುದು ಭಾರತೀಯರಿಗೆ ವೇದಕಾಲದಿಂದಲೂ ಚಿರಪರಿಚಿತ. ಇಂಥ ಪರಂಪರಾಗತ ಉದ್ಯೋಗ ಬ್ರಿಟೀಷ್ ಸಾಮ್ರಾಜ್ಯಶಾಹಿ ಧೋರಣೆಯಿಂದಾಗಿ ಅಧಃಪತನಗೊಂಡಿತು. ರಾಷ್ಟ್ರೀಯ ಆರ್ಥಿಕ ಸ್ವಾವಲಂಬನೆ ಕೈರಾಟಿಯ ಹೊಸ ಕಲ್ಪನೆಯನ್ನು ಭಾರತೀಯರಿಗೆ ತಂದುಕೊಟ್ಟರು. ಇದರಿಂದ ಭಾರತಿಯರ ದಾರಿದ್ರ್ಯನಿವಾರಣೆಗೆ ರಾಟಿಯಿಂದ ಮಾತ್ರ ಸಾಧ್ಯವೆಂಬುದನ್ನು ಕಂಡುಕೊಂಡರು."[೪೮]

ಅಖಿಲಭಾರತ ಚರಕ ಸಂಘದ ಅಡಿಯಲ್ಲಿ ಪ್ರಾಂತೀಯ ಚರಕ ಸಂಘಗಳು ತಲೆಯೆತ್ತಿದವಲ್ಲದೆ ಇವುಗಳ ಮೇಲ್ವಿಚಾರಣೆಯಲ್ಲಿ ಪ್ರಾಂತ್ಯದ್ಯಾಂತ ಖಾದಿ ಮತ್ತು ಗ್ರಾಮೋದ್ಯೋಗ ಸಂಘಗಳು ತಲೆಯೆತ್ತಿ ನೂಲು-ನೇಯ್ಗೆ ಹಾಗೂ ಖಾದಿ ಬಟ್ಟೆ ಮಾರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡು ಖಾದಿ ಪ್ರಚಾರ ಮಾಡುವ ಮೂಲಕ ಬ್ರಿಟನ್ ಬಟ್ಟೆಯ ಮಾರುಕಟ್ಟೆಯ ಮೇಲೆ ಗಂಭೀರ ಪರಿಣಾಮ ಬೀರುವುದಕ್ಕೆ ಕಾರಣವಾದವು. ಖಾದಿ ಮಹತ್ವ ವಿವರಿಸುವುದರ ಮೂಲಕ ಗಾಂಧೀಜಿ ಖಾದಿ ಧರಿಸಿ ಖಾದಿ ಪ್ರಚಾರಕ್ಕೆ ಕಂಕಣಬದ್ಧವಾಗುವಂತೆ ಜನಸಾಮಾನ್ಯರಿಗೆ ಮನವಿ

ಮಾಡಿಕೊಂಡರು. ಖಾದಿಯಲ್ಲಿ ಅಂತರ್ಗತವಾಗಿರುವ ಆರ್ಥಿಕ ತತ್ವಗಳನ್ನು ವಿವರಿಸಿದರು. ಅದೆಲ್ಲವನ್ನು ನಾವು ಲಾವಣಿಗಳಲ್ಲಿ ನೋಡಬಹುದು. ದೇಶಾಭಿಮಾನ ಸಂಕೇತವಾದ ಖಾದಿ ಬಟ್ಟೆಯನ್ನು ಪ್ರತಿಯೊಬ್ಬ ಭಾರತೀಯರು ಧರಿಸುವಂತೆ ಕಳಕಳಿಯಿಂದ ಲಾವಣಿಕಾರ ಕೇಳಿಕೊಳ್ಳುತ್ತಾನೆ ಅದರ ಮೂಲಕ ಖಾದಿಯಲ್ಲಿ ಅಂತರ್ಗತವಾದ ಆರ್ಥಿಕ ತತ್ವಗಳನ್ನು ವಿವರಿಸುತ್ತಾನೆ.

"ಮೂವತ್ತೇಳು ಕೋಟಿ ಮಂದಿ ಇಂದ
ಖಾದಿ ಧರಿಸಿದರ ಭರತಖಂಡ ಆಗತೈತಿ ಸ್ವಾಧೀನ
ಗೋಳಾಡಿ ಇಂಗ್ಲೀಷರು ಹಾಳಾಗಿ ಹೋಗತಾರ
ಕೂಳ ಇಲ್ಲದ ಸಾಯತಾರ ಗಿರಣಿ ಜನ ಇಲ್ಲ ಅನುಮಾನ"॥

ಈ ಮೊದಲೇ ಹೇಳಿದಂತೆ ವ್ಯಾಪಾರಕ್ಕೆಂದು ಭಾರತಕ್ಕೆ ಬಂದ ಬ್ರಿಟೀಷರು ಭಾರತದಲ್ಲಿ ಸಿದ್ಧಗೊಳ್ಳುತ್ತಿದ್ದ ಉತ್ಕೃಷ್ಟ ರೇಷ್ಮೆ ಹಾಗೂ ಮಲಮಲ್ ಬಟ್ಟೆಯನ್ನು ಬ್ರಿಟನ್ ಪೇಟೆಯಲ್ಲಿ ಮಾರಿ ಹೇರಳ ಲಾಭ ಗಳಿಸಿದರು. ಸ್ವದೇಶ ಸಿದ್ಧಗೊಳಿಸಿದ ಬಟ್ಟೆಗೆ ಬೇಡಿಕೆ ಕಡಿಮೆಯಾದುದನ್ನು ಗಮನಿಸಿದ ಬ್ರಿಟನ್ ಬಟ್ಟೆಯ ಗಿರಣಿಯ ಮಾಲೀಕರು ಭಾರತದ ಬಟ್ಟೆಗೆ ಹೆಚ್ಚಿನ ಕರ ವಿಧಿಸುವ ಶಾಸನ ಮಾಡಿಸುವಲ್ಲಿ ಯಶಸ್ವಿಯಾದರೂ ಬ್ರಿಟನ್‌ನಲ್ಲಿ ಭಾರತದ ಬಟ್ಟೆಗೆ ಬೇಡಿಕೆ ತಗ್ಗಲಿಲ್ಲ. ಅನಂತರ ಭಾರತದಲ್ಲಿ ಬಟ್ಟೆಯ ಉದ್ಯೋಗದಲ್ಲಿ ತೋಡಗಿದವರ ಮೇಲೆ ಕರ ವಿಧಿಸುವ ಮತ್ತೊಂದು ಕ್ರೂರಶಾಸನ ಪಾಸು ಮಾಡಿಸುವ ಹಾಗೂ ಬ್ರಿಟನ್ ಬಟ್ಟೆ ಭಾರತದಲ್ಲಿ ಕೆಲಕಾಲ ಬಹು ಅಗ್ಗದ ದರದಲ್ಲಿ ಮಾರಾಟ ಮಾಡುವ ಮೂಲಕ ಭಾರತದ ಬಟ್ಟೆ ಉದ್ಯೋಗ ಮೂಲೆಗುಂಪು ಮಾಡಿದರು. ಆಗ ಪುನಃ ತಮ್ಮ ಬಟ್ಟೆಯನ್ನು ಭಾರತದಲ್ಲಿ ಹೆಚ್ಚು ಬೆಲೆಗೆ ಮಾರಾಟ ಮಾಡಲು ಕ್ರಮಿಸಿದುದರಿಂದ ಭಾರತದ ಸಂಪತ್ತು ಬ್ರಿಟನ್‌ಗೆ ಹರಿದು ಹೋಗಲಾರಂಭಿಸಿತು. ಕಾರಣ ಪ್ರತಿಯೊಬ್ಬರು ಖಾದಿ ಧರಿಸುವ ಹಾಗೂ ರಾಟಿಯಿಂದ ನೂಲ ತೆಗೆದು ಖಾದಿ ಉತ್ಪಾದಿಸುವ ಮೂಲಕ ಬಟ್ಟೆಗಾಗಿ ಬ್ರಿಟನ್‌ಗೆ ಹರಿದು ಹೋಗುತ್ತಿರುವ ಸಂಪತ್ತನ್ನು ತಡೆಗಟ್ಟಲು ಭಾರತೀಯರು ಬ್ರಿಟೀಷರ ವಿರುದ್ಧ ಪ್ರತಿಭಟಿಸಿದ ಪರಿಯನ್ನು ಲಾವಣಿಕಾರ ವರ್ಣಿಸುತ್ತಾನೆ.

"ಜ್ಞಾನದಿಂದ ನಮ್ಮಲ್ಲಿಯ ಹೀನ ಗುಣ ತೆಗೆದು ಹಾಕಿ
ಮಾನವಂತರಾಗಿ ಖಾದಿ ವಸ್ತವನ
ಶ್ರೇಷ್ಠ ಅಂತ ಧರಿಸಿದರ ಸಾಷ್ಟಾಂಗ ಹಾಕತೇದಿ
ಕೋಟ್ಯಾವದಿ ರೈತರ ಉಪಜೀವನ ಆಗತತಿರಣ್ಣ
ರೈತರ ಹಿತದಿಗೋಸ್ಕರ ಖಾದಿ ಪ್ರಚಾರ
ಚಳವಳಿ ಮಾಡೂರ ಕಾಂಗ್ರೆಸ್ ಜನ
ಅವರು ಹೇಳದ್ದಂಗ ನೀವು ಕೇಳಿಕೊಂಡು ನಡಿರನ್ನ
ಬಡತನದಿಂದ ಬಳಲಲಾರ ರೈತ ಜನರ ಕಷ್ಟ ಸೋಸೂರ ಹೊಟ್ಟೆಗಿಲ್ಲ
ಅನ್ನ ಸರಕಾರದ ಜನರು ತೆರೆದ ನೋಡುವಲ್ಲರು ಕಣ್ಣ

ಸತ್ಯಾ ಶಾಂತಿ ತತ್ವಾಭೋಧಿಸುರವರಕ ಹುಟ್ಟಬಂದಾರ
ತೊಬ್ಬ ಅವತಾರ ಗಾಂಧಿ ಭಗವಾನ
ಅನ್ನ ಹಾಕಿ ರೈತರನ್ನ ಸಾಕಿ ಸಲವುತಾನ ಪೂರ್ಣ
ಅಜ್ಜ ಗಾಂಧಿ ಮಾತಿನಂತೆ ಸಜ್ಜಾಗಿ ನಡೆದರ
ಲಗ್ಗ ಬಗ್ಗುಬಡುತಾನ ದುಷ್ಟರನ
ಒಂದೇ ಮನಸಿನಿಂದ ಕೂತ ವಂದೆ ಮಾತರಂ ಅನ್ನುತ
ಚಂದದಿಂದ ತಿರುವಿರೆನ್ನ ಜಂತ್ತವನ
ಜಂತ್ರದ ಅರವಿ ಒಬ್ಬ ತೊಟ್ಟ ದೇಶಿಯ ಹಸರಬಳಿ ಇಟ್ಟ
ಸ್ವಂತ ಹಿಂದು ದೇಶದಭಿಮಾನ ಹಿಡಿರೆವ್ವ ಇನ್ನ

“ಖಾದಿಧಾರಣೆ ಹಾಗೂ ರಾಟಿಯಿಂದ ನೂಲ ತೆಗೆಯುವದರಿಂದ ಭಾರತದ ಸಂಪತ್ತು ಭಾರತದಲ್ಲಿ ಉಳಿಯುವದು, ಹಾಗೆಯೇ ನೂಲ–ನೇಯ್ಗೆಯ ಉದ್ಯೋಗ ಭಾರತದ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸುವುದು”.[೪೯] ನಾವು ತಿಳಿದಂತೆ ಭಾರತ ಹಳ್ಳಿಗಳ ದೇಶ, ಇಲ್ಲಿನ ಬಹುಪಾಲು ಜನರು ಕೃಷಿ ಮೇಲೆ ಅವಲಂಬಿತರಾಗಿರುವರು, ಈ ಕೃಷಿಯಾದರೋ ಮನ್ಸೂನ್ ಗಾಳಿ ಮೇಲೆ ಅವಲಂಬಿತವಾಗಿರುವುದು ಮನ್ಸೂನ್ ಗಾಳಿಗಳಾದರೋ ವರ್ಷದಲ್ಲಿ ಕೆಲತಿಂಗಳು ಮಾತ್ರ ಬೀಸುವುದರಿಂದ ನಾಲ್ಕಾರು ತಿಂಗಳು ಕೆಲಸವಿಲ್ಲದೆ ಕೃಷಿಕರು ಸುಮ್ಮನೆ ಕೂಡುವರು, ದೀರ್ಘ ವಿರಾಮದಿಂದಾಗಿ ಕೃಷಿಕರು ಸೋಮಾರಿಗಳಾಗುವ, ಇಲ್ಲವೆ ಜೂಜಾಟ ಇನ್ನಿತರ ದುರ್ವ್ಯಸನಗಳಲ್ಲಿ ತೊಡಗಿ ಹಣ ಹಾಳು ಮಾಡಿಕೊಳ್ಳುವರು, ಕಾರಣ, ಕೃಷಿಕರು ಬಿಡುವಿನ ವೇಳೆಯನ್ನು ನೂಲು–ನೇಯ್ಗೆಯಲ್ಲಿ ತೊಡಗಿಸಿಕೊಂಡಲ್ಲಿ ತಮಗೆ ಬೇಕಾದ ಬಟ್ಟೆಯನ್ನು ಸಿದ್ಧಪಡಿಸಿಕೊಂಡು ಸ್ವಾವಲಂಬಿಗಳಾಗಿ ಹಣ ಉಳಿತಾಯಕ್ಕೆ ಕಾರಣವಾಗುವುದು, ಹಾಗೆಯೇ ಬಟ್ಟೆ ಉತ್ಪಾದಿಸುವ ಕಾರ್ಯದಲ್ಲಿ ನೂಲ ತೆಗೆಯುವ ಮೂಲಕ ಹೆಣ್ಣುಮಕ್ಕಳು ಗಂಡಸರಿಗೆ ಸಹಾಯ ಮಾಡಿದಲ್ಲಿ” ಮನೆತನದ ಆರ್ಥಿಕ ಸ್ಥಿಗತಿಗಳು ಸುಧಾರಿಸುತ್ತೆಂಬುವುದು ಪ್ರತಿಭಟನಕಾರರ ಅಭಿಮತ

“ಇಷ್ಟೆಲ್ಲ ಕೇಳಿ ನಿಷ್ಠಾದಿಂದ ನಡೆದರ
ಶ್ರೇಷ್ಠ ವಾಗತ್ತೈತಿ ನಮ್ಮ ಹಿಂದುಸ್ಥಾನ
ಯಾವದೇನು ಕಡಿಮೆ ಇಲ್ಲ ಎರಡನೆಯವರು ಬೇಕಾಗಿಲ್ಲ
ಸ್ವಾವಲಂಬಿಯಾಗಿ ನಮ್ಮ ಜನ ದುಡಿಯಬೇಕು ದಿನ”

ಹೀಗೆ ಗಂಡು ಹೆಣ್ಣು ಮಕ್ಕಳು ಕಾಲಹರಣಮಾಡದೆ ಬಿಡುವಿನ ವೇಳೆಯಲ್ಲಿ ತಮ್ಮನ್ನು ನೂಲು–ನೇಯ್ಗೆಯಲ್ಲಿ ತೊಡಗಿಸಿಕೊಂಡಲ್ಲಿ ಭಾರತ ಬಟ್ಟೆಯ ಉತ್ಪಾದನೆಯಲ್ಲಿ ಸ್ವಾವಲಂಬಿ ಯಾಗುವುದಲ್ಲದೆ ನಿರುದ್ಯೋಗ ಸಮಸ್ಯೆ ತನ್ನಿಂದ ತಾನೇ ನಿವಾರಣೆಯಾಗಿ ಜನ ಸುಖ–ಸಂತೋಷದಿಂದಿರುವರು

"ರಾಟಿ-ಮೇಟಿ ಉದ್ಯೋಗ ನೀವು ರಾತ್ರಿ ಹಗಲನಡಸಿದರ
ಖಾತ್ರಿಯಿಂದ ಹೋಗತ್ಯೆತಿ ಬಡತನ
ಕಂಬಾರ ಬಡಿಗೇರ ಪಿಂಜಾರ ನೇಕಾರ
ತಬಗಾರ ಬಣಗಾರ ಉಪಜೀವನ ಸಾಗತ್ಯೆತಿ ದಿನ
ಖಾದಿ ಕೇಂದ್ರ ಗ್ರಾಮೋದ್ಯೋಗ ಚರಖಾ ಸಂಘ
ಮೊದಲ ಮಾಡಿ ಎಷ್ಟೋ ಸಂಘ ಮಾಡಿದರ ಸ್ಥಾಪನ
ಪೊಡವಿಯೊಳಗ ಕೂಲಿಕಾರ ದೃಢದಿಂದ
ಇದರೊಳಗ ದುಡಿದರ ಪ್ರತಿದಿನ ಸಿಗತ್ಯೆತಿ ಹಣ

ಹೀಗೆ ಹೊಟ್ಟೆಯ ವಿಷಯವಾಗಿ ಕೃಷಿ ಹಾಗೂ ಬಟ್ಟೆಯ ವಿಷಯವಾಗಿ ನೂಲು-ನೇಯ್ಗೆಯಲ್ಲಿ ಪ್ರತಿಯೊಬ್ಬರೂ ತಮ್ಮನ್ನು ತೊಡಗಿಸಿಕೊಂಡಲ್ಲಿ ಸ್ವಾವಲಂಬಿಯಾಗುವುದರಲ್ಲಿ ಸಂದೇಹವಿಲ್ಲ. ಸ್ವಾತಂತ್ರ್ಯವಾಗಿ ನೂಲು-ನೇಯ್ಗೆಯಲ್ಲಿ ತೊಡಗಿಸಿಕೊಳ್ಳಲು ಅಸಮರ್ಥರಾದವರು ಖಾದಿ ಉತ್ಪಾದನೆ ಹಾಗೂ ಮಾರಾಟಕ್ಕಾಗಿ ತಲೆಯೆತ್ತಿದ ಖಾದಿ ಗ್ರಾಮೋದ್ಯೋಗಗಳ ನೆರವು ಪಡೆದುಕೊಳ್ಳಬಹುದು. ಈ ರೀತಿ ಪ್ರತಿಯೊಬ್ಬ ಭಾರತೀಯನು ಖಾದಿ-ಕಾಂಗ್ರೆಸ್ ಆಂದೋಲನಗಳನ್ನು ಜೋರುಗೊಳಿಸುವ ಮೂಲಕ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಶ್ರಮಿಸಬೇಕೆಂಬುದು ಭಾರತೀಯರ ಇಚ್ಛೆ ಕಾರಣ ಇಲ್ಲಿಯವರೆಗೆ ಬ್ರಿಟನ್ ಬಟ್ಟೆಗಳನ್ನು ಅಲ್ಲಿನ ಗಿರಣಿ ಮಾಲೀಕರು ನಿಗದಿಪಡಿಸಿದ ಬೆಲೆಗೆ ಭಾರತೀಯರು ಕೊಂಡ ಪರಿಣಾಮವಾಗಿ ಭಾರತದ ಸಂಪತ್ತು ಬ್ರಿಟನ್‌ಗೆ ಹರಿದುಹೋಗುತ್ತಿತ್ತು. ಬಟ್ಟೆ ಉತ್ಪಾದನೆಯಲ್ಲಿ ಭಾರತ ಸ್ವಾವಲಂಬಿಯಾದಲ್ಲಿ ಬಟ್ಟೆ ಗಿರಾಕಿಗಳಿಲ್ಲದ ಕಾರಣ ಬ್ರಿಟನ್ ಬಟ್ಟೆ ಗಿರಣಿಗಳು ಮುಚ್ಚಿ ಹೋಗುತ್ತವೆ. ಇಲ್ಲಿಯವರೆಗೆ ಭಾರತವನ್ನು ತನ್ನ ಬಟ್ಟೆಯ ಮಾರುಕಟ್ಟೆಯನ್ನಾಗಿ ಮಾಡಿಕೊಂಡು ಅಭಿವೃದ್ಧಿಹೊಂದಿದ ಬ್ರಿಟನ್ ಭಾರತ ಬಟ್ಟೆಯ ವಿಷಯದಲ್ಲಿ ಸ್ವಾವಲಂಬಿಯಾದಲ್ಲಿ ಬ್ರಿಟಿಶ್ ಸಾಮ್ರಾಜ್ಯ ಅಧಃಪತನಗೊಳ್ಳುವುದರಲ್ಲಿ ಸಂದೇಹವಿಲ್ಲ ಎಂಬ ಗಾಂಧೀಜಿಯವರ ವಿಚಾರವನ್ನು ಪ್ರತಿಭಟನಾಕಾರರು ಜನಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿ ವಿವರಿಸಿ ಅವರನ್ನು ಖಾದಿ ಭಕ್ತರನ್ನಾಗಿ ಮಾಡುವ ಮೂಲಕ ದೇಶದ ಆರ್ಥಿಕ ಸ್ವಾತಂತ್ರ್ಯಕ್ಕೆ ಕಟ್ಟಬದ್ಧವಾದ ರಾಷ್ಟ್ರೀಯ ಚಳವಳಿ ಬಲಗೊಳ್ಳುವುದಕ್ಕೆ ಕಾರಣಕರ್ತನಾದ.

ಪಾನಸೇವನೆಯು ಆರ್ಥಿಕವಾಗಿ ಅದು ಅನರ್ಥಕಾರಿ ಎಂದು ಬ್ರಿಟೀಷ ವಿರುದ್ಧವಾಗಿ ಸ್ಥಳೀಯ ಪ್ರತಿಭಟನಕಾರರು ಪಾನನಿರೋಧ ಕಾಯ್ದೆಯನ್ನು ಜಾರಿಯಲ್ಲಿ ತಂದರು. ಮಧ್ಯಪಾನದಿಂದ ದೂರವಿದ್ದ ಭಾರತೀಯರಿಗೆ ಅದರ ರುಚಿ ಹಚ್ಚಿಸಿ ಸಾರ್ವತ್ರಿಕಗೊಳಿಸಿದ ಕೀರ್ತಿ ಬ್ರಿಟೀಷ್ ಆಳ್ವಿಕೆಗೆ ಸಲ್ಲಬೇಕು. ಬ್ರಿಟೀಶರು ತಮ್ಮ ದೇಶದ ಮಧ್ಯವನ್ನು ಅಗ್ಗವಾಗಿ ಮಾರಾಟ ಮಾಡುವ ಮೂಲಕ ಭಾರತೀಯರು ಮದ್ಯಪಾನ ಚಟಕ್ಕೆ ಅಂಟಿಕೊಳ್ಳಲು ಕಾರಣರಾದರು. ಇದರಿಂದ ಭಾರತೀಯರ ನೈತಿಕ ಅಧಃಪತನದ ಜೊತೆ ಹಣದ ಹೊಳೆಯೇ ಇಂಗ್ಲೆಂಡಿಗೆ ಹರಿದು ಹೋಗಿ ಭಾರತದಲ್ಲಿ ಬಡತನ ಬಲವಾಗಿ ನೆಲೆಸಿತು. ಭಾರತೀಯರ ನೈತಿಕ ಬಲವನ್ನು ಪುನರ್

ಸ್ಥಾಪಿಸುವುದಕ್ಕಾಗಿ ಹಾಗೂ ಅವರ ಹಣ ಇಂಗ್ಲೆಂಡಿಗೆ ಹರಿದು ಹೋಗುವುದನ್ನು ತಡೆಯುವುದಕ್ಕಾಗಿ ಕಾಂಗ್ರೆಸ್ ಪಂಕ್ತಿ ೧೯೦೦ರಲ್ಲಿ ಮದ್ಯಪಾನ ಪ್ರತಿಬಂಧಕ ಪ್ರತಿಭಟನೆ ಹೂಡಿತು.

ಔಷಧಿಗಳಿಗಾಗಿ ಉಪಯೋಗಿಸುವ ಮಾದಕ ಪದಾರ್ಥಗಳ ಹೊರತಾಗಿದ್ದ ಎಲ್ಲ ಮಾದಕ ಪದಾರ್ಥಗಳ ಮೇಲೆ ಸಾಕಷ್ಟು ಕರವಿಧಿಸುವದಲ್ಲದೆ ಮಧ್ಯಪಾನ ಪ್ರತಿಬಂಧಿಸುವಂತೆ ಸರಕಾರಕ್ಕೆ ಮನವಿ ಮಾಡಿಕೊಂಡಿತು. ಮದ್ಯ ಮಾರಾಟದಿಂದ ತೆರಿಗೆ ರೂಪದಲ್ಲಿ ಅಪಾರ ಹಣ ಬೊಕ್ಕಸಕ್ಕೆ ಬರುತ್ತಿರುವಾಗ ಬ್ರಿಟೀಷ್ ಸರಕಾರ ಕಾಂಗ್ರೆಸ್ ಕೋರಿಕೆ ಮನ್ನಿಸಿತ್ತೇ ಬದಲಾಗಿ ಮದ್ಯ ಮಾರಾಟದಿಂದ ಶೇಖರಿಸುವ ತೆರಿಗೆ ಭಾರತೀಯರ ಶಿಕ್ಷಣಕ್ಕೆ ಅನುಕೂಲವಾಯಿತು. ಮದ್ಯ ಮಾರಾಟ ತೆರಿಗೆಯ ಹಣಕ್ಕೆ ಬದಲಾಗಿ ಸೈನಿಕ ಖಾತೆಯ ಖರ್ಚು, ಕಡಿತಗೊಳಿಸಿ, ಉಳಿಸಿದ ಹಣದಿಂದ ಭಾರತೀಯರಿಗೆ ಶಿಕ್ಷಣ ಕೊಡಬಹುದೆಂದು ಗಾಂಧೀಜಿಯವರು ಬ್ರಿಟೀಷ್ ಸರಕಾರಕ್ಕೆ ಬುದ್ಧಿವಾದ ಹೇಳಿದರು. ಅಲ್ಲದೆ ಅದನ್ನು ಘೋರವಾಗಿ ಪ್ರತಿಭಟಿಸಿದರು.

"ಗದ್ದಲ ಮಾಡಬ್ಯಾಡ್ರಿ ವೃದ್ಧ- ತರುಣರೆಲ್ಲ ನೀವು ಸ್ಥಬ್ದಾಗಿ
ಕೇಳಬೇಕು ಸಂಪೂರ್ಣ
ಶುದ್ಧವಾದ ಮನಸಿನಿಂದ ಮದ್ಯಪಾನ ಬಿಟ್ಟು ಬುದ್ಧಿವಂತರಾಗಬೇಕು
ಎಲ್ಲ ಜನ ಬೋಡಿ ಸರಾಯದ ಸಂಗ ಮಾಡುವುದಷ್ಟೇ ತಡ
ಪಾಡಾಗಿ ಕಲಿಸುವುದು ತುಡಗತನ
ಹೆಂಡರ ಮಕ್ಕಳ ಬಿಡಿಸಿ ಕುಡಾ ತಿನಲಿಕ್ಕೆ ಹಚ್ಚಿ ಬಂಡಿತ ಮಾಡತದ
ಅಪಮಾನ ಒಟ್ಟಿಗ್ಹೇಳುದೇನೈತಿ ದುಷ್ಟಗುಣದ ಮೆಟ್ಟ
ಇದು ಬಿಟ್ಟು ನಾವು ದೂರ ಇರಬೇಕು ಅದನ
ಬೆರಕಿ ಬಹಳ ಬ್ರಿಟೀಷರು ಬ್ಯಾಡ ಅಂತ ಹೇಳಲಿಲ್ಲ ನೋಡಿ
ನೋಡಿ ನಗತಿದ್ರು ಕುಡಕರನ
ನೀಚ ಸರಾಯದ ಚಟ ಹಚ್ಚಿ ನಮಗೆ ಹುಚ್ಚ ಹಿಡಿಸಿ
ಹೆಚ್ಚು ಮಾಡಿಕೊಂಡ್ರು ತಮ್ಮ ಉತ್ಪನ್ನ
ಸೇಂದಿ ಸರಾಯಿದಂಥೆ ಬರುವ ಒಂಬತ್ತು ಕೋಟಿ ರೂಪಾಯಿ
ಚೀಲ ತುಂಬಿ ತುಂಬಿ ಒಯ್ಯುತಿದ್ದು ಎಲ್ಲ ಹಣ"

ಮದ್ಯಪಾನ ವ್ಯಸನಿಗಳು ಕುಡಿತದೊಂದಿಗೆ ಮಾಂಸ ಭಕ್ಷಣೆನಾರಂಭಿಸಿ. ಅಪಾರ ಹಣ ಖರ್ಚು ಮಾಡುವರು, ಹತ್ತಿರವಿದ್ದ ಹಣ ತೀರಿದ ಮೇಲೆ ದುರ್ವ್ಯಸನ ಮುಂದುವರಿಸುವುದಕ್ಕಾಗಿ ಕಳವು ಮಾಡಲು ಮುಂದಾಗಿ ಮನೆ ಹಾಗೂ ಸಮಾಜದ ಜನಗಳ ಅವಹೇಳನಕ್ಕೆ ಗುರಿಯಾಗುವರು. ಹೀಗೆ ಮದ್ಯಪಾನಿಗಳನ್ನು ತಮ್ಮ ದೇಶಕ್ಕೆ ಕೊಂಡೊಯ್ಯುವುದರಿಂದ ಪಾನನಿರೋಧ ಜಾರಿಗೆ ತರಲು ಮನಸ್ಸು ಮಾಡುವುದಿಲ್ಲವೆಂದು ಸ್ಥಳೀಯ ಪ್ರತಿಭಟನಾಕಾರರು ಸರಕಾರದ ಕುಯುಕ್ತಿಯನ್ನು ಜಗಜ್ಜಾಹೀರಗೊಳಿಸಿ ಮದ್ಯವ್ಯಸನಿಗಳನ್ನು ಎಚ್ಚರಿಸಿದರು.

ದೇಹಾರೋಗ್ಯ ಹಾಗೂ ಆರ್ಥಿಕ ಸ್ಥಿತಿಗತಿಗೆ ಭಾಧಕವಾಗುವ ಸೆರೆ ಸೇಂದಿ ಪಾನೀಯಗಳನ್ನು ತ್ಯಜಿಸುವುದರ ಜೊತೆಗೆ ಅವು ಚಹ, ಕಾಫಿ, ಗಂಜಿ ಮುಂತಾದವುಗಳಿಂದ ಭಾರತೀಯರನ್ನು ತಪ್ಪಿಸಿದರು.

ಜನತೆಯ ಆರೋಗ್ಯ, ಹಣ ಗೌರವ ಹಾಳಾಗುವುದಕ್ಕೆ ಕಾರಣವಾದ ಅಮಲಿನಲ್ಲಿರುವ ಪೇಯಗಳಿಂದ ದೂರಿರುವಂತೆ ಆರೋಗ್ಯಕ್ಕೆ ಹಾನಿಕಾರಕವಾದ ಧೂಮಪಾನದಿಂದಲೂ ದೂರವಿರಬೇಕೆಂದು ಪ್ರತಿಭಟನಕಾರರು ಜನತೆಗೆ ಕರೆಕೊಟ್ಟರು. ಅಲ್ಲದೆ ಸೆರೆ ಸೇಂದಿಗಳ ಗುತ್ತಿಗೆಯ ಸಂದರ್ಭದಲ್ಲಿ ಗುತ್ತಿಗೆ ಹಿಡಿಯದಿರುವಂತೆ ಗುತ್ತಿಗೆದಾರರನ್ನು ಮನವೊಲಿಸುವಲ್ಲಿ ಸ್ವಯಂ ಸೇವಕರು ಯಶಸ್ವಿಯಾಗಿ ಸರಕಾರದ ಆದಾಯಕ್ಕೆ ಕಲ್ಲು ಹಾಕಿ ಪಾನನಿರೋಧ ಯಶಸ್ವಿಯಾಗುವಂತೆ ಶ್ರಮಿಸಿದರು.

ಪಾನನಿರೋಧ ಪ್ರತಿಭಟನೆಗಳ ಮಹಿಳೆಯರು ಪಾಲ್ಗೊಂಡದು ಕುಡಿತದ ಚಟಕ್ಕೆ ಅಂಟಿಕೊಂಡ ತಮ್ಮ ಗಂಡಂದಿರ ಉಪಟಳದಿಂದ ಬೇಸತ್ತಿದ್ದ ಹೆಂಗಸರು, ತಮ್ಮ ಗಂಡಂದಿರ ಹಣ ಗುಣ ಹಾಳಾಗಲಿಕ್ಕೆ ಕಾರಣವಾದ ಸೆರೆ-ಸೇಂದಿಗಳ ಮಾರಾಟ ಸೇವನೆ ಬಗ್ಗೆ ನಡೆಸಿದ ಪ್ರತಿಭಟನೆಯ ಸೊಲ್ಲು ಸ್ವಾಭಾವಿಕವಾಗಿತ್ತು.

### ೫.೫.೨. ಆದಾಯ ತೆರಿಗೆ ನೆಲೆಯ ಪ್ರತಿರೋಧಗಳು

ಭಾರತದಲ್ಲಿ ಬ್ರಿಟೀಷರು ಬರುವದಕ್ಕಿಂತ ಮುಂಚಿತವಾಗಿ ಕಂದಾಯ ವಸೂಲಿ ಮತ್ತು ಆದಾಯ ತೆರಿಗೆಯ ವ್ಯವಸ್ಥೆ ಜೀವಂತವಾಗಿತ್ತು. ಅದಕ್ಕಾಗಿ ಬ್ರಿಟಿಷರು ಇದನ್ನು ಅರ್ಥಮಾಡಿಕೊಂಡು ಭಾರತೀಯರ ಮೇಲೆ ಇದನ್ನು ಅನುಸರಿಸಿದರು. ಬ್ರಿಟೀಷರು ಕಂದಾಯ ಮತ್ತು ಆದಾಯ ತೆರಿಗೆಯನ್ನು ತಮ್ಮ ಆರ್ಥಿಕ ಸುಧಾರಣೆಗೋಸ್ಕರ ಅಲ್ಲದೆ ಅನ್ಯಾಯದಿಂದ ಭಾರತದ ಹಣವನ್ನು ವಸೂಲಿ ಮಾಡಿ ತಮ್ಮ ದೇಶಕ್ಕೆ ಸಾಗಿಸುತ್ತಿದ್ದರು. ಇಲ್ಲಿಯ ರೈತರು ಬೆಳೆದ ಬೆಳೆಯಲ್ಲಿ ಅರ್ಧ ಭಾಗ ಸರ್ಕಾರಕ್ಕೆ ಸಲ್ಲುತ್ತಿತ್ತು. ಇದು ಬ್ರಿಟೀಷರ ಆಳ್ವಿಕೆಯ ಅಂತ್ಯದವರೆಗೆ ಮುಂದುವರೆಯಿತು. ಬೆಳೆಯುವ ಪೈರಿನ ಮೇಲೆ ಕಂದಾಯ ಹಾಕುತ್ತಿದ್ದರು. ಬ್ರಿಟೀಷರು ನೇರವಾಗಿ ನಿಶ್ಚಿತ ಕಂದಾಯವನ್ನು ವಸೂಲು ಮಾಡುವ ಪದ್ಧತಿ ಜಾರಿಗೆ ತಂದರು. ಭೂಮಿ ಆಕ್ರಮಿತಕ್ಕೆ ಸಂಬಂಧಿಸಿದಂತೆ ವಿವಿಧ ಬಗೆಯ ಮಣ್ಣಿನ ಜಮೀನುಗಳಿಗೆ ವಿವಿಧ ಬಗೆಯ ತೆರಿಗೆಯನ್ನು ಪಾವತಿಸಬೇಕಿತ್ತು. ಈ ಭೂಕಂದಾಯ ಮತ್ತು ತೆರಿಗೆ ಪದ್ಧತಿ ಸರ್ಕಾರಕ್ಕೆ ಪ್ರಗತಿ ತರಲು ನೆರವಾಯಿತು. ಶಾಶ್ವತವಾಗಿ ಕಂದಾಯ ಪದ್ಧತಿಯನ್ನು ಜಾರಿಗೆ ತಂದರು. ಗ್ರಾಮೀಣರ ಮೇಲೆ ಗುತ್ತಿಗೆ ಕಂತು ಬಾಡಿಗೆ ರೂಪದಲ್ಲಿ ತೆರಿಗೆಯನ್ನು ವಸೂಲಿ ಮಾಡಲಾಗುತ್ತಿತ್ತು.

ಬರಗಾಲದಲ್ಲಿ ಆದಾಯ ಸಾಮಾನ್ಯವಾಗಿ ಬರುತ್ತಿತ್ತು. ಅಲ್ಲದೆ ಬ್ರಿಟೀಷರ ಹಲವು ಕಂದಾಯ ವಸೂಲಿ ಅಲ್ಲದ ಅನೇಕ ರಾಜಮನೆತನಗಳಿಂದ ಕಪ್ಪು ಹಣವನ್ನು ಕೂಡಾ ನಿಗದಿ ಮಾಡಿ ಒತ್ತಾಯಪೂರ್ವಕವಾಗಿ ಸ್ಥಳೀಯ ಅರಸರಿಂದ ಹಣವನ್ನು ದೋಚುತ್ತಿದ್ದರು. ಈ ತೆರೆದ

ಕೆಲವು ಅವೈಜ್ಞಾನಿಕ ವಿಧಾನಗಳಿಂದ ಬ್ರಿಟೀಷರು ಭಾರತದ ಸಂಪತ್ತನ್ನು ಬಾಚಿಕೊಳ್ಳುವುದನ್ನ ಸ್ಥಳೀಯರು ಗಮನಿಸಿ, ತಮ್ಮಿಂದ ಕಂದಾಯ, ತೆರಿಗೆ ಮತ್ತು ಕಪ್ಪುಹಣವನ್ನು ಕೊಡಲಿಕ್ಕೆ ಅಸಾಧ್ಯವಾದಂತಹ ಸಂದರ್ಭಗಳಲ್ಲಿ ಬ್ರಿಟೀಷರ ವಿರುದ್ಧ ದಂಗೆ ಎದ್ದಿರುವುದನ್ನು ನಾವು ಹಲವು ಲಾವಣಿಗಳ ಮೂಲಕ ಗಮನಿಸಬಹುದು.

### ಆದಾಯ ತೆರಿಗೆ ಮತ್ತು ಕಂದಾಯಗಳ ಕುರಿತು ಲಾವಣಿಗಳು

#### ಆದಾಯ ತೆರಿಗೆ

ಈ ಲಾವಣಿಯನ್ನು ಜಾನ್‌ಫ್ಲೀಟ್ ಅವರು ಸಂಗ್ರಹಿಸಿದ ಲಾವಣಿಗಳನ್ನು ಖ್ಯಾನಹಳ್ಳಿ ರಾಮಣ್ಣನವರು ಐದು ಐತಿಹಾಸಿಕ ಲಾವಣಿಗಳು ಎಂಬ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಬ್ರಿಟೀಷರು ಭಾರತದಲ್ಲಿ ಜಾರಿಗೆ ತಂದಂತಹ ಆದಾಯ ತೆರಿಗೆಯನ್ನು ವಿರೋಧಿಸಿ, ಸ್ಥಳೀಯ ಪ್ರತಿಭಟನಾಕಾರರು ಆ ಆದಾಯ ತೆರಿಗೆಯನ್ನು ವಿರೋಧಿಸಿದ ಒಂದು ಪ್ರತಿಭಟನಾ ಸ್ವರೂಪದ ಚಿತ್ರಣವನ್ನು ಕೊಡುತ್ತದೆ.

"ಏನ ಹೇಳಲಿ ಜನಮ್ದ ಗೋಳಾ
ಇಂಗ್ರಜಿ ಉಪದರ್ ಆದೀತ ಬಾಳಾ
ಬಡವರ ಅಳತಾರೊ ಗಳಗಳಾ
ಮಾಡತಾರ ಚಿಂತಿ

ಮದಲಿಂದ ಕೇಳರಿ ಮಜಕೂರಾ
ಬಂದಾನ ಗಾಡಿನ್ ಸಾಹೇಬ ಸರದಾರಾ
ಕುಂತಕೊಂಡ ತಗದ ಒಂದು ಹುನ್ನಾರಾ
ದುಡ್ಡ ಎಲ್ಲೋ ಈ ಗತಿ

ಗಾಡಿನ್ ಸಾಹೇಬ ಹೇಳತಾನ ತೋರಿ
ಹಸನ ಮಾಡಿಸ್ತೇನ ರಾದಾರಿ
ಇದಕ ನೀನ ಏನ ಅಂತೇರಿ
ಕೆಲಸ ನಿಮದ ಅತಿ

ಪಂಚರ್ ಎಲ್ಲಾರು ಆದಾರಾ ಕಬೂಲಾ
ಮುಂದ್ ಹಿಂಗ್ ಆದೀತ್ ಅನ್ನುದು ತಿಳಿಲಿಲ್ಲಾ
ದುಡ್ಡಿನ ಗರ್ವಿಲಿ ತೆರದಾರ ಹಳ್ಳಾ
ಇಲ್ಲ ಕಕಲಾತಿ

ಆಗ ಹಾಕಿದಾರ ಕೇಳಕಷ್ಟಪಟ್ಟ
ಕಠಿಣ ಬಡವರದ ತುಂಬುದು ಹೊಟ್ಟಿ
ಮಾರಿ ಕೊಟ್ಟಾರೊ ನೂಲುವ ರಾಠಿ
ದುಡ್ಡಿನ್ ಆಸೆ ಹತ್ತಿತ ಸರಕಾರಕ

ಚೌಕಾಶಿ ಬಾಳಾತ ದಿನದಿನಕ
ಸಗಣಿ ಗುಟ್ಟಿ ಮಾಡ್ಯಾರ ಆ ಕ್ಷಮಕ
ಕಟಗಿ ಮಾರತಾರ ಮಾಡಿ ತೂಕ
ಪ್ಯಾಂಡಾರೆರು ಲಮಾಣೆರು ಕಟಗಿ

ಮಾರಿ ತಮ್ಮ ಮಕ್ಕಳ್ನ ಮಾಡತಿದ್ರ ಜೋಕಿ
ಈಗ ಬೇಡುದ ಬಂದತೈ ಬಿಕ್ಕಿ
ಕೆಲಸ ಹೀಂಗ್ ಅತಿ
ಸರಕಾರಕ ದೊರಿತ ಮಸಲತ್ತಾ

ಕರಪಟ್ಟಿ ಹಾಕ್ಯಾರ ತುರತಾ ತುರತಾ
ರೈತರ ದುಡ್ಡ ಎಳುವ ಹಿಕಮತ್ತಾ
ಮಾಡಿದಾರ ಹೀಂಗ
ಸರಕಾರದ ಆತ ಬಲಚೋರಿ

ಲೋಬಿಸಕೊಟ್ಟವಾಯಿದೆ ಮಾಡಿರಿ
ಕೊಕಡಲಿದ್ರ ಬೆಸಕ ಜೋರಿ
ನಡಸರಿ ಅಂಜಿಕಿಲ ದ್ಹಾಂಗೆ
ಕಲೆಕ್ಟರ್ ಸಾಹೇಬ ಬಂದ ಆಗ

ಬಂದು ಇಳದಾನ ಬಂಗಲೇದಾಗ
ಜನರೆಲ್ಲ ಹೋಗಿ ಮುತ್ತಿದಾರ್ ಲವಂಗ
ಶಿವಾ ಇಳದ್ಹಾಂಗ
ವಾಯಿದೆ ಮೀರಿದರ್-ಹಂಚರಿ ಬಡ್ಡಿ

ಮನಿ ಮಾರ ತಗೊಳ್ತ್ರಿ ಲಿಲಾವ ಮಾಡಿ
ಬಾಳ ಮಂದಿ ಕೊಟ್ಟಾರೊ ಗೋಳಿ-ಆಡಿ
ಹೆದರಿ ಮನದಾಗ
ದೈವದವರೆಲ್ಲಾ ಕೂಡಿ ಸಮಸ್ತಾ

ಅರ್ಜಿ ಕೊಟ್ಟಾರೊ ಮಾಡಿ ಮಸಲತ್ತಾ
ಚೌಕಾಶಿ ಮಾಡಿರಿ ದಣೆರಕುಂಟಾ
ಪಟ್ಟಿ ಕುಡೊ ನಮಗ್ ಇಲ್ಲತಾಕತ್ತಾ

ಸಾಹೇಬ ಮನಸಿಗೆ ತರಲಿಲ್ಲಾ
ಈ ಮಾತು ನಮ್ಮ ಕಡೆ ಇಲ್ಲಾ

ಓಡಿಯಾಡಿ ಹೋದವ ಕೈ-ಕಾಲಾ
ಕುಳ ನೀರ ಬಿಟ್ಟ ಕುಂತರ್ ಅಲ್ಲಾ

ಸೌಕಾರ ವಸ್ತೊಡವಿ ತಗದಿಟ್ಟು
ಹರಕ ದೋತರ ಅಂಗಿಯ ತೊಟ್ಟು
ಬಂಗಲೆಕೆ ಹೋಗುವ ನಾಟಿಕಿ ಬಿಟ್ಟು
ಬಡವರಾ ಗತಿ

ಸಾವಕಾರ ಮಾಡ್ಯಾರ ಯದಿಗಬ್ಬ
ಬಿಟ್ಟೀತಂತ ನಮಗೆ ಕರಪಟ್ಟಿ
ಬಾಳಾ ಬಬ್ಬರ್ ಅಣ್ಣಾ ಕರಪಟ್ಟಿ
ಬಂಗಲೇಕ ಓಡಾಡಿ
ಕೂಡಿಕುಂತರಣ್ಣಾ ಸಾವಕಾರಾ
ಕುಂತಂಗ ಕುಂತ್ರೋಕೂಲಿತಳವಾರಾ
ತಮ್ಮತಮ್ಮೊಳಗ ಹಾಕತಾರ ಉಸರಾ
ತೆಳಕ ಮಾರಿ ಮಾಡಿ

ಉರೆಲ್ಲ ಪಟ್ಟಿ ಯತಾರು
ಕಮರಿ ಪ್ಯಾಟ್ಯಾಗ ಬಂದ ಕುಂತಾರು
ಜೋರಿಲಿಂದ ಬದಕ ತರಸ್ಯಾರು
ಜಪ್ತಿ ಮಾಡಿ

ಪಟಗಾರ ಹೇಳ್ಯಾರ ಸುಭೆದಾರಗ
ನೀ ನಮ ಹಡದ ತಂದಿ ಹಾಂಗ
ಸೊಲ್ಪ ಕರಣಾ ಬಂದ ಹೊಟ್ಯಾಗ
ಬಿಡೊ ದಯ ಮಾಡಿ

ತುಮ ಖಾಮದ ಥೇ ಮಾಯ ಖಾಸ್
ಹಮಾರೆ ಪಟ್ಟಿ ಕರೋ ತುಮಿ ಮಾಸ್
ಕಟ್ ಲಾಯಾ ಜೋಳೆನು ಚಾಪ್
ದಿ ದಾ ರಡಿ-ರಡಿ

ಹಲಗಿ ಕುಂಬೀ ಕಿಸಮಿ-ಪಟ್ಟಿ
ಬಾಂಡೆ-ಸಾಮಾನಾ ಜುಮಾನು-ತಾಟಂ
ಲಿಲಾವ ಮಡಸ್ಯಾರು ಕಿಮ್ಮತ ಕಟ್ಟಿ

ಬಾಳೆಕೆಟ್ಟರ್ ಅಣ್ಣಾ ಸರಕಾರಾ
ಬಡವರ ತಂದಾರ ಕಣ್ಣೀರಾ
ಹೆಂತಾ ಯಾಳೇ ತಂದಿ ಈಶ್ವರಾ
ನಮಗ್ಯಾರದಿಲ್ಲ ಆಧಾರಾ
ಲೈರಡ್ಯಾ ಕಹ್ ತರಿ ಸಬಿ ಬೈಟಿ
ಕಾ ಕರೆ ತರ್ ಬಿಚುಕ್ತ ನೈಪಟ್ಟಿ
ಚಡಾಯ್ ಲಾಯಾ ಜವಯನು ತಾಟಿ
ಕರಿ ಕಹ್‌ನ ಚಾತಿ

ಹರಪನಳ್ಳಿ ರಾಯಪ್ಪ ಬರಕೊಟ್ಟಾ
ಇವರಿಗಿ ಹುಟಾಜ್ ಐತಿರಿಯತ್ತಿಪ್ಪಾ
ಬಡವರ ಸುತ್ತ ತಂದನೊ ಕಷ್ಟಾ
ಉಳೀಲಿಲ್ಲ ದರಮಾ

ಕಮರಿ ಪ್ಯಾಟಿ ಮುಸಲಾರ್ ಒಳೆಗಟ್ಟಿ
ಕೊಡುದಿಲ ಹೊಗಂದಾರ ಕರಪಟ್ಟಿ
ಬೇಕಾರ ತಗೋಳ್ರಿ ದಂಡಾ ಕಟ್ಟಿ
ಇದರ ನಿಮ ಹುಕುಮ

ಸುಬೇದಾರ ಸಿಬ್ಬಲಿ ಆದ ಬೆಂಕಿ
ಮನಿ–ಮನಿ ನೋಡ್ಯಾನೊ ಎಲ್ಲಾ ಹುಡಿಕಿ
ತಾಂಬರ ಚೂರ ಕರವಾಯಿ ಸುಟಕಿ
ವೋದದ್ದ ಕೇಳ್ರಿ ನೇಮಾ
ಮುಸಲರ ಎಲ್ಲಾ ಕುಂತಾರ ಕೂಡಿ
ಮಸೂತಿ ವಳಗ ಮುಸಲತಾ ಮಾಡಿ
ಕಾ ಹೈ ಧೂಂಡ್‌ಕರ್ ಲಕಾವ್ ಅರೆ ಲಕಡಿ
ಹಿಂದಕ ಸರಿದಿರಿ ಅನುಮಾನ ಮಾಡಿ
ಮುಸಲತ್ತ ಹಾರಿದಾರ ಹೀಂಗ
ಬೇಸೇಕ ಹೊಡುನು ಬಂದವಂಗ
ಆದ್ರ ಬೇಡಿ ಹಾಕ್ಯಾರ ನಮಗೆ
ಮತ್ತೇನ ಮಾಡ್ಯಾರ ಇದ್ರ ಮ್ಯಾಗ

ಬಡೆ ಕಟ್ಟಿ ನವೆ ರೆ ದಿವಾನಾ
ಸರಕಾರ್–ಕೆ ಸಾತ್ ಮಸ್ತಿ ನಾ ಕರ್ನಾ

ಮಾ ಬಾಸ್ ಕ ರಕೋ ಪಾವಾ ಪಡ್ನಾ
ಕಯಿ ತೊ ಮೇರ್ ಆತಿ.

ಎಲಪಾಟ್ ಸಾಹೇಬ ಬಂದ ಸರದಾರಾ
ಬಡವರ ಮ್ಯಾಲ ಇದ್ದ ಬಲ ಫೇರಾ
ಆಗ ಕುಂತ ಮಾಡ್ಯಾನ ವಿಚಾರಾ
ಕೇಳಿರಿ ಹೀಂಗ

ಆಗ ಮುಸಲರೆಲ್ಲಾರು ಕೂಡ್ಯಾರು
ಮಸಲತ ಮಾಡಿ ಅರ್ಜಿ ಕೊಟ್ಯಾರು
ಬಂಗತಿಕ ಬಂದ ಎಲ್ಲಾರ ಕೂಡ್ಯಾರು
ಕೇಳರಿ ಆಗ

ತುಮ್ ಖಾವಂದ ಅರ್ಜಿಯಿ ಸುನ್ನಾ
ಹಮಾರಿ ಪಟ್ಟಿ ಮಾಪ್ ತುಂ ಕರ್ನಾ
ನಿಂತಕೊಂಡ ನೋಡಿದಾನ ಬಡವರನಾ
ಕರುಣಾ ಹೊದ್ಯಾಗ

ಸಾಹೇಬ ನೋಡಿದಾನ ಸೋಸಿ
ಲಗುಮಾಡಿ ಅರ್ಜಿ ಕುಂಡಂತಾನ ಬರಸಿ
ಅವನ ಹೊಟ್ಯಾಗ ಆತ ಕಸವಿಸಿ
ಬೆಂಕಿ ಬಿದ್ದಾಂಗ

ಹೆಂಗಸರುಟ್ಟಂತ ಹರಕ ಪರಕ ಸೀರಿ
ನಿಂಕೊಂಡ ನೋಡಿದನ ಐಸ್ಸರಿ
ಗರ್ ಮೆ ನೈ ಕರ್ ಕೋ ಜಾರಿ
ಅಳತಾರ ಆವಾಗ
ಆಗ ಸರದಾರಾ ಮ್ಯಾಡ್ಯಾನ ವಿಚಾರಾ
ಕುಂತಿದಾರಣ್ಣಾ ದೊಡ್ಡ ಸಾವತಾರಾ
ಬಡವರ ಮಾಡ್ಯಾರ ನಮಸ್ಕಾರಾ
ಸಾಹೇಬ ಕೇಳಿದ ಕಿವಿಗೊಟ್ಟಾ
ಇವರಿಗಿ ಹುಟಾಜ್– ಅತಿ ಹೇಳ್ರಿ ಎಷ್ಟಾ
ಹಿ ಬಾಳಿ ಈರಬದ್ರಪ್ಪಾ ಬರಕೊಟ್ಟಾ

ಐನೂರ ರೂಪಾಯ್ದು ಅಂದಾಜಿಟ್ಟ
ನೀವ ಹೇಳಬ್ಯಾಡ್ರಿ ಕಿರೆ–ಸುಟ್ಟಾ
ಬಡವರ ನಿಂತಾರ ಮಾರಿ ಮಾರಿಗಿ"ಳ
ನಿಂತ ಬೇಡಿಕೊಂಡಾರೊ ದೊರಗಿ
ಕೊಬ್ಬಂತ ಪಟ್ಟಿ ಕೊಡಿಸಿದಾನ ತಿರಿಗಿ
ಸಾಯೇಬ ಪುಣಿವಾನಾ

"೧೮೬೦ರ ಜುಲೈ ೩೧ರಿಂದ ಜಾರಿಗೆ ಬಂದ ೩೨ನೆಯ ಕಾಯಿದೆಯ ಪ್ರಕಾರ ಆಸ್ತಿ ಉದ್ಯೋಗ, ವ್ಯಾಪಾರ ಮತ್ತು ಕಚೇರಿಗಳ ಆದಾಯಗಳ ಮೇಲೆ ಹಾಕಿದ ಮೂಲ ಸುಂಕವನ್ನು ಕುರಿತದ್ದು ಈ ಲಾವಣಿ, ಯಾವಾಗಲು ತಿಳಿದು ಬರುವಂತೆ ಆದಾಯ ಮತ್ತು ಸನದು ತೆರಿಗೆಗಳ ಬಗ್ಗೆ ಇದ್ದ ಅಪಖ್ಯಾತಿ ಮತ್ತು ಸಂಶಯಗಳನ್ನು ಕುರಿತು ಈ ಹಾಡೂ ಉದ್ದಕ್ಕೂ ಸರಳವಾಗಿ ವಿವರಿಸುತ್ತಾ ಹೋಗುತ್ತದೆ."[೫೦] ಅದರಲ್ಲೂ ಭೂಕಂದಾಯವನ್ನು ಕಟ್ಟುತ್ತಿದ್ದ ಬೇಸಾಯಗಾರರು ಮುಖ್ಯರಾಗಿರುತ್ತಾರೆ. ನೇರ ತೆರಿಗೆಯನ್ನು ಭಾರತೀಯರಿಗೆ ವಿಧಿಸಲು ಅಸಾಧ್ಯವಾಯಿತು. ಹೆಚ್ಚು ಕಡಿಮೆ ಇಂಥಹ ತೆರಿಗೆಗಳು ಜನಸಾಮಾನ್ಯರನ್ನು ರೊಚ್ಚಿಗೆಬ್ಬಿಸಿತು. ಸಾಮಾನ್ಯ ಉದ್ದೇಶಗಳಿಗೆ ಶೇಕಡಾ ಮೂರರಂತೆಯೂ ರಸ್ತೆಗಳು ಕಾಲುವೆಗಳು ಮತ್ತು ಇತರ ರಿಪೇರಿ ಕೆಲಸಗಳಿಗಾಗಿ ಶೇಕಡಾ ಒಂದರಂತೆಯೂ ಸುಂಕಗಳನ್ನು ವಿಧಿಸಲಾಗುತ್ತಿತ್ತು. ರಸ್ತೆ ಮಾಡಿಸುವುದು ಮತ್ತು ಇತರ ರಿಪೇರಿ ಕೆಲಸಗಳನ್ನು ನಡೆಸುವುದು ಮುಂತಾದ ಯೋಜನೆಗಳೆಲ್ಲ ರೈತರ ಹಣವನ್ನು ಸುಲಿಯುವುದಕ್ಕಾಗಿ ಕಂದಾಯ ಅಧಿಕಾರಿ ಒಡ್ಡುತ್ತಿದ್ದ ನೆವಗಳಾಗುತ್ತಿದ್ದವು. ಅಲ್ಲಿ ಕೇವಲ ನಿಯಮಗಳಿದ್ದವು. "ವಾರ್ಷಿಕ ಆದಾಯ ಇನ್ನೂರು ರೂಪಾಯಿಗಳಿಗಿಂತ ಕಡಿಮೆ ಇದ್ದರೂ ತೆರಿಗೆಯನ್ನು ವಿಧಿಸಬೇಕು" ಒಬ್ಬ ಮೊತ್ತ ಕಡೆಯ ಪಕ್ಷ ಆರುನೂರು ರೂಪಾಯಿಗಳನ್ನು ಮುಟ್ಟದಿದ್ದರೂ ಬರೀ ಬೇಸಾಯವನ್ನು ಕಸಬುಗಳಿಂದ ಆದಾಯವಿಲ್ಲದಿದ್ದರೂ ತೆರಿಗೆ ವಿಧಿಸಲ್ಪಡಬೇಕು" ಐದು ನೂರು ರೂಪಾಯಿಗಳಿಗಿಂತ ಕಡಿಮೆ ಆದಾಯಗಳಿಂದ ಶೇಕಡಾ ಎರಡರಷ್ಟು ಸಂಗ್ರಹಿಸಲ್ಪಡಬೇಕು"[೫೧] ಮತ್ತು ಸಾರ್ವಜನಿಕ ಕೆಲಸಗಳಿಗೆ ಶೇಕಡಾ ಒಂದರಷ್ಟು ಇಲ್ಲ ಹೀಗಾಗಿ ಜನರ ಮೇಲೆ ಬಾರವಾದ ಆದಾಯ ತೆರಿಗೆಯನ್ನು ವಿರೋಧಿಸಿದಂತಹ ಅನೇಕ ವೀರರು ನಮ್ಮ ಇತಿಹಾಸದಲ್ಲಿ ಸಿಗುತ್ತಾರೆ ಇವರನ್ನು ನಾವು ಲಾವಣಿಗಳ ಮೂಲಕ ನೋಡಬಹುದು.

"ದುಷ್ಕಟ ಪ್ರೊಫೆಸರನು ದೊಡ್ಡ ಸೇನೆಯನು ಕಟ್ಟುತಪೊರಬನು
ಮಡಿಕಾರಿಗೆ
ಶರಣಾಗತಿಯೇ ಒಳಿತೆನ್ನುತ ಬೋಧಿಸಿದನು ಬೋಪನು ರಾಜನಿಗೆ
ದಿವಾನ ಲಕ್ಷ್ಮೀನಾರ್ಣಪ್ಪನು ತಾಯುದ್ಧಕೆ ಸಿದ್ಧತೆ ನಡೆಸಿದನು
ಬೆದರಿದ ಚಿಕ್ಕವೀರ ರಾಜನು ಫರಂಗಿ ಸೇನೆಗೆ ಸ್ವಾಗತ ನೀಡಿದನು
ಯುದ್ಧವೆ ನಡೆಯದೆ ಮಡಿಕೇರಿ ಕೋಟೆಯು ಪ್ರೊಸರನ ಕೈವಶವಾಯ್ತು

ಚಿಕ್ಕವೀರನು ಬಲಾತ್ಕಾರದಲ್ಲಿ ಕೊಡಗಿನಿಂದ ಓಡಿಸಲಾಯ್ತು
ಪತ್ತೂರು ಸುಳ್ಯ ಸೀಮೆಯ ನಾಡನು ಕೆನರಾಕ್ಕೆ ಸೇರಿಸಲಾಯ್ತು
ಕಂದಾಯವನು ನಗದು ರೂಪದಲ್ಲಿ ಸಲ್ಲಿಸಲಿಕೆ ಶಾಸನವಾಯ್ತು.

ಹೀಗೆ ಕೊಡಗಿನಲ್ಲಿ ಚಿಕ್ಕವೀರನು ತನ್ನ ಆಸ್ಥಾನದಲ್ಲಿದ್ದ ಬ್ರಿಟೀಷರು ಕಂದಾಯವನ್ನು ನಗದು ರೂಪದಲ್ಲಿ ಕೊಡಬೇಕೆಂದು ಶಾಸನಮಾಡುತ್ತಾರೆ. ಆದರೆ ಇದನ್ನು ಕೊಡಲು ಅಸಾಧ್ಯವಾಗಿದ್ದರಿಂದ ದಿವಾನರಾದ ಲಕ್ಷ್ಮೀನಾರಾಯಣನಿಗೆ ಗೊತ್ತಿಲ್ಲದೆ ಕೊಡಗನ್ನು ಬ್ರಿಟೀಷರು ವಶಪಡಿಸಿಕೊಳ್ಳುತ್ತಾರೆ. ಇದರಿಂದ ಕೊಡಗಿನಲ್ಲಿ ಬ್ರಿಟೀಷರ ವಿರುದ್ಧ ಕಂದಾಯವನ್ನು ವಿರೋಧಿಸಿ ಸ್ಥಳೀಯ ಅನೇಕ ಜನರು ಬ್ರಿಟೀಷರನ್ನು ಪ್ರತಿಭಟಿಸುತ್ತಾರೆ. ಇದನ್ನು ಕೊಡಗು ದಂಗೆ ಎಂತಲೇ ಕರೆಯುತ್ತಾರೆ.

ಹೀಗೆ ಅನೇಕ ಸ್ಥಳೀಯ ಸಂಸ್ಥಾನಗಳಲ್ಲಿ ಅಲ್ಲದೆ ಅನೇಕ ಜನಸಾಮಾನ್ಯರು ಬ್ರಿಟೀಷರ ಕಂದಾಯವನ್ನು ವಿರೋಧಿಸಿ ಪ್ರತಿಭಟಿಸಿರುವುದು ಕಂಡುಬರುತ್ತದೆ. ಆದರೆ ಕಂದಾಯಕ್ಕೆ ಸಂಬಂಧಿಸಿದ ಅಂಶಗಳನ್ನು ಹೊಂದಿರುವ ಲಾವಣಿಗಳು ಸಿಗದೇ ಇರುವುದರಿಂದ ಇಷ್ಟನ್ನೇ ಮಾತ್ರ ಇಲ್ಲಿ ಅಧ್ಯಯನ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಡಾ. ಸೈದಾಪೂರ ವೈ.ಎಫ್., **ಉತ್ತರ ಕರ್ನಾಟಕದ ಜನಪದ ವೀರಗೀತೆಗಳು,** ಪು. ೧೧೬.

೨. ಅದೇ, ಪು. ೧೧೬.

೩. ಅದೇ, ಪು. ೧೧೮.

೪. ಅದೇ, ಪು. ೧೧೯.

೫. ಡಾ. ಎಂ.ಎಸ್. ಸುಂಕಾಪುರ, **ಜೀವನ ಜೋಕಾಳಿ, ಭಾಗ-೫,** ಪು. ೧೦೧.

೬. ಅದೇ, ಪು. ೧೦೨.

೭. ಅದೇ, ಪು. ೧೦೩.

೮. ಡಾ. ಎಂ.ಎಸ್. ಸುಂಕಾಪುರ, **ಜನಪದ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ,** ಪು. ೫.

೯. ಅದೇ, ಪು. ೬.

೧೦. ಡಾ. ಸೈದಾಪೂರ ವೈ.ಎಫ್., **ಉತ್ತರ ಕರ್ನಾಟಕದ ಜನಪದ ವೀರಗೀತೆಗಳು,** ಪು. ೧೧೬.

೧೧. ಅದೇ, ಪು. ೧೧೯.

೧೨. ಅದೇ, ಪು. ೧೨೦.

೧೩. ಅದೇ, ಪು. ೧೨೩.

೧೪. ಅದೇ, ಪು. ೧೨೪.

೧೫. ಅದೇ, ಪು. ೧೨೫.

೧೬. ಪ್ರೊ. ಸಿಂಪಿ ವೀರೇಂದ್ರ, **ಸಮಗ್ರ ಜನಪದ ಸಂಪುಟ**, ಪು. ೪೮.

೧೭. ಅದೇ, ಪು. ೫೦.

೧೮. ಅದೇ, ಪು. ೫೧.

೧೯. ಅದೇ, ಪು. ೫೨.

೨೦. ಸೋಮಶೇಖರ ಇಮ್ರಾಪೂರ, **ಜಾನಪದ ಹಾಡುಗಳಲ್ಲಿ ನರಗುಂದ ಬಾಬಾಸಾಹೇಬ**, ಪು. ೨೦.

೨೧. ಅದೇ, ಪು. ೫.

೨೨. ಅದೇ, ಪು. ೨೨.

೨೩. ಡಾ. ಬಿರಾದಾರ ಎಂ.ಜಿ., **ಜಾನಪದ ಜೀವಾಳ**, ಪು. ೪೧.

೨೪. ಅದೇ, ಪು. ೫೦.

೨೫. ಪ್ರೊ. ಮಂಜುನಾಥ ಬೇವಿನಕಟ್ಟಿ (ಸಂ), **ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ**, ಲೇಖನ ವೀರೇಂದ್ರ ಶೀಲವಂತ ಎಂ.ಎ.ಡಿ ಇನ್ ಲೇಖನ ನಿಶಸ್ತ್ರೀಕರಣ ಕಾಯಿದೆ ಮತ್ತು ಹಲಗಲಿ ಬಂಡಾಯ, ಪುಟ ೨೪, ೨೦೦೯.

೨೬. ಪ್ರೊ. ಮಂಜುನಾಥ ಬೇವಿನಕಟ್ಟಿ (ಸಂ), **ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ**, ಲೇಖನ ವೀರೇಂದ್ರ ಶೀಲವಂತ ಎಂ.ಎ.ಡಿ ಇನ್ ಲೇಖನ ನಿಶಸ್ತ್ರೀಕರಣ ಕಾಯಿದೆ ಮತ್ತು ಹಲಗಲಿ ಬಂಡಾಯ, ಪು. ೨೫.

೨೭. ಪ್ರೊ. ಮಂಜುನಾಥ ಬೇವಿನಕಟ್ಟಿ (ಸಂ), **ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ**, ಲೇಖನ ವೀರೇಂದ್ರ ಶೀಲವಂತ ಎಂ.ಎ.ಡಿ ಇನ್ ಲೇಖನ ನಿಶಸ್ತ್ರೀಕರಣ ಕಾಯಿದೆ ಮತ್ತು ಹಲಗಲಿ ಬಂಡಾಯ, ಪು. ೨೫.

೨೮. ಪ್ರೊ. ಮಂಜುನಾಥ ಬೇವಿನಕಟ್ಟಿ (ಸಂ), **ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ**, ಲೇಖನ ವೀರೇಂದ್ರ ಶೀಲವಂತ ಎಂ.ಎ.ಡಿ. ಇನ್ ಲೇಖನ ನಿಶಸ್ತ್ರೀಕರಣ ಕಾಯಿದೆ ಮತ್ತು ಹಲಗಲಿ ಬಂಡಾಯ, ಪು. ೨೫.

೨೯. ಡಾ. ಡಿ.ಎನ್. ಯೋಗೀಶ್ವರಪ್ಪ, **ಕನ್ನಡಿಗರ ಬ್ರಿಟೀಷ್ ವಿರೋಧಿ ಸಶಸ್ತ್ರ ಬಂಡಾಯಗಳು**, ಪು. ೧೧.

೩೦. **ಜಾನಪದ ಹಾಡುಗಳಲ್ಲಿ ನರಗುಂದ ಬಾಬಾಸಾಹೇಬ**, ಪು. ೩೩.

೩೧. ಸೋಮಶೇಖರ ಇಮ್ರಾಪೂರ, **ಕಿತ್ತೂರನ್ನು ಕುರಿತು ಲಾವಣಿಗಳು ಹಾಗೂ ಇತರ ಸಾಹಿತ್ಯ**, ಪು. ೧೮೯.

೩೨. ಲಿಂಗದೇವರ ಹಳೆಮನೆ "ಪ್ರಸ್ತಾವನೆ" ಧೀರಟಿಪ್ಪುವಿನ ಪು. ೩.

೩೩. ಅದೇ, ಪು. ೬

೩೪. ಅದೇ, ಪು. ೮

೩೫. ಎ.ಎಸ್. ನಂಜುಂಡಸ್ವಾಮಿ, **ಭಾರತೀಯ ರಾಷ್ಟ್ರೀಯತೆಯ ವಿಕಾಸ,** ಪುಟ ೧.

೩೬. ಶ್ರೀ ಅರವಿಂದರು, **ಧೈರ್ಯ ಮತ್ತು ರಾಷ್ಟ್ರೀಯತ್ವ,** ಅನುವಾದ ಸಿಂಪಿಲಿಂಗಣ್ಣ, ಪುಟ ೧೦೮.

೩೭. ಶ್ರೀ ಅರವಿಂದರು, **ಧೈರ್ಯ ಮತ್ತು ರಾಷ್ಟ್ರೀಯತ್ವ,** ಅನುವಾದ ಸಿಂಪಿಲಿಂಗಣ್ಣ, ಪುಟ ೧೦೯.

೩೮. ಎ.ಎಸ್.ನಂಜುಂಡಸ್ವಾಮಿ, **ಭಾರತೀಯ ರಾಷ್ಟ್ರೀಯತೆಯ ವಿಕಾಸ,** ಪುಟ ೨೧, ೨೨.

೩೯. ಹರ್ಡೇಕರ ಮಂಜಪ್ಪ, **ಭಾರತೀಯರ ದೇಶಭಕ್ತಿ,** ಪುಟ ೯೦.

೪೦. ಶಿವಾನಂದ ಗುಬ್ಬಣ್ಣ, **ಲಾವಣಿ ಸಾಹಿತ್ಯ ಹಾಗೂ ರಾಷ್ಟ್ರೀಯ ಚಳವಳಿ,** ಪುಟ ೫೧.

೪೧. ದೊಡ್ಡಣ್ಣ ಗದ್ದನಕೇರಿ "ಧೈರ್ಯ ಸಾಹಸ", **ಸಾಂಸ್ಕೃತಿಕ ಅನನ್ಯತೆ ಮತ್ತು ಹಲಗಲಿ ಬಂಡಾಯ,** ಸಂಪಾದಕ ಡಾ. ಮಂಜುನಾಥ ಬೇವಿನಕಟ್ಟಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪುಟ ೨೩೦.

೪೨. ಅದೇ, ಪುಟ ೨೩೧.

೪೩. ಅದೇ, ಪುಟ ೨೩೨.

೪೪. ಅದೇ, ಪುಟ ೨೩೩

೪೫. ಅದೇ, ಪುಟ ೨೩೩

೪೬. ಅದೇ, ಪುಟ ೨೩೪.

೪೭. ಡಾ. ವಿರೂಪಾಕ್ಷಿ ಪೂಜಾರಹಳ್ಳಿ, **ವಸಾಹತುಕಾಲೀನ ಬಳ್ಳಾರಿ ಜಿಲ್ಲೆ,** ಪು. ೫೮

೪೮. ಅದೇ, ಪು. ೫೯

೪೯. ಶಿವಾನಂದ ಗಬ್ಬಣ್ಣವರ್, **ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ,** ಪು. ೯೧

೫೦. ಕ್ಯಾತನಹಳ್ಳಿ ರಾಮಣ್ಣ **ಫ್ಲೀಟ್ ಸಂಗ್ರಹಿಸಿದ ಲಾವಣಿಗಳು,** ಪು. ೫೧-೫೮

೫೧. ಅದೇ, ಪು. ೫೧



ಅಧ್ಯಾಯ : ಆರು

# ಲಾವಣಿಗಳ ಸಾಹಿತ್ಯಿಕ ಅಧ್ಯಯನ

'ಲಾವಣಿ' ಎಂಬ ಜನಪದ ಸಾಹಿತ್ಯ ಪ್ರಕಾರವು ಜನಪದ ಸಾಹಿತ್ಯದ ಒಂದು ಭಾಗವಾಗಿ ಬೆಳೆದುಬಂದಿರುವುದನ್ನು ನಾವು ಲಾವಣಿ ಸಾಹಿತ್ಯದ ಉಗಮದಿಂದಲೂ ನೋಡುತ್ತಾ ಬಂದಿದ್ದೇವೆ. ಒಂದು ಇನ್ನಿತರ ಸಾಹಿತ್ಯ ಪ್ರಕಾರಗಳಾದ ಕಾವ್ಯ, ಕಥೆ, ನಾಟಕ, ಕಾದಂಬರಿ ಮುಂತಾದ ಪ್ರಕಾರಗಳಿಗೆ, ಅವುಗಳದೇ ಆದ ಸಾಹಿತ್ಯಿಕ ಸ್ವರೂಪವಿರುವ ಹಾಗೆ ಲಾವಣಿ ಸಾಹಿತ್ಯಿಕ್ಕೂ ಕೂಡಾ ಅದರದ್ದೇ ಆದ ಸಾಹಿತ್ಯದ ಸ್ವರೂಪ, ಲಕ್ಷಣ, ವೈಶಿಷ್ಟಗಳು ಇರುವುದನ್ನು ನಾವು ಲಾವಣಿಗಳ ಅಧ್ಯಯನದಿಂದ ತಿಳಿಯುತ್ತದೆ. ಹೀಗಾಗಿ ಲಾವಣಿ ಸಾಹಿತ್ಯವು ಒಂದು ಸಾಹಿತ್ಯ ಪ್ರಕಾರವೇ? ಹಾಗಿದ್ದರೆ ಅದರ ಸಾಹಿತ್ಯಿಕ ಸ್ವರೂಪಗಳು ಯಾವುವು ಮತ್ತು ಅದರ ಸಾಹಿತ್ಯ ವೈಶಿಷ್ಟಗಳು ಯಾವುವು ಎಂದು ತಿಳಿಯುವ ಉದ್ದೇಶ ಈ ಅಧ್ಯಯನದ್ದು.

ಲಾವಣಿಗಳು ಕರ್ಣೋಪಕರ್ಣವಾಗಿ ಬದುಕಿ ಬಂದಿವೆ. ಈವರೆಗೆ ವಿವರಿಸಿದ ಶೃಂಗಾರ, ವೀರ, ಹಾಸ್ಯದ ಲಾವಣಿಗಳು ತಮ್ಮ ಉದ್ದಿಷ್ಟವಾದ ರಸವನ್ನು ಪೋಷಿಸುವುದರಲ್ಲಿ ಇಂಚಿತ್ತು ಕಡಿಮೆಯಿಲ್ಲ ಎಂಬುದನ್ನು ಅರಿತೆವು. ಜೀವನಕ್ಕೆ ಸಾಹಿತ್ಯವು ಪ್ರತಿಭೆ, ಸಾಹಿತ್ಯವು ಜೀವನ ಪ್ರತಿಬಿಂಬ ಎಂಬ ಮಾತಿಗೆ ಅವೆಷ್ಟೋ ಲಾವಣಿಗಳು ಉದಾಹರಣೆಯಾಗಿ ಉತ್ತಮ ಸಾಹಿತ್ಯಕ್ಕೆ ಅನೇಕ ಲಕ್ಷಣಗಳನ್ನು ಅನೇಕ ವಿಧವಾಗಿ ಹೇಳಿದ್ದಾರೆ. ಅವೆಲ್ಲವುಗಳನ್ನು ಕ್ರೂಢೀಕರಿಸಿ ಶ್ರೀ ಮಾಸ್ತಿಯವರು ಮೂರು ಮಾತುಗಳಲ್ಲಿ ಮುಗಿಸಿದ್ದಾರೆ. ೧. ಭಾವದ ಸೊಗಸು, ೨. ಮಾತಿನ ಸೊಗಸು, ೩. ರೀತಿಯ ಸೊಗಸು. ಈ ಅಳತೆಗಳಿಂದ ಲಾವಣಿಗಳನ್ನು ಅಳೆದರೆ ಲಾವಣಿಯ ಹಾಡು ಸಾಹಿತ್ಯವೇ ಎಂದು ಸ್ಪಷ್ಟವಾಗಿ ಹೇಳಬಹುದು ಅಥವಾ ಲಾವಣಿಯ ಸಾಹಿತ್ಯಿಕ ಅಧ್ಯಯನಕ್ಕೆ ಒಂದು ಪ್ರತಿಫಲ ಸಿಗಬಹುದು.

"ಲಾವಣಿಗೊಂದು ದೇಹವೇ ಬೇರೆಯಾಗಿರುವಂತೆ, ಆ ದೇಹದ ನಡಿಗೆಯೂ ಬೇರೆಯಿರುತ್ತದೆ. ದೇಹದಲ್ಲಿ ಗುರುತಿಸದಿದ್ದರೂ ನಡಿಗೆಯಲ್ಲಾದರೂ ಗುರುತಿಸಬಹುದು".[೧]

"ಹಸಿ ಹಾಲು ಕರೆವುದು । ಬಸವನ ಹೆರೆವುದು
ಕಸುವನು ತರುವದು । ಹುಸೆಯಲ್ಲ ಗೋವಿನ ತಳಿಯೇ
ಧಾನ್ಯ ಕಾಳು ಬೆಳೆಯಲು । ತನ್ನ ಹೋರಿ ಕೊಡುವದು

ಘನ್ನ ರೋಗ ಕಳೆವುದು । ಅಣ್ಣ ಕೇಳ್ರಿ ಗೋವಿಗೆ ಬೆಲಿಯೇ ॥
ಮಕ್ಕಳಂತೆ ಸಲುಹಲು ಚಿಕ್ಕ ಕೂಸಿನಂತೆ ಅದು
ತಕ್ಕಂತೆ ಕಾಯುವ ನೆಲಿಯೇ" ॥

"ಭಾವದ ಸೊಗಸೆನೊಂದಿಗೆ ರೀತಿಯ ಸೊಗಸೂ ಮಾತಿನ ಸೊಗಸೂ ಸೇರಿದಿದ್ದರೆ ಹಂಡಬಂಡಾಗುವಂತೆ, ಮಾತಿನ ಸೊಗಸೆನೊಂದಿಗೆ ಭಾವ - ರೀತಿಗಳ ಸೊಗಸು ಬೆರೆಯದಿದ್ದರೆ ಹಸಿಬಿಸಿಯಾಗುತ್ತದೆ".[೨] ಸಂಗಣ್ಣ ಕವಿಯ 'ಪುಗಡಿಯಾಟ'ದ ಚಿತ್ರದಲ್ಲಿ ಭಾವ-ರೀತಿ-ಮಾತುಗಳು ನಾ ಮುಂದೆ - ತಾ ಮುಂದೆಯೆನ್ನುತ್ತಲಿರುವುದನ್ನು ಕಾಣಬಹುದು.

"ಪುಗಡಿ ಆಟ ಏನ ಹೇಳಿ?
ತಾಳಗತ್ತ ಮಾಡಿದಾಂಗ । ನಗಾರಿ ನುಡಿದಾಂಗ ।
ದುವುದುಮಿ ಹೊಡಿದಾಂಗ । ಸಾಬತ್ತ ಬಡಿದಾಂಗ ।
ಕೊಂಬಕಾಳಿ ಹಿಡಿದಾಂಗ । ಸಿಡ್ಲ ಮಿಂಚ ಕಡಿದಾಂಗ
ಮಗ್ಗಿ ಪಾಟ್ಲಿ ಹೆಣೆದಾಂಗ । ಸುದ್ಧ ನವಿಲು
ಕುಣಿದಾಂಗ ತಂಡ ತಂಡ ನೆರೆದಿತೋ ಜನಾ" ॥

'ನಾರದ ನೋಡಿಕೇರಿ ಹೇಳ್ಯಾನ ಕಿಡಿಗೇಡಿ' ಎಂಬ ಲಾವಣಿ ಹಾಡನ್ನು ನಿರೀಕ್ಷಿಸಿದಾಗ ಬಟ್ಟೆಗಳನ್ನು ಅಪಹರಿಸಿಕೊಂಡು ಹೋದ ಶ್ರೀಕೃಷ್ಣನನ್ನು ಹುಡುಕುತ್ತಿರುವ ಗೋಪಿಕೆಯರು ನಾರದರು ಕಿಡಿಗೇಡಿತನಕ್ಕೀಡಾದಾಗ ನಡೆಯಿಸಿದ ಗಡಿಬಿಡಿಯಲ್ಲಿ ಯಾವ ತರ ಕೊರತೆಯಿದೆ?

ಹೊಸದಾಗಿ ಅತ್ತೆಯ ಮನೆಗೆ ಹೋದ ಬಾಲಿಕೆಯನ್ನು ನಾಗರಪಂಚಮಿ ಹಬ್ಬಕ್ಕೆಂದು ತವರವರು ಕರೆಯಲಿಕ್ಕೆ ಹೋದಾಗ ತಡವಾದಾಗ ಆಕೆಯು, ಭಾವಿಸಿದ ಭಾವನೆಯನ್ನು ಯಾರೂ ಅಲ್ಲಗಳೆಯುವಂತಿಲ್ಲ.

"ಹಸರ ಡಪಳಾ । ಸೀರಿ ಪಪ್ಪಳಾ । ಜರಕಾಟಿ ।
ನಿತ್ತ ನಿಲಗಿ ಲೇಪಕ್ಕೆ ತುದಿ ಗಟ್ಟಿ ॥
ಮಗ್ಗಿ ತಗಿಸಿ ಒನಿಸಿದ ಕುಬಸಾ ಕರವತಾಕಾಟಿ ।
ಹಾಂಗೆ ಇಟ್ಟಿದನವ್ವ ಗಾಟಿನಾಗ ಕಟ್ಟಿ" ॥

ಸೀರೆ ಕುಪ್ಪಸಗಳ ನೆನಪಿನೊಂದಿಗೆ ಕಳೆದ ಬಾರಿ ಜೊತೆಯಾಡಿದ ಗೆಳತಿಯರೆಲ್ಲ ಸಾಲಾಗಿ ಕಣ್ಣ ಮುಂದೆ ಸುಳಿದಂತಾಗುತ್ತದೆ. ಅದರ ನೆನಹು ಮನಕ್ಕೊಂದು ಸುಖವೊಡ್ಡಿದರೆ ಅವರ ಹೆಸರು ಬಾಯಿಗೆ ಇನ್ನೊಂದು ಸುಖವೊದಗಿಸುತ್ತದೆ.

"ಸುಂದರ ಸಖಿಯರ ಮುಖ । ಎಂದಾರೆ ಕಂಡೇನೇ
ಬಂದಾರೆ ಹೋಗಿರಬೇಕು ಎಲ್ಲಾರು । ನಿನ್ನ ಗೆಳತ್ಯಾರು
ಚಂದರಗೊಂಬಿ ನಿನ್ನ ಎಂದಾರೆ ಕಂಡೇನಾನ ।
ಬಂದ ಬಂದ ಹೋಗಿರಬೇಕು ಬಸಲಿಂಗಿ ಜಾಡರ ಶಿವಲಿಂಗಿ ॥
ಬೆಳದಿಂಗಳ ಆಡಲಿಕ ಬ್ಯಾಸರಕಿ ಇಲ್ಲದಾಕಿ

ಬಂದ ಬಂದ ಕರಿಯಾಕೆ ನಮ್ಮ ರಾಗಿ । ಆರ್ಯಾರನಾಗಿ
ಮೂರುಸಂಜೀಲಿ ಗುಳ್ಳವನ ಬೆಳಗರಾಕ
ಮನಿ ಮನಿ ಕರಿಯಕ್ಕಿ ನಮ್ಮ ಸಂಗಿ । ಮಾಲಗಾರ ನಿಂಗಿ
ಎಲ್ಲ ಗ್ವಾಳೇ ಆಗಿದರ ಬಾಳಿ ಒಸೆ
ಪಂಚಮಿಗೊಮ್ಮೆ ಕೂಡವರ ಪುರಮಾನ್ಸಿ ॥
ಮೇಲಮಾಳಿಗೇರಾಕೆ ನನ್ನ ಕಾಸಿ
ಕೈಯ ಬೀಸಿ ಕರಿಯಾಕಿ ಹುಟ್ಟ ಹಾರ್ಸಿ
ನನ್ನ ಮಾತ ಮೀರವಳ್ಳಿದ್ದ ಕುಂಬಾರ ರೇಷಿ ।
ಇಬ್ಬರ ಮುಂದೆ ಇರುವವರ ನೇಮಿಸೆ". ॥

ಆತುರತೆಯು ಅತಿಶಯಗೊಂಡಾಗ ಕ್ಷಣವು ಯುಗವಾಗುವುದು. ತನ್ನವರೆಲ್ಲ ಇನ್ನವರೆಂಬ ಕಲ್ಪನೆಯ ಕತ್ತಲೆ ಆವರಿಸುವುದು. ಮುಂದುವರಿಯದಂತಾಗಲು ಸಿಕ್ಕವರ ಮೇಲೆ ಹರಿಹಾಯು ವನದೂ, ಹೆರವರ ಮೇಲೆ ತಪ್ಪು ಹೊರಿಸುವನದೂ ಸ್ವಾಭಾವಿಕ. ದುಃಖ ನಿರಾಶೆಗಳಲ್ಲಿ ಮೈದಾಳಿದ ತಮ್ಮ ಗುಣವೆಂದರೆ ಇದೇ. ತನ್ನನ್ನು ಕರೆಯ ಬರುವುದಕ್ಕೇ ಕಲ್ಲು ಹಾಕಿದ ಕೆಲವರು ತವರಿನಲ್ಲಿದ್ದರೆಂದು ಬಗೆದು ಬಸವಳಿಯುವಳು,

"ಅಣ್ಣನ ಹೆಣತಿ । ಆಕೆ ಭಾಳ ಘಾಲ್ಗಡಕಿ
ಆಣಿ ಹಾಕಿ ತರುಬಿ ಕಲಿಸುವರಾ । ಮನಸ ಒಡೆಸಿವಿರಾ
ಸ್ವಾದರತ್ತಿ ಮಗಳೊಬ್ಬಾರೆ । ಹಾದ್ರಗಿತ್ತಿ ಇದ್ದಾಳ್ರೆನ್ವಾ
ಹೊದಿದವರೀಗಿ ಸೇರೂದಿಲ್ಲ ಘಾಲ್ಗಡಿಕಿ । ಇಂಥ ಕಾಲ್ಗಡಿಕೆ ॥
ಚಿಗವ್ವ ನಮ್ಮ ಕಾಕಾನ ಹೇಣತಿ
ಆಕೆ ಬ್ಯಾಡಂತ ಅಂದ್ದಿದ್ದಾಳು ಬೆಂಕಿ । ಮಾರಿ ಗುಟ ಹಾಕಿ
ಮತ್ತೊಬ್ಬಾಕಿ ಸ್ವಾದರತ್ತಿ । ಹೋದರಾರೆಗಿ ಹತ್ತಾದಾ ಬಿಸಿ
ಎಲ್ಲರೊಳಗೆ ರಸಿ ಉಂಡು ತಿಂಗಕ್ಕೆ । ಇದೇ ಕೆಲಸನಾಕಿ
ಅಣ್ಣತಮ್ಮರ ಒಳಗ ನಮ್ಮ । ಸಣ್ಣ ತಮ್ಮನ ಹೇಣತಿ
ಪಣತಿ ಮಾರಿಯಾಕಿ ಆಕಿ ಬೊಟ್ಟಿ ನಿಂದರಜ್ಯಾಳಗಟ್ಟಿ
ತಾಯಿ ತಂದಿ ಇವರು । ನಾಯಿ ಮಾರಿಯವರು
ಯಾಯಾಯಿಲ್ಲದೆ ಮರತಾರ ಬಿಟ್ಟೆ । ಹೊಡಿಸಬೇಕ ಕಟ್ಟಿ
ಆಯಿ ಒಬ್ಬಾಕೆ ಇದಿಮಾಯಿ ಕಾಡತಾಳ ।
ಎಂದ ಹರದೀತ ಇವಳ ರಗಟಿ ಧಡಗಿಯ ಕಟ್ಟಿ"

ಹೀಗೆ ಭಾವ-ರೀತಿ-ಮಾತುಗಳು ರಸಪಾಕಗೊಂಡಾಗ, "ಬಹುವ್ರೀಹಿ ಸಮಾಸವು ಬೇರೊಂದು ವಸ್ತುವನ್ನು ಕಣ್ಣುಂದೆ ಕಟ್ಟುವಂತೆ ಬೇರೊಂದು ಸತ್ವವು ನಮ್ಮನ್ನು ತಿಳಿಸಿ ಅದಾವುದೋ ಲೋಕವನ್ನು ಕಾಣಸುವುದನ್ನು" ನೋಡಬೇಕಾದರೆ, ಉಡುಗೆಗಳನ್ನೆಲ್ಲ ಎತ್ತುಕೊಂಡೊಯ್ದು ಗಿಡವೇರಿ ಕುಳಿತ ಶ್ರೀಕೃಷ್ಣನನ್ನು ಎದೆಮಟ್ಟ ನೀರಿನಲ್ಲಿ ದುಂಡಗೆ ನಿಂತ ಗೋಪಿಯರು ಮಾಡುವ ಪ್ರಾರ್ಥನೆಯನ್ನು ಕೇಳಬೇಕು.

"ಕಯ್ಯ ಮುಗಿದು ನಿನ್ನ ಸ್ತವ | ಮಾಡಲೇವು ಮಾಧವಾ |
ಯದುಕುಲ ಯಾದವ | ನಾರಾಯಣ ಕೇಳವ
ಪರಶುರಾಮ ಭಾರ್ಗವಾ | ರಾಮಚಂದ್ರ ರಾಘವಾ |
ವಾಮನ ನರಸಿಂವ | ಸೋಳಾಸಾವಿರ ಗೋಪೇರದೇವ
ಮತ್ಸ್ಯಕೊರಮವರಾ | ಹಿಡಿದು ಹತ್ತು ಅವತಾರ |
ಪೃಥ್ಯವಿ ಭೂಭಾರ | ಇಳಿಸಿದ ಶ್ರೀವರಾ |
ಸೀರಿ ಕುಡೋ ರಘುವರಾ" ||

ಇಲ್ಲಿಯ ಭಾವ, ಅದು ತೊಟ್ಟ ಮಾತು, ಆ ಮಾತಿನ ರೀತಿ, ಇವೆಲ್ಲ ಒಂದಕ್ಕಿಂತ ಒಂದು ಸೊಗಸಾಗಿ "ಸ್ವರ್ಗದಲ್ಲಿ ಬರೆದಿಟ್ಟ ಕಾವ್ಯವು ಏತರಲ್ಲಿಯೂ ಬೆರೆಯದೆ ಮೊದಲು ಕವಿಯ ಹೃದಯಕ್ಕಿಳಿದು, ಬಾಯಿಗೆ ಏರಿ ಒಂದು ಮಾತಿನ ಕುಡಿಯಾಗಿ ಕೇಳುಗರ ಹೃದಯವನ್ನು ತಲುಪುತ್ತದೆ. ಕವಿತೆಯ ತವರುನಾಡಿಗೊಯ್ದು ವಿವರಿಸ ಹಚ್ಚುತ್ತದೆ.

"ಹಾಡಿನ ಮಟ್ಟು, ಅದರ ಹಿಂದೆ ಕೇಳದಂತೆ ತಟ್ಟುವ ತಾಳ, ಅದರೊಡನೆ ಒಂದಾಗಿ ಸೂಸುವ ಆ ನಾದ ಇವೆಲ್ಲ ಲಾವಣಿಯ ಲಾವಣ್ಯಕ್ಕೊಪ್ಪುವ ಒಡವೆ - ವಸ್ತುಗಳು ಅವೆಲ್ಲಿ ಲಾವಣ್ಯವನ್ನು ಒಪ್ಪುಗೊಡುವ ರತ್ನಾಭರಣಗಳು, ಮೈಯನ್ನು ಸಿಂಗರಿಸುವ ಬಂಗರಾ, ಮಿರುಗಿಸುವ ಜರತಾರಿ ಇವನ್ನೆಲ್ಲ ಕವಿಯ ಪ್ರತಿಭೆಯು ಯೋಗ್ಯವಾಗಿ ಬಳಸಿ ಯಶಸ್ವಿಯಾಗುತ್ತದೆ".೪

"ಬೇಕಾದ್ದು ಉಂಡಾಳು ಉಬ್ಬಾಳು ತೊಟ್ಟಾಳು ಚೂರ ಮಾಡಬೇಡ ನೀ ಚಿಂತಿ ಕುಡುವಚನ, ಇದಕ ಹಾಳು ಏನಂತಿ" ಎಂಬ ಮಾತು ಶಕುನಿಯ ವಿಚಾರಕ್ಕೆ ಒಪ್ಪುವಂತಿದೆ. ಅದರಂತೆ ಬಾಕುಳಿಗೊಂಡ ಸುಭದ್ರೆಯ ಚಿತ್ರವೂ ಆಕೆಯ ಸಾಂತ್ವನಪಡಿಸುವ ಅಭಿಮನ್ಯುವಿನ ಚಿತ್ರವೂ ಯಥಾವತ್ತಾಗಿ ಮೂಡಿ ನಿಂತಿದೆ.

ಅದರಂತೆ "ತೂರಿದಬಾಣಗಳಿಂದ ಮೀರಿದ ದೈತ್ಯ ರುಂಡಕಾರಿದ ರಕ್ತದೊಲು ಕೆಡಹುತ" ಎಂಬ ಮಾತು ಅಭಿಮನ್ಯುವಿನ ವೀರತನವನ್ನು ಮೂಡಿಸುವುದಕ್ಕೆ ಶಕ್ತವಾಗಿದೆ. ಶ್ರೀಕೃಷ್ಣನು ಗೋಪಿಯರೊಡನೆ ನಡೆಸಿದ ಚಲ್ಲಾಟದ ವೈವಿಧ್ಯಗಳು ಕೆಳಗಿನ ಮಾತುಗಳು ಅಚ್ಚೊತ್ತಿದಂತಿರುವವು. ಹಾಸಗೊಂಡು ಮ್ಯಾಗ ಹೊಚಗೊಂಡು ಮಾರಿ ಮುಚಗೊಂಡು ಕೃಷ್ಣ ಮಲಗಿದಾ ಉಬ್ಬ ಶಾಲಿ ಪೀತಾಂಬರ ಸೆಳದ ಮರದ ಮ್ಯಾಲ ಉಳದ ಮೈಯ ಮುಟ್ಟಿದಾ ಗೌಳಗಿತ್ತಿ ಶಂಕ ಹೊಡೆದಾಳ ಶೋಕ ಮಾಡ್ಯಾಳ ಜಿಗಿದು ಹಾರಿದಾ | ಬನದಾಗ ಬಿಂದ್ರ ಎನದಾಗ ಹೋಗಿ ಶ್ರೀಕೃಷ್ಣ ಸ್ವಾಮಿ ಅಡಗಿದಾ ||

ವೀರಭದ್ರದೇವರ ಮೈಕಟ್ಟು, ತೊಟ್ಟ ಕಾಸೆ, ಬಿಗಿದ ಚಲ್ಲಣ, ಅವನ ರೌದ್ರಾವೇಶ ಮೊದಲಾದವುಗಳು ಆತನ ಘನತೆಯನ್ನು ಭಾವಪೂರಿತವಾಗಿ, ಆವೇಶ ಪ್ರೇರಿತವಾಗಿ "ನಿಮ್ಮ ರಟ್ಟಿ ಹೊಟ್ಟಿ ಮಾಡಿ ಕುಟ್ಟಿ ಗಟ್ಟಿ ನೀವು ರಣದ ಒಳಗೆ ಮರದಾ | ಎಂಬ ಲಾವಣಿ ಹಾಡಿನಲ್ಲಿ ಪ್ರತಿಬಿಂಬಿಸುವುದು.

ಈ ಎಲ್ಲ ಉದಾಹರಣೆಗಳಿಂದ ಲಾವಣಿ ಹಾಡುಗಳು ಸಾಹಿತ್ಯದ ಒಂದು ಭಾಗ. ಸಾಹಿತ್ಯಕ್ಕೆ ಇರುವ ಭಾವ ಪ್ರಪಂಚ ಇದರಲ್ಲಿಯೂ ಇದೆ ಎಂದು ಹೇಳಬಹುದು.

*** ಲಾವಣಿ ಸಾಹಿತ್ಯ ಮತ್ತು ರಸ**

ಲಾವಣಿಕಾರರು ಶೃಂಗಾರ ರಸವನ್ನು ಉಚಿತವಾಗಿ ಬಳಸಿ, ವೀರರಸವನ್ನು ಖಚಿತವಾಗಿ, ಗಳಿಸಿ, ಹಾಸ್ಯಾರಸವನ್ನು ಹದವರಿತು ನುರಿಸಿ ತಮ್ಮ ಜೀವನವನ್ನು ಶಾಂತಿರಸದ ನಿಲ್ದಾಣಕ್ಕೆ ತಲುಪಿಸುವರು. ಅಂಥ ಕವಿಗಳ ಉತ್ತರಾಯುಷ್ಯವನ್ನು ಬಲ್ಲವರಿಗೆ, ಅವರಲ್ಲಿ ಋಷಿತೀಜ, ಧೀರತೆಗಳು ಕಾಣಸಿಗುತ್ತವೆ. ಅವರು ಶಾಂತಿರಸದ ನೆಲೆಯಲ್ಲಿ ನಿಂತು ನವರಸಗಳನ್ನು ನವ್ಯವಾಗಿಸುವ ಅವೆಷ್ಟೋ ಕಥಾ ಲಾವಣಿಗಳನ್ನು, ತತ್ವಾಲಾವಣಿಗಳನ್ನು ಹಾಡಿ ಕೇಳುವವರಿಗೂ ತಮ್ಮ ನೆಲೆಯ ಪರಿಚಯ ಮಾಡಿಕೊಡುವುದುಂಟು. ಅಂಥ ಒಂದು ಹಾಡನ್ನು

"ಸೋಹಂ ಶಿವನೆ ನಿನ್ನ ಹೊರತು ದೇವರೇ ಇಲ್ಲ
ನಿನ್ನ ಬಿಟ್ಟು ಯಾವ ದೇವರಿಲ್ಲ
ಕಲ್ಲು ಮಣ್ಣು ಕಟ್ಟಿಗವೇ ಎಲ್ಲ
ಜನನ ಮರಣ ನಿನಗೆರಡೂ ಇಲ್ಲ
ತಾಯಿ ತಂದಿ ನಿನನ್ಯಾರ್ಯಾರಿಲ್ಲ
ನಿನಗಾರೂ ಹಡದೇ ಇಲ್ಲ ||
ಸಾವು ಹೊತ್ತಿಗೆ ಯಾವ ದೇವರಿಲ್ಲ |
ಏನು ಮಾಡತಾವ ಗುಡಿಯಾನರಕಲ್ಲ
ಕೊರಳಿಗೆ ಬಿದ್ದು ಅಳತಾವಲ್ಲ |
ಅಲ್ಲಾನ ಹೊರತು ಬಗಿಹರಿಯುವುದಿಲ್ಲ
ಅವನ ಹೊರತು ದೇವರೇ ಇಲ್ಲ
ಸೋಹಂ ಶಿವನೆ ನಿನ್ನ ಹೊರತು ದೇವರೇ ಇಲ್ಲ" ||

ಶೃಂಗಾರ ಕವಿ ಶ್ರೇಷ್ಠನಾದ ಕವಿಯೇ ಇಷ್ಟೊಂದು ಪ್ರಶಾಂತವಾದ ಶಾಂತಿರಸೋದಧಿಯಲ್ಲಿ ಈ ಸುಬಿದ್ದು ಅವೆಂಥ ತತ್ವರತ್ನಗಳನ್ನು ಕಂಡುಕೊಂಡಿದ್ದಾನೆಂಬುದನ್ನು ಬಗೆದರೆ ಉಚಿತವಾಗಿ ರಸಗಳನ್ನು ಬಳಸಿಕೊಂಡು ಜೀವನವನ್ನು ಉದಾತ್ತಕ್ಕೇರಿಸುವುದು ಅಸಾಧ್ಯವಲ್ಲವೆಂಬ ಮಾತು ಮನದಟ್ಟಾಗುವುದರಲ್ಲಿ ಸಂಶಯವೇ ಇಲ್ಲ.

ಕೇವಲ ಲಾವಣಿಗಳು ಶೃಂಗಾರ ಮತ್ತು ಶಾಂತರಸಕ್ಕೆ ಅಷ್ಟೇ ಸೀಮಿತವಾಗಿಲ್ಲ. ಅವುಗಳನ್ನು ವೀರರಸವನ್ನು ತುಂಬಾ ಸ್ವಾದಿಷ್ಟವಾಗಿ ಪ್ರತಿಬಿಂಬಿಸುವುದನ್ನು ನಾವು ಅವುಗಳಿಂದ ತಿಳಿಯುತ್ತವೆ. ಹೀಗೆ ಲಾವಣಿಗಳಲ್ಲಿ ವೀರರಸವನ್ನು ಸಂಗೊಳ್ಳಿ ರಾಯಣ್ಣನ ಒಂದು ಲಾವಣಿಯನ್ನು ನೋಡೋಣ.

"ರಾಯಣ್ಣನ ದಂಡು ಇಲ್ಲೆ ಐತಿ, ಮಾಡತ್ತೈತಿ
ಅನ್ನ - ಅಡಗಿ ಉರಿಯ ನೋಡಿ ಬ್ರಮಾ ಆಗಿ
ಇಂಗ್ರೇಜರ ಬಿಗಿಲ್ ಮಾಡಿ ಬಂದಾರೋ
ಲಗುಬಿಗಿ ಗುರಿಯ ಹೂಡಿ ಹೊಡೆದಾರೋ

ಕತ್ತಲ ಕವದಿತು ಆಗ ತುಂಬಿ ಹೋಗಿ
ಕೂಗ ಹೊಡೆದೋ ರಾಯಣ್ಣ ಅವನ ದಂಡು
ಬಂತೋವರ್‍ಯಾಗಿ ಎಳ ಎಳದ ಕೊಂದಾರಣ್ಣ
ಇಂಗ್ರೇಜಿಯವರನ್ನು ತುಳ ತುಳದ ಒಬ್ಬೊಬ್ಬರನ್ನು
ಹೊರ ಹೊರಳಿಸಿ ತರದಾರೋ ನಿತ್ತ ಚಿತ್ತರ
ಬಲ್ಲಾಂಗ ಕತ್ತಿಲಿ ರಾಯಣ್ಣ ಕಡದಾನೋ
ಸತ್ತ ಬಿದ್ದಾವ ಹೆಣಾ ರಕ್ತ ಹರಿದಿತೋ ಧರಿಗಿ
ಸುತ್ತ ಗಟ್ಟಿ ಹೊಡೆದಾರೋ ಒಬ್ಬರು ಹೋಗಲಿಲ್ಲ ತಿರುಗಿ"

ಹೀಗೆ ಈ ಲಾವಣಿಯಲ್ಲಿ "ಲಗುಬಗೆಯಿಂದ ಗುರಿಯನ್ನು ನೋಡಿ ಹೂಡಿ ಬ್ರಿಟೀಶರನ್ನು ಹೊಡೆದು ರಾಯಣ್ಣ ಕರಾಗು ಹೊಡೆದು ಬ್ರಿಟೀಶರನ್ನು ಎಳೆ ಎಳೆದು, ತುಳಿ ತುಳಿದು ಹೊಡೆದಿರುವ ಒಂದು ದೃಶ್ಯವನ್ನು ಈ ಲಾವಣಿ ಹೇಳುತ್ತದೆ. ಇದರಲ್ಲಿ ಎಂತಹ ವೀರತ್ವ ರಾಯಣ್ಣನ ಉತ್ಸಾಹದಿಂದ ಅವನ ವೀರತ್ವವನ್ನು ನಾವು ಗಮನಿಸಬಹುದು. ಅದರ ಜೊತೆಗೆನೆ ಇಲ್ಲಿ ರುದ್ರರಸವನ್ನು ನಾವು ಗಮನಿಸಬಹುದು. "ಸತ್ತ ಬಿದ್ದಾವ ಹೆಣಾ ರಕ್ತ ಹರಿದೀತೋ ಧರಗಿ ಸುತ್ತ ಗಟ್ಟಿ ಹೊಡೆದಾರೋ ಒಬ್ಬರು ಹೋಗಲಿಲ್ಲ, ತಿರುಗಿ ಇಲ್ಲಿ ನಾವು ರಾಯಣ್ಣನ ಒಂದು ರೌದ್ರಾವತಾರ ಅದರ ಜೊತೆ ಸತ್ತು ಬಿದ್ದಿರುವ ಇಂಗ್ಲಿಷರ ಹೆಣಗಳ ದೃಶ್ಯ.

ಹೀಗೆ ಲಾವಣಿಗಳಲ್ಲಿ ಕೇವಲ ರಾಯಣ್ಣನ ಒಂದೇ ಲಾವಣಿ ಅಷ್ಟೇ ವೀರ ರಸಕ್ಕೆ ಉದಾಹರಣೆ ಅಲ್ಲ. ವಸಾಹತುಶಾಹಿ ಕಾಲ ಸಂದರ್ಭದಲ್ಲಿ ಬ್ರಿಟಿಷರ ವಿರುದ್ಧ ನಡೆದ ಎಲ್ಲ ಸ್ಥಳೀಯ ಪ್ರತಿಭಟನೆಗಳು ಅವುಗಳನ್ನು ಕುರಿತು ಎಲ್ಲ ಲಾವಣಿಗಳಲ್ಲಿ ನಾವು ಹೆಚ್ಚು ವೀರ, ರಸ, ರೌದ್ರರಸಗಳನ್ನು ಅತಿಹೆಚ್ಚಾಗಿ ಗಮನಿಸಲಾಗುತ್ತದೆ.

*** ಭಾಷಿಕ ಅಧ್ಯಯನ**

ಲಾವಣಿಗಳ ಭಾಷೆಯು ಒಂದು ಸಾಮಾನ್ಯವಾಗಿರತಕ್ಕಂತ ಪ್ರತಿಯೊಬ್ಬರಿಗೂ ಅರ್ಥವಾಗುವಂಥ ಒಂದು ಸರಳ ಭಾಷೆಯಲ್ಲಿ ಅದು ರಚನೆಗೊಂಡಿವೆ. ಲಾವಣಿಗಳ ಮುಖ್ಯ ಉದ್ದೇಶವೇ ಸಂದೇಶವನ್ನು ತಲುಪಿಸುವುದು ಆಗಿರುವುದರಿಂದ ಅವು ಜನರಿಗೆ ಅರ್ಥವಾಗುವ ಹಾಗೆ ಸಾಮಾನ್ಯ ಜನರ ಒಡನಾಟದಲ್ಲಿರುವ ಸರಳ ಪದಗಳು ಜನಪದೀಯ ನುಡಿಗಟ್ಟುಗಳನ್ನೊಳಗೊಂಡ ಒಂದು ಸಾಂಪ್ರದಾಯಿಕ ಶೈಲಿ ಈ ಭಾಷೆಯಲ್ಲಿರುವುದನ್ನು ಗಮನಿಸಬಹುದು.

"ರಾಟಿಯ ತಿರವೂತ ನೂಲನು ತೆಗೆದಾರ
ರಾಷ್ಟ್ರದ ನೀತಿ ತಿಳಿಸ್ಯಾರ | ಮಹಾತ್ಮರು
ಖಾದಿಯ ಉದ್ಧಾರ ಮಾಡ್ಯಾರ
ಖಾದಿಯ ಉಟ್ಟಾರ, ಖಾದಿಯ ತೊಟ್ಟಾರ
ಖಾದಿಯ - ಸುಖದ ಹಾದಿ ಹೇಳ್ಯಾರ | ಮಹಾತ್ಮರು
ಕರಾರ ಬರದ ಕಳುವ್ಯಾರ ||

ಸನ್ ಹತ್ತೊಂಬತ್ತನೂರ ನಾಲವತ್ತೇಳನೆ
ಅಗಷ್ಟು ಹದಿನೈದನೆಯ ತಾರೀಖು
ಶುಕ್ರವಾರ ಉದಯಕ್ಕ ದೊರಕೀತು ಸ್ವಾತಂತ್ರ್ಯ
ಹರದ ಹೋತು ಪಾರತಂತ್ರ್ಯ
ಹಳ್ಳಿಗಳ ಸಡಗರ ನಗರಗಳ ಶೃಂಗಾರ
ಮಕ್ಕಳು, ಮುದುಕರು, ನಾರಿ ಪುರುಷರೆಲ್ಲಾರ
ಧರಿಸ್ಯಾರ ಹೊಸವಸ್ತ್ರ ತರಿಸಿ ಪುಷ್ಪದಹಾರಿ
ಕುಸುಮದ ಮಳೆ ಸುರಿಸ್ಯಾರ ಊರೂರ
ಮಂಗಲ ಮಾಡಿ ಅನ್ನುವರು ಹರಾಹರಾ
ಅನಾಥರಿಗೆ ಆನಂದ ಅನ್ನ ಸಂಪೂರ್ಣ ||

ಹೀಗೆ ಲಾವಣಿಗಳಲ್ಲಿ ಭಾಷಿಕ ರಚನೆ ತುಂಬಾ ಸರಳವಾಗಿರುವಂತದ್ದು. ಜನರ ನಡುವೆ ಹೇಗೆ ಒಂದು ಮಾತು, ಚರ್ಚೆ, ಸಂಭಾಷಣೆ ಇರುತ್ತದೋ ಹಾಗೆ ಒಂದು ಸಂದೇಶವನ್ನು ಜನರಿಗೆ ಸರಳವಾಗಿ ತಲುಪಿಸುವ ಮಾದರಿಯಲ್ಲಿ ಇದು ರಚನೆಗೊಂಡಿದೆ. ೧೯೪೭ ಆಗಸ್ಟ್ ೧೫ರಂದು ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದೆ ಎಂದು ಹೇಳುವುದನ್ನು ಪದ್ಯದ ಸ್ವರೂಪದಲ್ಲಿಯೇ ಸರಳ ಶೈಲಿಯಲ್ಲಿ ಲಾವಣಿಕಾರ ಹೇಳುತ್ತಾನೆ. ಹಾಗೆ ಖಾದಿ, ಉಟ್ಟಾರ, ತೊಟ್ಟಾರ, ಕರಾರ ಇಂತಹ ಸರಳ ಪದಗಳನ್ನು ಬಳಸಿಕೊಂಡು ಲಾವಣಿಕಾರ ಲಾವಣಿಗಳನ್ನು ರಚನೆ ಮಾಡಿದ್ದಾನೆ.

ಮತ್ತೆ ಲಾವಣಿಗಳ ಭಾಷಿಕ ಶೈಲಿಯನ್ನು ನಾವು ಪ್ರಾದೇಶಿಕತೆಗೆ ಅನುಗುಣವಾಗಿ ರಚನೆಯಾಗಿರುವುದನ್ನು ಕಾಣುತ್ತೇವೆ. ಆಯಾ ಪ್ರದೇಶಕ್ಕೆ ಅನುಗುಣವಾಗಿ ಉತ್ತರ ಕರ್ನಾಟಕದ ಭಾಗದಲ್ಲಿಯ ವಿಷಯಕ್ಕೆ ಸಂಬಂಧಿಸಿದ ವಿಷಯ ಆಗಿದ್ದಾರೆ. ಅಲ್ಲಿಯ ಸ್ಥಳೀಯ ಲಾವಣಿಕಾರರು ತಮ್ಮ ಪ್ರಾದೇಶಿಕ ಭಾಷೆಯಲ್ಲಿ ಲಾವಣಿಗಳನ್ನು ರಚನೆ ಮಾಡಿದ್ದಾರೆ. ಇನ್ನು ದಕ್ಷಿಣ ಕರ್ನಾಟಕದ ವಿಷಯಕ್ಕೆ ಸಂಬಂಧಿಸಿದ ವಿಷಯವಾಗಿದ್ದಾರೆ. ದಕ್ಷಿಣ ಕರ್ನಾಟಕದ ಭಾಷಾಶೈಲಿಯಲ್ಲಿ ಲಾವಣಿಗಳು ರಚನೆಯಾಗಿದ್ದಾವೆ. ಹೀಗೆ ಲಾವಣಿಗಳಲ್ಲಿ ಕರ್ನಾಟಕಕ್ಕೆ ಸೀಮಿತಗೊಳಿಸಿದರೆ ಮೈಸೂರು ಕನ್ನಡ, ಮಂಗಳೂರು ಕನ್ನಡ, ಗುಲಬರ್ಗಾ ಕನ್ನಡ, ಬೆಂಗಳೂರು ಕನ್ನಡ, ಧಾರವಾಡ ಕನ್ನಡ ಹೀಗೆ ಭಾಷೆಯ ಉಪಭಾಷೆಗಳನ್ನು ನಾವು ಈ ಲಾವಣಿಗಳಲ್ಲಿ ಗುರುತಿಸಬಹುದು.

ಉದಾ:- "ಸಿಂಧೂರಾಗ ಲಕ್ಷ್ಮಣ ಹುಟ್ಯಾನ
ಬಂಟ ಅನಿಸ್ಯಾನ ಕೊಟ್ಟ ವಚನ ಹುಟ್ಟಿ ತಪ್ಪಿಲಿಲ್ಲ
ಘಟ ಹೋಗುತನಕ ಹಿಡಿದಾ ಹಟ ಬಿಡಲಿಲ್ಲ
ಪಾಂಡವರೊಳಗೆ ಇದ್ದಂಗ ಭೀಮ
ಚೆಲುವ ಚಂದ್ರಾಮ ಥೇಟ ಹೋಳಿಕಾಮ
ರೂಪದಲ್ಲಿ ಡೌಲ ಯಾವ ತಾಯಿ ಹೊಟ್ಟಿಲಿ
ಹುಟ್ಟ್ಯಾನ ಪ್ರಬಲ
ಸರಕಾರಿ ನೌಕರಿ ಮಾಡುತ್ತಿದ್ದ ದರೋಡೆ

ಹುಕುತ್ತಿದ್ದಾ ಓಡುವಲ್ಲಿ ಮುಂದ ಹಿಡಿಯುತ್ತಿದ್ದ
ಮೊಲ ಗುರಿಯಿಟ್ಟ ಹೇಳಿದಲ್ಲಿ ತಪ್ಪದೇ
ಒಗೆಯುತ್ತಿದ್ದ ಕಲ್ಲಾ
ಅಯ್ಯನ ಕಾಲಾಗ ಕದನ ಬಿತ್ತಾ
ಮಾಡಿದನು ಶರತಾ । ಆತೋ ವಿಪರೀತಾ
ಒಂದಿನಾ ಲಕ್ಷ್ಮಣ ತಳ್ಳಿ ಮಾಡಿದಾ
ಅಯ್ಯನ ಮ್ಯಾಲ
ವಾರ ಇದ್ದಲ್ಲಿ ಹೊಂಗೇರಿ ಉಂಟಾ
ಬಂದಾರ ಪಟ್ಟಾ ಬಂದ ಇನ್ಸ್‌ಪೇಟಾ
ಆದ ಬೆಂಕಿ ಲಾಲ । ಕರಕರ ಹಲ್ಲ
ತಿಂತಾರ ಲಕ್ಷ್ಮಣನ ಮ್ಯಾಲ
ಹುಟ್ಯಾನ, ಅನಿಸ್ಯಾನ, ಎಂಬ ಪದಗಳು

ಉತ್ತರ ಕರ್ನಾಟಕದ ಹುಟ್ಟು ಮತ್ತು ಅನಿಸು ಎಂಬ ಎರಡು ಕ್ರಿಯಾ ಪದಗಳನ್ನು ಬಳಸುವ ಶೈಲಿಯು ಇಲ್ಲಿ ಕಂಡುಬರುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಹುಟ್ಟಿದ್ದಾನೆ ಮತ್ತು ಅನಿಸುತ್ತಾ ಇದೆ ಎಂದು ಬಳಸಿದರೆ ಅಲ್ಲಿ 'ಯಾನ' ಎನ್ನುವ ಪ್ರತ್ಯಯವನ್ನು ಬಳಸಿ ಹುಟ್ಯಾನ ಅನಿಸ್ಯಾನ ಎಂದು ಬಳಸಿರುವುದು ಕಂಡುಬರುತ್ತದೆ. ಹೀಗೆ 'ಶರತ್', 'ಕರಕರ', 'ಖರೆ' ಎನ್ನುವ ಪ್ರಾದೇಶಿಕ ಪದಗಳಾದ ಇವು ಉತ್ತರ ಕರ್ನಾಟಕದ ಪ್ರಾದೇಶಿಕ ಪದಗಳು ಹೀಗೆ ಈ ಲಾವಣಿ ಸಿಂಧೂರ ಲಕ್ಷ್ಮಣನು ಉತ್ತರ ಕರ್ನಾಟಕದವನು ಆಗಿರುವುದರಿಂದ ಅಲ್ಲಿಯ ಸ್ಥಳೀಯ ಲಾವಣಿಕಾರರು ಈ ಲಾವಣಿಯನ್ನು ರಚನೆ ಮಾಡಿರುವುದರಿಂದ ಸ್ಥಳೀಯ ಪ್ರಾದೇಶಿಕ ಭಾಷಾಶೈಲಿಯಲ್ಲಿ ಇದು ರಚನೆಯಾಗಿರುವುದು ಕಂಡುಬರುತ್ತದೆ.

ಇನ್ನು ದಕ್ಷಿಣ ಕರ್ನಾಟಕದಲ್ಲಿ ಅಂದರೆ ಟಿಪ್ಪುಸುಲ್ತಾನನು ದಕ್ಷಿಣ ಕರ್ನಾಟಕಕ್ಕೆ ಸೀಮಿತವಾದ ಶ್ರೀರಂಗಪಟ್ಟಣದಲ್ಲಿ ಆಳಿ ಹೋಗಿರುವುದರಿಂದ ಅವನಿಗೆ ಸಂಬಂಧಿಸಿದ ಲಾವಣಿಗಳಲ್ಲಿ ಸಂಪೂರ್ಣ ದಕ್ಷಿಣ ಕರ್ನಾಟಕದ ಭಾಷಾ ಶೈಲಿಯಲ್ಲಿ ಅದು ರಚನೆಯಾಗಿರುವುದನ್ನು ನಾವು ಕಾಣುತ್ತೇವೆ.

"ಬಳಸಿರೆ ಮಿಗಿಲು ಪರಾಕ್ರಮದುನ್ನತ ಧೀರರ ಪರಿವಾರ
ಎಷ್ಟು ಬಿಂಕದಿ ಬೀಗಿತ್ತಾತನ ಸಾಮ್ರಾಜ್ಯಾಧಿಕಾರ
ಕಮಲನಯನ ತನ್ನ ಮುಗುಳ್ ನಗೆಯನು
ಹಿಂದೆಗೆದ ಒಡನೆ ಆ ಸಾಮ್ರಾಜ್ಯಾದ ವೈಭವವಲ್ಲಿ
ಹೋಯಿತು ದಡಬಡನೇ

ಕೊಡಗು ಕಡಪ ಮೇಣ್ ಕೊಂಕಣವೆಂಬಾ
ನಾಡುಗಳಾಳುವರು, ಒಡೆಯರು, ಹಳಮೆಯ
ಕೀರ್ತಿಯ ಕುಡಿಗಳು, ನೃಪಕುಲಭೂಷಣರು

ಕಂಡು ನಿನ್ನ ಕೈನೀಡಿದರಾಯುಧವೆಲ್ಲನಕೆಳಗಿಟ್ಟ
ಹುಬ್ಬುಗಂಟ ಕಂಡೊಡನೆಯೆ ಮಣಿದರು ನೆಲದಲಿ ಮೈಯಿಟ್ಟು"

ಈ ಲಾವಣಿ ಸಂಪೂರ್ಣವಾಗಿ ದಕ್ಷಿಣ ಕರ್ನಾಟಕದ ಭಾಷಾಶೈಲಿಯಲ್ಲಿ ಇದೆ. 'ಮೈಯಿಟ್ಟು', 'ನೆಲದಲ್ಲಿ, 'ಬೀಗಿತ್ತು', 'ಹೋಯಿತು' ಹೀಗೆ ಎಲ್ಲ ಪದಗಳನ್ನು ಬಳಸುವ ಶೈಲಿ ದಕ್ಷಿಣ ಕರ್ನಾಟಕದ ಶೈಲಿ ಎಂದು ಗುರುತಿಸಬಹುದು. 'ಹೋಯಿತು' ಎನ್ನುವುದನ್ನು ಉತ್ತರ ಕರ್ನಾಟಕದವರು 'ಹೊಯ್ತು' ಎಂದು ಬಳಸಿದರೆ ದಕ್ಷಿಣ ಕರ್ನಾಟಕದವರು 'ಹೋಯಿತು' ಎಂದು ಬಳಸುತ್ತಾರೆ. ಇಂತಹ ಭಾಷಾ ಬಳಕೆ ಪ್ರಾದೇಶಿಕ ಬಳಕೆಯನ್ನು ನಾವು ಗುರುತಿಸಲಾಗುತ್ತದೆ.

ಇನ್ನು ಅನ್ಯಭಾಷೆಯ ಪದಗಳನ್ನು ಮತ್ತು ಅನ್ಯಭಾಷೆಯನ್ನು ಲಾವಣಿಗಳಲ್ಲಿ ಅಲ್ಲ, ಅಲ್ಲಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ.

ಲೈ ರಡ್ಯಾ ಕಹ್ ತರಿ ಸಬಿ ಬೈಟಿ
ಕಾ ಕರೆ ತರ್ - ಬಿ ಚುಕ್ತ ನೈಪಟ್ಟಿ
ಚಡಾಯ್ - ಲಾಯಾ ಜವಯನು - ತಾಬಿ
ಕರಿ ಕಹನ್ ಬೌತಿ

ಬಡೆ ಕಟ್ಟೈ ನವೆರೆ ದಿವಾನಾ
ಸರಕಾರ್-ಕೆ ಸಾತ್ ಮಸ್ತಿ ನಾ ಕರ್ನಾ
ಮಾ ಬಾಪ್ ಕರಕೋ ಪಾವಾ ಪಡ್ನಾ
ಕಯಿ ತೊ ಮೇರ್ ಆತಿ

ತುಮ್ ಜಾವಂದ ಅರ್ಜಿ ಯಿ ಸುನ್ನಾ
ಹಮಾರಿ ಪಟ್ಟಿ ಮಾಪ್ ತುಂ ಕರ್ನಾ
ನಿಂತಕೊಂಡ ನೋಡಿದಾನ ಬಡವರನಾ
ಕರುಣ ಹೊಟ್ಯಾಗ

ಹೀಗೆ ನಾವು 'ಆದಾಯ ತೆರಿಗೆ' ಎಂಬ ಫ್ಲೀಟ್ ಸಂಗ್ರಹಿಸಿದ ೫ ಐತಿಹಾಸಿಕ ಲಾವಣಿಯಿಂದ ನಾನು ಈ ತೆರದ ಹಿಂದಿ ಮತ್ತು ಉರ್ದು ಮಿಶ್ರಿತ ಪದಗಳಿಂದ ಕೂಡಿದ ಈ ಲಾವಣಿಯನ್ನು ನೋಡಬಹುದು. ಅಂದರೆ ಲಾವಣಿಗಳು ಕೇವಲ ಕನ್ನಡದಲ್ಲಿ ಮಾತ್ರ ರಚನೆ ಆಗಿಲ್ಲ. ಎಲ್ಲಾ ಭಾಷೆಯ ಸಹಕಾರನು ಇದಕ್ಕೆ ಇದೆ ಎಂದು ತಿಳಿಯುತ್ತದೆ. ಅಂದರೆ ಲಾವಣಿಗಳು ಜನಸಾಮಾನ್ಯರ ಮಧ್ಯೆ ಇರುವುದರಿಂದ ರಚನೆ ಆಗಿರುವುದರಿಂದ ಅವರು ಯಾವ ತಮ್ಮ ಪ್ರಾದೇಶಿಕ ಭಾಷೆಯನ್ನು ಮಾತಾಡುತ್ತಿದ್ದರೂ ಅದೇ ಭಾಷೆಯಲ್ಲಿನೇ ಅದು ರಚನೆಯಾಗಿದೆ ಎಂದು ಹೇಳಬಹುದು.

ಲಾವಣಿಗಳು ಈಗಾಗಲೇ ಹೇಳಿದ ಹಾಗೆ ಜನಸಾಮಾನ್ಯರ ಮಧ್ಯ ರಚನೆಯಾಗಿರುವುದರಿಂದ ಅವು ಆಯಾ ಪ್ರದೇಶಕ್ಕೆ ಅನುಗುಣವಾದ ಕೆಲವು ಗಾದೆಗಳನ್ನು ಬಳಸಿಕೊಂಡು ಲಾವಣಿಗಳನ್ನು

ರಚನೆ ಮಾಡಿರುವುದು ತಿಳಿಯುತ್ತದೆ. ಇವು ಒಬ್ಬರ ಬಾಯಿಂದ ಇನ್ನೊಬ್ಬರಿಗೆ ನೇರವಾಗಿ ಸಂದೇಶವನ್ನು ತಲುಪಿಸುವ ಉದ್ದೇಶ ಇಟ್ಟುಕೊಂಡು ಲಾವಣಿಗಳು ರಚನೆಯಾಗಿರುವುದರಿಂದ ಇವು ಆಡುಮಾತಿನ ಹಾಗೆ ಕಂಡುಬರುತ್ತವೆ. ಅದರ ಜೊತೆಗೆ ಮಾತಾಡುವಾಗ ಹೇಗೆ ಗಾದೆಗಳನ್ನು ಬಳಸಿಕೊಂಡು ಮಾತಿಗೆ ಒಂದು ಶಕ್ತಿಯನ್ನು ಒದಗಿಸುತ್ತೇವೆ ಹಾಗೆ ಇಲ್ಲಿಯು ಕೂಡಾ ಲಾವಣಿಗಳಲ್ಲಿ ಗಾದೆಯನ್ನು ಬಳಸಿಕೊಂಡು ಹೇಳುವ ವಿಷಯಕ್ಕೆ ಒಂದು ಶಕ್ತಿಯನ್ನು ಕೊಟ್ಟಿರುವುದು ಕಂಡುಬರುತ್ತದೆ.

ಉದಾ:- “ಹಲ್ಲ ಕಿತ್ತಿದಾ ಹಾಂವಿನ ಪರಿಯು ನಮಗ ಆದಿತ್
ಅಲ್ಲಾ ರಂಡಿ ಮುಸುಕ ಹಾಕಿ ತಿರಿಗಿದರ ನಮ
ಮಾನ ಉಳಿಯುವುದಿಲ್ಲಾ”

“ಮಗ್ಗಲದಾಗಿನ ಹೇಣತಿ ಕೊಟ್ ಆಂಗ ಆಗಿ
ಹೇಡಿ ಆದೇವ್ ಅಲ್ಲಾ ಸತ್ತ ಹೆಣಕ ಶೃಂಗಾರ
ಮಾಡಿದ ಪರಿ ಆದಿತ್ ಅಲ್ಲಾ”

“ಪಕ್ಕಾ ಕಿತ್ತ ಪಕ್ಷಿ ಗತಿ ಆಗಿ ಚಿಂತಿ ಆದರ ಮಾನಕ”

ಹೀಗೆ ಗಾದೆಗಳನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ. “ಹಲಗಲಿ ಬೇಡರ ದಂಗೆ” ಎಂಬ ಫ್ಲಿಟನ ಐತಿಹಾಸಿಕ ಲಾವಣಿಯಲ್ಲಿ ಅವರು ಬ್ರಿಟೀಶರ ನಿಶ್ಯಸ್ತ್ರೀಕರಣ ಕಾಯಿದೆಯನ್ನು ವಿರೋಧಿಸಿ ಬ್ರಿಟೀಶರನ್ನು ಪ್ರತಿಭಟಿಸುವ ಸಂದರ್ಭದಲ್ಲಿ ಬ್ರಿಟೀಶರ ಒಂದು ಶೋಷಣೆಯನ್ನು ವಿರೋಧಿಸಿ ಏನು ಮಾಡಲಿಕ್ಕೆ ಆಗಲಿಲ್ಲ. ಅದಕ್ಕೆ “ಹಲಕಿತ್ತಿದ ಹಾವಿನತರ ಆಗಿದೆ ಎಂದು ಬೇಡರು ಹೇಳುವಂತ ಒಂದು ಸಂದರ್ಭವನ್ನು ಕವಿ ಇಲ್ಲಿ ಹೇಳುತ್ತಾನೆ. ಇನ್ನು “ರಂಡಿ ಮುಸುಕ ಹಾಕಿ” ತಿರುಗಿದರ ನಮ್ಮ ಮಾನ ಉಳಿಯುವುದಿಲ್ಲ ಎಂದು ಬೇಡರು ಹೇಳುತ್ತಾರೆ.

“ಮಗ್ಗಾಲದಾಗಿನ ಹೇಣತಿ ಕೋಟ್, ಅಂಗ ಆತಿ” ಅಂದರೆ ಬೇಡರು ತಮ್ಮ ಶಸ್ತ್ರಾಸ್ತ್ರಗಳನ್ನು ಬ್ರಿಟೀಶರಿಗೆ ಕೊಟ್ಟರೆ ಪಕ್ಕಕ್ಕೆ ಮಲಗಿದ ಹೆಂಡತಿಯನ್ನು ಕೊಟ್ಟಂಗೆ ಆಗುತ್ತೆ ಎಂದು ಹೇಳುತ್ತಾರೆ. ಅಂದರೆ ಅವರಿಗೆ ಜೀವನಕ್ಕೆ ಹೆಂಡ್ತಿ ಎಷ್ಟು ಮುಖ್ಯಾನೋ ಈ ಶಸ್ತ್ರಾಸ್ತ್ರಗಳು ಅಷ್ಟೇ ಮುಖ್ಯವಾಗಿದಿದ್ದು.

“ಪಕ್ಕ ಕಿತ್ತ ಪಕ್ಷಿ ಗತಿ” ಆಗಿದೆ ಎಂದು ಹೇಳುವ ಮೂಲಕ ಬೇಡರು ಎಷ್ಟೋ ಶೂರರು ಇದ್ದರೂ ಅವರಿಂದ ಏನು ಮಾಡಲಿಕ್ಕೆ ಆಗಲಿಲ್ಲ. ಇವರಿಗೆ ಪಕ್ಷಿಗೆ ರೆಕ್ಕೆಗಳು ಎಷ್ಟು ಮುಖ್ಯವೋ ಅವುಗಳನ್ನು ತೆಗೆದರೆ ಅವುಗಳಿಗೆ ಹಾರಾಡಲಿಕ್ಕೆ ಆಗುವುದಿಲ್ಲವೆ ಹಾಗೆ ಬೇಡರಿಗೆ ಶಸ್ತ್ರಾಸ್ತ್ರಗಳು ಅಷ್ಟೇ ಮುಖ್ಯವಾಗಿದ್ದವು ಎಂದು ಹೇಳುವ ಸಂದರ್ಭದಲ್ಲಿ ಇದನ್ನು ಹೇಳಲಾಗಿದೆ.

ಲಾವಣಿಗಳಲ್ಲಿ ಕೆಲವು ನುಡಿಗಟ್ಟುಗಳನ್ನು ಬಳಸಿಕೊಂಡಿರುವುದು ಕಂಡು ಬರುತ್ತವೆ.

“ಅನ್ಯಾಯಗಳು, ತಗಿಬೇಕು ಸನ್ಮಾರ್ಗ ಹಿಡಿಬೇಕ
ದುಡಿಯುವರ ದಾದ ಚೈನಿ ಹೊಡಿಯುವವರಿಗಿಲ್ಲ ಇರುವುದಿಲ್ಲ”

"ಬಂದದ್ದೆಲ್ಲ ಬರಲಿ ಉಡಿಯಲ್ಲಿ ಮೂರು
ಕಲ್ಲು ಇರಲಿ" ನಾವು ಹಿಂದ ಇರತೇವಂತ
ಹೇಳಿ ಚಂದವಾಗಿ ಬೋದ ಮಾಡಿ ನಾನಾ
ತರ ಹಳ್ಳಿಮಂದಿಗಲ್ಲಿ ಹುರುಪ ಹಾಕಿ
ಬೆರಕಿಯವರ ಬಾಳ ತೊಂದರೆಗೆ ಹಾಕಿದಾರ
ಮೋಸದಿಂದ ಪೂರ ಭಲಲಲ ಶಹಬಾಳ್
ಎಂದು ಹೆಳ್ಯಾನ ಉಬ್ಬಿಸಿ ಕೊಳ್ಳಕ ಹಾಕಿ
ಮಲವಿನೊಳು ಹಾಕಿದಾರ ಬಿಲಗಾರರ ಇವರು ನೆಲೆಹೀನರ"

ಹೀಗೆ ಈ ಮುಂಚೆಗೆ ಹೇಳಿದ ಹಾಗೆ ಲಾವಣಿಗಳು ಮಾತಿನ ದಾಟಿಯಲ್ಲಿ ಇರುವುದರಿಂದ ಅವು ಮಾತುಗಳಲ್ಲಿ ಸಂಭಾಷಣೆಯಲ್ಲಿ ಸಾಮಾನ್ಯವಾಗಿ ಬಳಸುವ ಎಲ್ಲ ನುಡಿಗಟ್ಟುಗಳನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ.

*** ಛಂದಸ್ಸು ಮತ್ತು ಲಾವಣಿಗಳು**

ಲಾವಣಿಗಳು ಕೂಡಾ ಛಂದಸ್ಸನ್ನು ಹೊರತುಪಡಿಸಿ ರನಚೆ ಆಗಿಲ್ಲ. ಇದು ಜನಸಾಮಾನ್ಯರ ಮಧ್ಯೆ ಜನರಿಂದ ಜನರಿಗೆ ಬಾಯಿಯ ಮೂಲಕ ತಲುಪಿದರು ಸಹಿತ ಲಾವಣಿಗಳು ಛಂದೋಬದ್ಧವಾಗಿನೆ ರಚನೆಯಾಗಿರುವುದು ಕಂಡುಬರುತ್ತದೆ.

ಲಾವಣಿಗಳು ಛಂದಸ್ಸಿನ ಪ್ರಕಾರಗಳಾದ ತ್ರಿಪದಿ, ಚೌಪದಿ, ಸಾಂಗತ್ಯ ಮುಂತಾದ ಛಂದಸ್ಸು ಪ್ರಕಾರಗಳಿಂದ ಕೂಡಿವೆ ಎಂದು ಹೇಳಬಹುದು.

**ಚೌಪದಿ** :- ಲಾವಣಿಗಳನ್ನು ನೋಡಿದಾಗ ಕೆಲವು ಲಾವಣಿಗಳು ಸಾಂಗತ್ಯ ರೂಪದಲ್ಲಿರುವುದು ತಿಳಿಯಿತು.

|"ಮತ್ತೊಂದು ಮಾಡ್ಯಾರ ಮಸಲತ್ತ
ನೋಡ ಬೇಕ
ಸಂಗ್ಯಾ ಪರಿಷ್ಯಾ ಇಬ್ಬರು ಕೂಡಿ
ನಗತ ಮಾತಾಡಿ"

ಈ ಲಾವಣಿಯನ್ನು ಅದರ ಛಂದಸ್ಸು ಸ್ವರೂಪವನ್ನು ಗಮನಿಸಿದಾಗ ಇದು ಸಾಂಗತ್ಯ ಅಂದರೆ ಚೌಪದಿ ರೂಪದಲ್ಲಿ ಇರುವುದು ಕಂಡುಬರುತ್ತದೆ. ಇನ್ನು ಮೂರು ಸಾಲಿನ ಲಾವಣಿ

ಹಂಪಿಯ ಶರಣರಿಗೆ ಸಿಂಪಾದ ಪಟ್ಟಣ
ಕಂಪಲಿಯ ನೆರಳು ಶರಣರಿಗೊ | ತುರುಕರಿಗೆ
ಕಂಪನವು ಕೇಳಿ ಎದಿಯಾಗೊ ||

ಕಂಪsಲಿರಾಯsಗ ಹಂಪಿ ವಿರುಪನ ಶಾಪ
ದಂಪತಿಗೆ ಬಂತೊ ವನವಾಸೊ | ಕಂಪೆಲಿಯು
ಸಿಂಪಾಗಿ ಸಿಡಿದು ಹಾಳಾತೊ ||

ಚೆಚ್ಚಪ್ಪ ಲಿಂಗಯ್ಯ, ಹೆಚ್ಚಿನ ಮಂತ್ರಿಗಳು
ರೊಚ್ಚಿನ ಕತ್ತಿರಣಕಟ್ಟಿ । ತುರುಕರು
ಹುಚ್ಚೆದ್ದು ಓಡಿ ರಣ ಬಿಟ್ಟು

ಮಾನವನ ಕಳಕೊಂಡು, ಬಾನರೋಡಿದರಂದು
ಖೂನಿ ಮಾಡುವದಕೆ ಮಾತಾಗಿ । ಹೆಣ್ಣೆದೆ
ಮಾನಗಾಡ್ಯಾಗಿ ಒಳಸಂಚು ॥

ಕೊಂಕಣದ ಮಾತಂಗಿ, ಬಿಂಕ ಮಾದರ ಹುಡುಗಿ
ಕೊಂಕ ಗುಣ ಹೆಣ್ಣು ತುರುಕರಿಗೆ । ಮನಸೋತು
ವ್ರಂಕೆ ಹಾಕ್ಯಾಳೋ ಕಂಪಲಗೋ ॥

ರಾಮರಾಯನು ಬಿದ್ದ, ನಾಮ ನಿರ್ನಾಮಾತೊ
ಧನಾಮ ಧೂಮಾತೊ ಕಂಪಲಿಯೇ । ನಾರೇರ
ಹೇಮಕೊಂಡಾತೊ ಕಿಚ್ಚಾತೊ ॥

ಏಳುರಾಯರ ಗುಡ ಗಾಳರಿಗೆ ಕಾಟಣ್ಣ
ತಾಳದಲೆ ಕೊಂದ ಮಾತಂಗಿ । ಓಡೆಯಾಗ
ಕಾಳಗದಿ ಕಾದು ರಣರೌದ ॥

ಕಂಪ್ಕಲಿ ಹಾಳಾಗಿ, ಕೊಂಪೆಯಾಯಿತು ನಸೇಬ
ಸಂಪತ್ತು ಹೋತು ತುರುಕರಿಗೂ ಲಿಂಗಯ್ಯ
ಜಂಪೆಲ್ಲ ಮಡಿದ ರಣದಾಗೊ ॥

ಹೀಗೆ ಲಾವಣಿಗಳು ಕೆಲವು ಮೂರು ಮೂರು ಸಾಲುಗಳಿಂದ ಕೂಡಿ ಕ್ರಮಬದ್ಧವಾಗಿ ಮತ್ತು ತಾಳ ಲಯಗಳಿಂದ ಕೂಡಿರುವುದು ಕಂಡುಬರುತ್ತದೆ.

ಇನ್ನು ಕೆಲವು ಲಾವಣಿಗಳಿಗೆ ಸಾಲುಗಳಿಗೆ ಮಿತಿನೇ ಇಲ್ಲ. ಸಾನೆಟ್ ಮತ್ತು ಸರಳ ರಗಳೆಯನ್ನು ಹೋಲುವ ಹಾಗೆ ರಚನೆಗೊಂಡಿವೆ.

ದಂಡಿ ಹುಲ್ಲು ಮಾರವರಂಗ ಸೊಂಗ ತಗೊಂಡಾರ
ಗುಣವಂತಾ । ಹುಲ್ಲು ಬೇಕರೇನೋ ಅಂತ
ನಡದ ಸುತ್ತ ಕೇಳೂತಾ
ದಂಡಿನ ಮಂದಿಗೆ ದಾಟಿರಾಯ ಡೇರೆಗೆ ಹೊಕ್ಕನಪ್ಪಾ
ಇಂಗ್ರೇಜಿ ಸಾಯೇ ಬರೆಲ್ಲಾ ಕೂಡಿ ಕೂತಾರ ನಕ್ಕೋತಾ
ಅವರ ಬಂದೂಕ ಸಾಮಾನುಗಳ ನೋಡ್ಯಾನ ಒಳಗ ನಿಂತಾ
ಬಂದೂಕ ಸಾಮಾನ ಹೋರಿ ಕಟ್ಟಿ ಮತ್ತೊಂದು ಡೇರೆಕಿಟ್ಟ
ತಿರಗ್ಯಾಡಕೋತ ನಡೆದಾನ ಸುತ್ತ ಕೇಳುತ್ತಾ ।

ಓಸೂ ಹೊರಿಕಟ್ಟಿ ಕೆರ್ಯಾಗ ಒಗದ ನಿಂತಾನ ನೋಡು
ಚಲೋ ಚಲೋ ಸಾಮಾನುಗಳು ಹೊರೆ ಕಟ್ಟುತಾ ।
ತೆಳಗ ಮ್ಯಾಲ ಹುಲ್ಲ ಮಾಡಿ ಎಲ್ಲ ಸಾಮಾನ
ತಗೊಂಡಾನ ವಡ್ಡಾರ ಎಂಕ್ಯಾ ಗಜವರ ನೋಡಿ
ಕೂಗ ಹೊಡಕೋತಾ ಬಹಳ ಹುಷಾರಿಂದ
ನಿಂದ್ರಬೇಕ ಬರಲೇ ಮತ್ತಾ ॥

ಹೀಗೆ ಕೆಲವು ಲಾವಣಿಗಳ ಸಾಲುಗಳಿಗೆ ಮೀತಿಯೇನು ಇಲ್ಲ ಮತ್ತು ಯಾವುದೇ ಕ್ರಮವನ್ನು ಇದಕ್ಕೆ ಅಳವಡಿಸಿಲ್ಲ ಎಂದು ಹೇಳಬಹುದು.

ಹೀಗೆ ಲಾವಣಿಗಳು ಛಂದಸ್ಸು ಪ್ರಕಾರಗಳಲ್ಲಿ ಹೇಗ ಬೇಕೋ ಹಾಗೆ ರಚನೆಯಾಗಿರುವುದು ತಿಳಿಯುತ್ತದೆ. ಇದಕ್ಕೆ ಮುಖ್ಯ ಕಾರಣವೇನೆಂದರೆ ಲಾವಣಿಗಳನ್ನು ಬಾಯಿಂದ ಬಾಯಿಗೆ ಹೇಳಿಕೊಂಡ ಬಂದಿರುವುದು, ಮತ್ತೆ ಯಾವುದೋ ಒಂದು ಸಂದೇಶವನ್ನು ತಲುಪಿಸುವ ಸಲುವಾಗಿ ಇವು ರಚನೆ ಆಗಿರುವುದರಿಂದ ಇಲ್ಲಿ ಹೇಳುವ ಸಂದೇಶ ಮುಖ್ಯವಾಗಿತ್ತು. ಆದರೆ ಇವರಿಗೆ ರಚನಾಕ್ರಮ ಅಮುಖ್ಯವಾಗಿ ಕಂಡುಬಂದಿದೆ. ಅದ್ಕಾಗಿನೆ ಅವು ಇದಕ್ಕೆ ಗಮನಕೊಟ್ಟಿಲ್ಲ ಎಂದು ಹೇಳಬಹುದು.

ಆದರೆ ರಚನೆ ಹೇಗೆ ಇರಲಿ ಪ್ರಾಸ ಮತ್ತು ಲಯಗಳನ್ನು ಈ ಲಾವಣಿಗಳಲ್ಲಿ ಚಾಚು ತಪ್ಪದೇ ಬಳಸಿಕೊಂಡಿರುವುದು ಕಾಣುತ್ತವೆ. ಅಂತ್ಯ ಪ್ರಾಸವನ್ನು ನಾವು ಲಾವಣಿಗಳಲ್ಲಿ ನೋಡಬಹುದು.

"ಜಮಖಂಡಿಗೆ ನಡದಾರ ಆವತ್ತಾ
ಅರಸರಿಗೆ ಭೆಟ್ಟಿ ಆಗೋಣಂತಾ
ನಮಸ್ಕಾರ ಮಾಡ್ಯಾರ ದೂರ ನಿಂತಾ
ಅರಸ ನೋಡಿ ಕೂತಾ ನಕ್ಕೋತಾ"

ಇಲ್ಲಿ ಸಾಲಿನ ಕೊನೆಗೆ ತಾ ತಾ ತಾ ಬಂದಿರುವುದರಿಂದ ಇದು ಅಂತ್ಯಪ್ರಸಾವನ್ನು ಅಳವಡಿಸಿಕೊಂಡಿದೆ ಎಂದು ಹೇಳಬಹುದು.

ಹೀಗೆ ಲಾವಣಿಗಳು ಒಬ್ಬರ ಬಾಯಿಂದ ಇನ್ನೊಬ್ಬರಿಗೆ ಸಂದೇಶಗಳನ್ನು ತಲುಪಿಸುವ ಸಲುವಾಗಿ ಅವು ಹುಟ್ಟಿಕೊಂಡು ಮಾತುಗಳನ್ನು ಹಾಡಿನ ರೂಪದಲ್ಲಿ ಹೇಳುತ್ತಾ ಹೋಗಿರುವುದು ತಿಳಿಯುತ್ತದೆ. ಅವತ್ತು ಅಂದರೆ ವಸಾಹತುಶಾಹಿಗಳ ಕಾಲಾವಧಿಯಲ್ಲಿ ಅವರನ್ನು ಭಾರತದಿಂದ ಹೊಡೆದೊಡಿಸಿ ಅವರ ಆಡಳಿತವನ್ನು ವಿರೋಧಿಸುವ ಮುಖ್ಯ ಉದ್ದೇಶ. ಭಾರತೀಯರಿಗೆ ಇದಿದ್ದರಿಂದ ಅವರು ಸ್ಥಳೀಯ ಭಾರತೀಯ ಜನತೆಯನ್ನು ಒಟ್ಟುಗೂಡಿಸಿ ಅವರನ್ನು ಬ್ರಿಟೀಶರ ವಿರುದ್ಧ ಸಂಘಟಿಸಿದರೆ ಬ್ರಿಟೀಶರು ಅದನ್ನು ಚದುರಿಸುವ ಸಲುವಾಗಿ ಸೈನಿಕರಿಂದ ಬೆದರಿಕೆಯನ್ನು ಹಾಕಿಸುತ್ತಿದ್ದರು. ಅದಕ್ಕಾಗಿ ಅವರ ಬೆದರಿಕೆಗೆ ಅಂಜಿದ ಸ್ಥಳೀಯ ಭಾರತೀಯರು ಗುಪ್ತ

ಮಾರ್ಕೆಟುಗಳಲ್ಲಿ ಜಾತ್ರೆಗಳಲ್ಲಿ ಓತಣಕುಟಗಳಲ್ಲಿ ಸಾಯಂಕಾಲದ ಮನರಂಜನೆಯಲ್ಲಿ ಒಟ್ಟುಗೂಡಿಸಿ ಹೀಗೆ ಲಾವಣಿಗಳ ರೂಪದಲ್ಲಿ ಮಾತಿನ ಶೈಲಿಯಲ್ಲಿ ಜನರಿಗೆ ಸಂದೇಶಗಳನ್ನು ತಲುಪಿಸುತ್ತಿದ್ದರು. ಅದಕ್ಕಾಗಿನೇ ಇವು ಮಾತಿನ ರೂಪದಲ್ಲಿ ಸರಳ ಸಾಮಾನ್ಯವಾದ ಭಾಷಾಶೈಲಿಯಲ್ಲಿ ರಚನೆಯಾಗಿರುವುದು ಕಂಡುಬರುತ್ತವೆ. ಇನ್ನು ಸಾಮಾನ್ಯವಾದ ಸರಳ ಪದಗಳನ್ನು ಬಳಸಿಕೊಂಡು ಪ್ರಾದೇಶಿಕ ಸೊಗಡಿನೊಂದಿಗೆ ರಚನೆಗೊಂಡಿರುವುದು ತಿಳಿಯುತ್ತದೆ. ಛಂದೋಬದ್ಧವಾಗಿ ಅಂತ್ಯ ಪ್ರಾಸದೊಂದಿಗೆ ಲಯ ತಾಳಗಳಿಂದ ಕೂಡಿ ಭಾವ ರಸಗಳನ್ನೊಳಗೊಂಡು ಇವು ರಚನೆಯಾಗಿರುವುದು ಕಂಡುಬರುತ್ತವೆ.

**ಕೊನೆ ಟಿಪ್ಪಣಿಗಳು**

೧. ಸಿಂಪಿ ಲಿಂಗಣ್ಣ, **ಜನಾಂಗದ ಜೀವಾಳ**, ಶ್ರೀ ಅರವಿಂದ ಗ್ರಂಥಾಲಯ, ಚಣ ಚಣ, ೧೯೬೨.

೨. ಅದೇ.

೩. ಅದೇ.

೪. ಅದೇ.



# ಅಧ್ಯಾಯ : ಏಳು

# ಸಮಾರೋಪ

ಭಾರತದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಗಳು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ನಡೆದಂತಹ ಹೋರಾಟಗಳು ಸ್ವಹಿತಾಶಕ್ತಿ, ಸ್ವಾತಂತ್ರ್ಯದ ಮಹತ್ವ ಮತ್ತು ರಾಷ್ಟ್ರೀಯತೆಯನ್ನು ತಿಳಿಸುತ್ತವೆ. ಸ್ವಾತಂತ್ರ್ಯದ ಪದದ ಅರ್ಥವನ್ನು ನೋಡಿದಾಗ, ತನ್ನಿಚ್ಛೆಯಂತೆ ಇರುವುದು. ಬಂಧನದಿಂದ ವಿಮುಕ್ತಿ ಹೊಂದುವುದು, ಬಿಡುಗಡೆ ಹೊಂದುವುದು, ವಿಶೇಷ ಹಕ್ಕನ್ನು ಪಡೆಯುವುದು ಮತ್ತು ಮನಸ್ಸಿಗೆ ತೋರಿದ್ದನ್ನು ಮಾಡುವಂತಿರುವ ಹಕ್ಕು ಅಥವಾ ಅಧಿಕಾರ ಎನ್ನಬಹುದು. ಈ ಮೇಲಿನ ಅಂಶಗಳಿಗಾಗಿ ನಿರಂತರ ಹೋರಾಡಿದ್ದು ಕಂಡುಬಂದಿದೆ. ಅವುಗಳು ಒಂದೇ ರೂಪದಲ್ಲಿ ಆಗಲಿಲ್ಲ, ದಂಗೆ, ಕಾಳಗ, ಕ್ರಾಂತಿ, ಯುದ್ಧ, ಸಂಗ್ರಾಮ, ಚಳವಳಿ ಮತ್ತು ಹೋರಾಟ, ಸಂಘರ್ಷ, ಪ್ರತಿಭಟನೆ, ಪ್ರತಿರೋಧ ಮುಂತಾದ ಹೆಸರುಗಳಿಂದ ಅವುಗಳನ್ನು ಗುರುತಿಸುತ್ತೇವೆ. ಈ ಎಲ್ಲ ರೂಪಗಳು ಕೇವಲ ಸ್ವಾತಂತ್ರ್ಯದ ಬಿಡುಗಡೆಗೆ ಸಂಭವಿಸದೇ ಮನುಷ್ಯನ ಒಂದು ಸಹಜವಾದ ಕ್ರಿಯೆಯಾಗಿ ಕಂಡುಬರುತ್ತವೆ. ಮನುಷ್ಯನ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ಅವನ ಮನಸ್ಸಿಗೆ ಯಾರಾದರೂ ಕಿರಿಕಿರಿಯನ್ನು ಉಂಟುಮಾಡಿದರೆ ಅವನು ಸಹಜವಾಗಿವೇ ಅವರನ್ನು ವಿರೋಧಿಸುತ್ತಾನೆ. ಅಂತಪ ವಿರೋಧಗಳನ್ನು ನಾವು ಮಾನವ ಚರಿತ್ರೆಯಲ್ಲಿ ಅನೇಕ ವಿಷಯಗಳಲ್ಲಿ ಕಾಣುತ್ತೇವೆ. ಅಲ್ಲದೆ ಅವುಗಳನ್ನು ಮಾನವನ ಸಂಘರ್ಷದ ನೆಲೆಗಳನ್ನಾಗಿ ಗುರುತಿಸುತ್ತೇವೆ. ಅಂತಹ ಸಂಘರ್ಷದ ನೆಲೆಗಳನ್ನು ನಾವು ಭಾರತದ ರಾಜಕೀಯ ಸ್ವಾತಂತ್ರ್ಯದ ಪೂರ್ವ ಕಾಲದಲ್ಲಿ ಭಾರತದಾದ್ಯಂತ ವಿವಿಧ ರೀತಿಯಲ್ಲಿ ನಡೆದ ಸ್ಥಳೀಯ ಪ್ರತಿರೋಧಗಳನ್ನು ಭಾರತದ ರಾಜಕೀಯ ಸ್ವಾತಂತ್ರ್ಯದ ಪೂರ್ವಸಿದ್ಧತೆಯ ಒಂದು ರಂಗತಾಲೀಮು ಎಂದು ವ್ಯಾಖ್ಯಾನಿಸಬಹುದು.

ಈ ರಂಗತಾಲೀಮನ್ನು ಜನಸಾಮಾನ್ಯರ ಅಭಿವ್ಯಕ್ತಿಯ ಪ್ರಮುಖ ಮಾಧ್ಯಮವಾದ ಲಾವಣಿ ಸಾಹಿತ್ಯ ತುಂಬಾ ಸ್ಪಷ್ಟವಾಗಿ ಎಳೆಎಳೆಯಾಗಿ ಬಿಚ್ಚಿಡುತ್ತಾ ಹೋಗುತ್ತದೆ. ಈ ಲಾವಣಿಗಳು ಜನಸಾಮಾನ್ಯರ ಬಾಯಿಯಿಂದ ಬಾಯಿಗೆ ಹರಿದು ಹೋಗಿದ ಮಾಧ್ಯಮವಾಗಿರುವುದರಿಂದ

ಜನಸಾಮಾನ್ಯರ ದಿನನಿತ್ಯದ ಒಡನಾಟದ ಒಳಗಡೆ ಸೇರಿಕೊಂಡಿವೆ. ಜನರು ಸಂತೆಯ ಮೇಳದಲ್ಲೋ ಮೈಸೂರಿನ ಜನನಿಬೀಡ ಮಾರ್ಕೆಟ್ ಚೌಕಗಳಲ್ಲೋ ನಿಂತು ಹಾಡುತ್ತಿದ್ದ ಅನಾಮಧೇಯ ಲಾವಣಿಕಾರರು ಈ ರಂಗತಾಲೀಮನ್ನು ಎಳೆಎಳೆಯಾಗಿ ಬಿಚ್ಚಿಡುತ್ತಾ ಹೋಗುತ್ತಾರೆ.

'ಲಾವಣಿ' ಹೇಗೆ ಒಂದು ಅಭಿವ್ಯಕ್ತಿ ಮಾಧ್ಯಮವಾಗಿ ಜನ್ಮ ತಾಳೀತು ಎಂದು ನೋಡಿದಾಗ ಇಂಗ್ಲೀಷಿನ Ballad ಗೆ ಸಂವಾದಿಯಾಗಿ ಕನ್ನಡದಲ್ಲಿ ಬೆಳೆದು ಬಂತು. 'ಲಾವಣಿ' ರೂಪವು Balladಗಳ ಮಾದರಲ್ಲಿಯ ಕಥನಕಾವ್ಯ. ಆದರೆ ಅದಕ್ಕೆ ಅದರದ್ದೇ ಆದ ವಿಶಿಷ್ಟ ಲಕ್ಷಣಗಳಿವೆ. ಈ ಲಾವಣಿಗಳು ಮೊದಮೊದಲು ಹೆಣ್ಣಿನ ಲಾವಣ್ಯ ಇಲ್ಲವೆ ಶೃಂಗಾರ ವರ್ಣಿಸುವ ಸಾಧನಗಳಾಗಿದ್ದವು. ಆನಂತರ ಗಂಡಿನ ಶೌರ್ಯ-ಸಾಹಸ, ದುಃಖ-ದುಮ್ಮಾನಗಳನ್ನು ಪ್ರತಿಬಿಂಬಿಸುವ ಮಾಧ್ಯಮಗಳಾಗಿ ಬೆಳೆದುಬಂದವು. ಈ ಮಾಧ್ಯಮಗಳು ಹೀಗೆ ಲಾವಣಿಗಳು ಮನುಷ್ಯನ ಸಹಜ ಅಭಿವ್ಯಕ್ತಿ ಮಾಧ್ಯಮಗಳು ಆಗಿರುವುದರಿಂದ ಮಾನವನ ಅಂದಂದಿನ ಬದುಕನ್ನು ಅವನ ಚರಿತ್ರೆಯನ್ನು ಸಹಜವಾಗಿಯೇ ಪ್ರಕಟಿಸುತ್ತಿದ್ದವು. ಹಾಗಾಗಿ ಬ್ರಿಟಿಷರ ಆಡಳಿತವನ್ನು ವಿರೋಧಿಸಿ ವಸಾಹತುಶಾಹಿಗೆ ವಿರುದ್ಧವಾದ ಸ್ಥಳೀಯ ಪ್ರತಿರೋಧಗಳು ೧೮೫೭ ರ ಆಸುಪಾಸಿನಲ್ಲಿ ಜರುಗಿ ಹೋದವು. ಮಾನವನ ಸಹಜವಾದ ಅಭಿವ್ಯಕ್ತಿ ಮಾಧ್ಯಮವಾಗಿರುವ ಈ ಲಾವಣಿ ಸಹಜವಾಗಿವೆಯೇ ಈ ಪ್ರತಿರೋಧಗಳನ್ನು ಪ್ರಕಟಿಸುವ ಒಂದು ಮಾಧ್ಯಮವಾಗಿ ಬೆಳೆದುಬಂತು. ಮಹಾತ್ಮಾಗಾಂಧೀಜಿಯವರು ಅಜ್ಞಾನದಲ್ಲಿ ಮುಳುಗಿದ ಜನತೆಗೆ ಬ್ರಿಟೀಷರು ದೂರಾಡಳಿತ ಮತ್ತು ಶೋಷಣೆಗಳನ್ನು ತಿಳಿಸಿಕೊಡುತ್ತಾ ಹೋದರು. ಅಲ್ಲದೇ ವಸಾಹತುಶಾಹಿಗೆ ವಿರುದ್ಧವಾಗಿ ನಮ್ಮ ಸ್ಥಳೀಯ ಪ್ರತಿಭಟನಾಕಾರರು ಅನೇಕ ಪ್ರತಿಭಟನೆಗಳನ್ನು ಮಾಡಲು ಸಂಘ-ಸಂಸ್ಥೆಗಳನ್ನು ಸಂಘಟಿಸುತ್ತಾ ಹೋದರು.

ಜನಸಾಮಾನ್ಯರನ್ನು ಸಂಘಟಿಸುವುದು ಭಾರತೀಯ ಬ್ರಿಟೀಷ್ ವಿರೋಧಿ ಮುಖಂಡರಿಗೆ ಅನಿವಾರ್ಯವಾಗಿತ್ತು. ಅದಕ್ಕಾಗಿ ಅವರು ಜನಸಾಮಾನ್ಯರನ್ನು ಬ್ರಿಟೀಷರ ವಿರುದ್ಧ ಸಂಘಟಿಸುವುದನ್ನು ಅವರ ಮುಖ್ಯ ಉದ್ದೇಶವಾಗಿರುವುದರಿಂದ, ಜನಸಾಮಾನ್ಯರ ಮಧ್ಯದಲ್ಲಿ ಬಾಯಿಯಿಂದ ಬಾಯಿಗೆ ಹರಿದು ಪ್ರಕಟವಾದ ಈ ಲಾವಣಿ ಸಾಹಿತ್ಯವನ್ನು ಈ ಮುಖಂಡರು ವರ್ತಮಾನ ಪತ್ರಿಕೆಗಳ ರೂಪದಲ್ಲಿ ಬಳಸಿಕೊಂಡರು. ಇದರಿಂದ ಅನಾಗರಿಕ ಜನರನ್ನು ಕೂಡಾ ಅವರು ಸಂಘಟಿಸುತ್ತಾ ಹೋದರು. ಇದರಿಂದ ಇಡೀ ಭಾರತದ ಜನತೆ, ಸಂಘಟನೆಯಾಗಲು ಅನುಕೂಲವಾಯಿತು.

ಇಂತಹ ಒಂದು ಪ್ರಯತ್ನದಿಂದ ೧೮೫೭ರ ಸಂದರ್ಭದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಅವಧಿಯಲ್ಲಿ ಲಾವಣಿಕಾರರು ನಡುರಾತ್ರಿಯಲ್ಲಿ ಅಡ್ಡಹಾದಿಗುಂಟ ಕಾಲ್ನಡಿಗೆಯಲ್ಲೆ ನಡೆದು, ಹಳ್ಳಿಗಳನ್ನು ಹೊಕ್ಕು ಜನರನ್ನೆಬ್ಬಿಸಿ ಡಪ್ಪು ಬಡಿದು ತಾಳಕುಟ್ಟಿ ಲಾವಣಿ, ಗೀಗೀ ಹಾಡಿದರು. ಜನಪದ ಕವಿಗಳು ಆಂಗ್ಲ ಸರಕಾರದ ಕ್ರೌರ್ಯ, ಗಾಂಧಿ, ನೆಹರು ಮೊದಲಾದವರ ನಿಃಸ್ವಾರ್ಥ

ರಾಷ್ಟ್ರಪ್ರೇಮ ಸಾಹಸಗಳನ್ನು ಕುರಿತು ಕೇಳುಗರ ಕಣ್ಣು ಕಿವಿಗಳ ಪರೆಹರಿವಂತೆ ಹಾಡಿದರು. ಅವರ ಭಾಷೆಯಲ್ಲೇ ಹಾಡಿದ ಆ ಹಾಡುಗಳನ್ನು ಸ್ಮರಣೆಯಲ್ಲಿಟ್ಟುಕೊಂಡು ಜನವೂ ಹುಚ್ಚೆದ್ದು ಹಾಡಿತು.

ಬಾವಿಯ ಕಪ್ಪೆಗೆ ಮಳೆಯ ಮೂಲವಾದ ಸಮುದ್ರದ ಕಲ್ಪನೆ ತಂದುಕೊಂಡುವುದು ಕಷ್ಟ ಹೊಟ್ಟೆ ಬಟ್ಟೆಯ ಬದುಕಿನಾಚೆಯದನ್ನರಿಯದ ಜನಪದರಿಗೆ ದೇಶಾಭಿಮಾನದ ಕಲ್ಪನೆ ಇರದಿದ್ದರು. ಅವರು ತಮಗೆ ಅರಿವಿಲ್ಲದೆಯೇ ವಸಾಹತುಶಾಹಿಗೆ ವಿರುದ್ಧವಾದ ಸ್ಥಳೀಯ ಪ್ರತಿಭಟನಾಕಾರರ ಪ್ರತಿಬಿಂಬಿಸುತ್ತಾ ಹೋದರು. ದೈನಂದಿನ ಬದುಕೇ ಧಾರುಣವಾದ ಗ್ರಾಮಾಂತರ ಜನಸಾಮಾನ್ಯರಿಗೆ ದೇಶ, ದೇಶಾಭಿಮಾನ, ಸ್ವಾತಂತ್ರ್ಯಗಳ ಕಲ್ಪನೆ ಕೊಟ್ಟು, ಆಂಗ್ಲರ ಅತ್ಯಾಚಾರ, ಅದನ್ನು ಎದುರಿಸುವ ನಾಯಕರ ಸಾಹಸ ಸಂಕಷ್ಟಗಳ ಅರಿವು ಮೂಡಿಸುವುದು, ಆ ದಿಸೆಯಲ್ಲಿ ಅವರು ಕರ್ತವ್ಯನಿಷ್ಠರಾಗುವಂತೆ ಮಾಡುವುದು ಮೊದಲಾದ ಪ್ರಮುಖ ಸಮಸ್ಯೆಗಳ ಪರಿಹಾರಕ್ಕೆ ಲಾವಣಿ ಸಾಹಿತ್ಯ ನೀಡಿದ ನೆರವು ಅಪಾರ, ರಾಷ್ಟ್ರೀಯ ಭಾವೈಕ್ಯ ಬೆಳೆಸುವ ಮಹತ್ಸಾಧನೆಯಲ್ಲಿ ಜನಪದ ಕವಿಗಳಿಗೆ ಹಿರಿಪಾಲು ಸಲ್ಲುವದೆಂಬ ಮಾತು ಅತಿಶಯೋಕ್ತಿಯೇನಲ್ಲ. ಆ ಜನಪದ ಕವಿಗಳ ಧೈರ್ಯ, ಸಾಹಸ ಮರೆಯದೇ ಸ್ಮರಿಸಿಕೊಳ್ಳುವಂಥವು.

ಭಾರತದ ರಾಜಕೀಯ ಸ್ವಾತಂತ್ರ್ಯದ ಸಂಘರ್ಷ ಹಲವು ದೃಷ್ಟಿಕೋನಗಳಿಂದ ವೈಶಿಷ್ಟ್ಯಮಯವಾಗಿ ಕಂಡು ಬರುತ್ತದೆ. ಭಾರತದ ಸ್ವಾತಂತ್ರ್ಯದ ಮುಂದಾಳತ್ವವನ್ನು ವಹಿಸಿದ ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರ ರಾಜಕೀಯ, ಸಾಮಾಜಿಕ, ರಾಷ್ಟ್ರೀಯ, ಆರ್ಥಿಕ ಸ್ವಾತಂತ್ರ್ಯದ ಪ್ರತಿರೋಧಗಳು ಹಲವು ಆಯಾಮಗಳನ್ನು ಹೊಂದಿದೆ. ಈ ಹೋರಾಟ ಹುಂಬುತನದ ಹೋರಾಟವಾಗಿರಲಿಲ್ಲ. ಅದೊಂದು ಚಾರಿತ್ರಿಕ ಮಹತ್ವವನ್ನು ಹೊಂದಿದ ಹೋರಾಟವಾಗಿ ಪರಿಣಮಿಸಿದೆ. ಗಾಂಧೀಜಿಯವರು ಎಷ್ಟು ಅಪ್ರತಿಮ ರಾಷ್ಟ್ರಪ್ರೇಮಿಗಳಾಗಿದ್ದರೋ ಅಷ್ಟೇ ಚಾರಿತ್ರಿಕ ತತ್ವಾದರ್ಶಗಳನ್ನು ಮೈಗೂಡಿಸಿಕೊಂಡ ತತ್ವವೇತ್ತರೂ ಆಗಿದ್ದರು. ಇದರ ಅರ್ಥ ಕೇವಲ ಗಾಂಧೀಜಿ ಮಾತ್ರ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರೂ ಎಂದಲ್ಲ. ಅವರು ಸ್ವಾತಂತ್ರ್ಯಾಂದೋಳನ ದಲ್ಲಿ ದೇಶಪ್ರೇಮ ದೀಪ್ತಿಯಿಂದ ಪಾಲ್ಗೊಂಡಿದ್ದರು. ಈ ಹತ್ತು ಹಲವು ಸ್ವಾತಂತ್ರ್ಯ ಹೋರಾಟಗಾರರಲ್ಲಿ ಬೇರೆ ಬೇರೆ ದೃಷ್ಟಿಕೋನದ ರಾಷ್ಟ್ರಪ್ರೇಮಿಗಳಿದ್ದಾರೆ.

ಒಂದು ಕಡೆ ಬಿಸಿ ರಕ್ತದ ಯುವಕ ಗುಂಪು ಇನ್ನೊಂದೆಡೆ ಇಂಗ್ಲೀಷರ ಸಾಮ್ರಾಜ್ಯಶಾಹಿಯನ್ನು ವಿರೋಧಿಸಿದ ಇನ್ನೊಂದು ಗುಂಪು ಈ ಎರಡು ಗುಂಪುಗಳ ಆಶೋತ್ತರಗಳು ಬೇರೆ ಬೇರೆಯಾಗಿದ್ದವು. ಬ್ರಿಟೀಷರ ವಿರುದ್ಧ ಸಂಭವಿಸಿದ ಸ್ಥಳೀಯ ಪ್ರತಿರೋಧಗಳಲ್ಲಿ ಬ್ರಿಟಿಷರ ಕಾಯಿದೆ ಕಾನೂನುಗಳನ್ನು ಸಹಜವಾಗಿದೆ. ಭಾರತೀಯ ಜನಸಾಮಾನ್ಯರು ವಿರೋಧಿಸುತ್ತಾರೆ. ಕಾಯಿದೆ ಕಾನೂನು ಆಡಳಿತ ಎಂದರೇನು? ಎನ್ನುವುದು ಸ್ಥಳೀಯ ಜನಸಾಮಾನ್ಯರಿಗೆ ಅರಿವು ಇರಲಿಲ್ಲ. ಯಾವಾಗ ಬ್ರಿಟೀಷರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಭಾರತದಲ್ಲಿ ಅವರು ಶಸ್ತ್ರಾಸ್ತ್ರ ನಿಷೇಧ, ದತ್ತು ಮಕ್ಕಳಿಗೆ ಹಕ್ಕಿಲ್ಲದಂತಹ ಕಾಯಿದೆಗಳನ್ನು ಜಾರಿಗೆ ತಂದರು. ಇವು

ನಮ್ಮ ಜನಸಾಮಾನ್ಯರಿಂದ ದೂರವಾಗಿದ್ದವು. ಆದರೆ ಬ್ರಿಟೀಷರ ಈ ಕಾನೂನುಗಳು ಭಾರತೀಯ ಬಡಜನತೆಯ ಬದುಕನ್ನು ಕಿತ್ತಿ ತಿನ್ನುವಂತಹವುಗಳಾಗಿದ್ದವು.

ಉದಾಹರಣೆಗೆ ಹಲಗಲಿ ಬೇಡರ ದಂಗೆಯನ್ನು ನೋಡಿದಾಗ ಬೇಡರು ಇಲ್ಲಿ ಬ್ರಿಟೀಷರ ಶಸ್ತ್ರಾಸ್ತ್ರ ನಿಷೇಧ ಕಾಯಿದೆಯನ್ನು ವಿರೋಧಿಸಿ ಬ್ರಿಟೀಷರನ್ನು ಪ್ರತಿಭಟಿಸುತ್ತಾರೆ. ಇಲ್ಲಿ ಈ ಹಲಗಲಿ ಬೇಡರಿಗೆ ಈ ಕಾಯಿದೆಯ ಅರಿವಿಲ್ಲ. ಆದರೆ ತಮ್ಮ ಬದುಕಿಗೆ ಆಧಾರವಾದ ಶಸ್ತ್ರಾಸ್ತ್ರಗಳನ್ನು ಬ್ರಿಟೀಷರಿಗೆ ಒಪ್ಪಿಸಲು ಅವರು ನಿರಾಕರಿಸುತ್ತಾರೆ. ಯಾಕೆಂದರೆ ಅವುಗಳನ್ನು ಕೊಟ್ಟರೆ ಅವರ ಬದುಕು ಬೀದಿ ಪಾಲಾಗುತ್ತದೆ. ಈ ಶಸ್ತ್ರಾಸ್ತ್ರಗಳು ಅವರ ಹಸಿವನ್ನು ನೀಗಿಸುವಂತಹವು. ಪ್ರತಿದಿನ ಕಾಡಿನಲ್ಲಿ ಶಸ್ತ್ರಾಸ್ತ್ರಗಳಿಂದ ಬೇಟೆಯಾಡಿ ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುವಂಥವರು. ಅದಕ್ಕಾಗಿ ಶಸ್ತ್ರಾಸ್ತ್ರಗಳನ್ನು ಅವರಿಗೆ ಕೊಟ್ಟ ಅವರ ಹಸಿವು ತಾರಕಕ್ಕೇರಿ ಅವು ಅನಿವಾರ್ಯವಾಗಿ ಬ್ರಿಟೀಷರ ವಿರುದ್ಧ ಹೋರಾಟ ಮಾಡಿದಂಥವರು.

ಅದೇ ತರಹ ಬ್ರಿಟೀಷರ ದತ್ತು ಮಕ್ಕಳಿಗೆ ಹಕ್ಕಿಲ್ಲ ಎನ್ನುವಂತಹ ಕಾಯಿದೆ ಬ್ರೀಟಿಷರು ಭಾರತೀಯ ಸಂಪತ್ತನ್ನು ಲೂಟಿ ಮಾಡುವ ಉದ್ದೇಶವನ್ನು ಹೊಂದಿದವರು. ಭಾರತದಲ್ಲಿ ಸಂತಾನವಿಲ್ಲದ ಅರಸು ಮನೆತನಗಳಿಗೆ ದತ್ತು ಮಕ್ಕಳನ್ನು ತೆಗೆದುಕೊಂಡರೆ ಅವರಿಗೆ ಸಂಪತ್ತು ಸಿಗದೇ ಹೋಗಬಹುದು. ಅದಕ್ಕಾಗಿ ಅವರು ಸ್ಥಳೀಯ ಅರಸು ಮನೆತನಗಳ ಸಂಸತ್ತಿಗೆ ಕಿತ್ತೂರು ಚೆನ್ನಮ್ಮ, ನರಗುಂದ ಬಾಬಾಸಾಹೇಬನಂತಹ ಸ್ಥಳೀಯ ಪ್ರತಿಭಟನಾಕಾರರು ತಮ್ಮ ಹಕ್ಕುಬಾಧ್ಯತೆಯನ್ನು ಉಳಿಸಿಕೊಳ್ಳಲು ಬ್ರಿಟೀಷರ ವಿರುದ್ಧ ಅನಿವಾರ್ಯವಾಗಿ ಪ್ರತಿಭಟಿಸುತ್ತಾರೆ.

ಇನ್ನು ಸಹಾಯಕ ಸೈನ್ಯ ಪದ್ಧತಿಯ ಕಾಯಿದೆ ಕಾನೂನುಗಳು ಸ್ಥಳೀಯ ಟಿಪ್ಪುಸುಲ್ತಾನನಂತಹ ವೀರರನ್ನು ರೊಚ್ಚಿಗೆಬ್ಬಿಸಿತ್ತು. ಅದೇ ತರಹ ಆದಾಯ ತೆರಿಗೆ, ಕಂದಾಯ ಮತ್ತು ಇನ್ನು ಅನೇಕ ಬ್ರಿಟೀಷರ ಆಡಳಿತ ಪದ್ಧತಿಗಳನ್ನು ಸ್ಥಳೀಯ ಪ್ರತಿಭಟನಾಕಾರರು ವಿರೋಧಿಸಿದಂತಹ ವಿರೋಧಗಳು ಕಂಡುಬರುತ್ತವೆ.

ಇನ್ನು ಭಾರತೀಯ ವಿದ್ಯಾವಂತ ಮುಖಂಡರು ಬ್ರಿಟೀಷರ ಸಾರಿಗೆ, ಸಂಪರ್ಕ, ಶಿಕ್ಷಣ ಏಕರೀತಿಯ ಆಡಳಿತ ಮುಂತಾದ ಸುಧಾರಣೆಗಳಿಂದ ಪ್ರಭಾವಿತರಾಗಿ ರಾಷ್ಟ್ರೀಯ ಹೋರಾಟಗಳನ್ನು ಮಾಡುತ್ತಾರೆ.

ಬ್ರಿಟೀಷರ ಆರ್ಥಿಕ ಅಸಮಾನತೆಯ ನೀತಿಗಳು ಸ್ಥಳೀಯ ಭಾರತೀಯರನ್ನು ಕೆರಳಿಸಿ ಅನೇಕ ಪ್ರತಿಭಟನೆಗಳು ಸಂಭವಿಸಿದವು. ಅವು ಭೂಕಂದಾಯ ತೆರಿಗೆಗಳಾಗಿವೆ. ಭಾರತೀಯರಿಗೆ ಇವು ಹೊರೆಯಾಗಿ ಅವರು ಇವುಗಳನ್ನು ವಿರೋಧಿಸುತ್ತಾ ಹೋಗುತ್ತಾರೆ.

ಹೀಗೆ ಸ್ಥಳೀಯ ಪ್ರತಿಭಟನಾಕಾರರು ಬ್ರಿಟೀಷರ ಕಾಯಿದೆ ಕಾನೂನುಗಳನ್ನು ಧೈರ್ಯದಿಂದ ವಿರೋಧಿಸುತ್ತಾರೆ. ಬ್ರಿಟೀಷರು ಈ ವಿರೋಧಕ್ಕೆ ಸಮ್ಮತಿ ಕೊಡದೆ ಇದ್ದಾಗ ಅನಿವಾರ್ಯವಾಗಿ ಯುದ್ಧಕ್ಕೆ ಸಜ್ಜಾಗಿರುವುದು ಕಂಡುಬರುತ್ತದೆ. ಹೀಗೆ ಬ್ರಿಟೀಷರನ್ನು ವಿರೋಧಿಸಿದಂತಹ ಭಾರತೀಯ

ಸ್ಥಳೀಯ ಕೆಲವು ನಾಯಕರನ್ನು ಬ್ರಿಟೀಷರು ಖಳನಾಯಕ ಎಂದು ಹೇಳುತ್ತಾರೆ. ಅವರಲ್ಲಿ ಟಿಪ್ಪುಸುಲ್ತಾನ, ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣ ಇವರನ್ನು ಖಳನಾಯಕ ಎಂದು ಕರೆಯುತ್ತಾರೆ. ಆದರೆ ಲಾವಣಿಗಳಲ್ಲಿ ಎಲ್ಲಿಯೂ ಇವರನ್ನು ಖಳನಾಯಕ ಎಂದು ನಿರೂಪಿಸಿಲ್ಲ. ಚರಿತ್ರೆಯಲ್ಲಿ ಮಾತ್ರ ಇದರ ಸುಳಿವು ಸಿಗುತ್ತದೆ. ಲಾವಣಿಗಳು ಇಂತಹ ನಾಯಕರನ್ನು ಸಕಾರಾತ್ಮಕವಾಗಿ ಹೊಗಳುತ್ತಾ ಹೋಗುತ್ತಾರೆ.

ಈ ಮೂರು ಜನನಾಯಕರನ್ನು ಲಾವಣಿಕಾರರು ಗುರುತಿಸುವ ರೀತಿ ವಿಭಿನ್ನವಾಗಿದೆ. ಇವರು ಅನ್ಯಾಯಕಾರರಿಗೆ ಎಷ್ಟು ಕಠೋರರೊ ಅಷ್ಟೇ ಒಳ್ಳೆಯವರಿಗೆ ಒಳ್ಳೆಯವರು ಹಾಗೂ ಮೃದು ಸ್ವಭಾವದ ವ್ಯಕ್ತಿಗಳಾಗಿದ್ದರು. ಇವರು ಲಾವಣಿಗಳಲ್ಲಿ ಕೇವಲ ಹೋರಾಟಗಾರರಾಗಿ ಉಳಿಯುತ್ತಾರೆ.

ಇನ್ನು ಲಾವಣಿಗಳು ಸಾಹಿತ್ಯಿಕವಾಗಿ ತುಂಬಾ ಭಿನ್ನವಾದವುಗಳು. ಇವುಗಳನ್ನು ಭಾರತೀಯ ನಾಗರಿಕ ಮತ್ತು ಅನಾಗರಿಕರಿಬ್ಬರು ರಚನೆ ಮಾಡಿರುವುದರಿಂದ ಆಡುಭಾಷೆ ಮತ್ತು ಗ್ರಾಂಥಿಕ ಎರಡು ಭಾಷೆಯನ್ನು ನಾವು ಇಲ್ಲಿ ನೋಡುತ್ತೇವೆ.

ಹೀಗೆ ಲಾವಣಿಗಳು ಜನಸಾಮಾನ್ಯರ ಅಭಿವ್ಯಕ್ತಿಯ ಮಾಧ್ಯಮಗಳಾಗಿ ಮಾನವ ಚರಿತ್ರೆಯ ಸ್ಥಿತ್ಯಂತರಗಳನ್ನು ತನ್ನ ಮಡಿಲಲ್ಲಿ ತುಂಬಿಸಿಕೊಂಡು ಬಂದಂಥವುಗಳು. ಆದರೆ ವಸಾಹತುಶಾಹಿಯ ಅವಧಿಯಲ್ಲಿ ಇವು ಪ್ರಮುಖ ಅಭಿವ್ಯಕ್ತಿಯ ಉದ್ದೇಶಪೂರ್ವಕವಾದ ರಚನೆಗಳಾಗಿ ಬೆಳೆದು ಬಂದಿರುವುದು ಕಂಡುಬರುತ್ತದೆ.

## ಅಧ್ಯಯನದ ಫಲಿತಗಳು

ವಸಾಹತುಶಾಹಿ ಕಾಲಘಟ್ಟದಲ್ಲಿ ಇಂಗ್ಲೀಷ್ ಶಿಕ್ಷಣದ ಪ್ರಭಾವದಿಂದ ರೂಪುಗೊಂಡ ರಾಷ್ಟ್ರೀಯ ಪರಿಕಲ್ಪನೆ ಮತ್ತು ವಸಾಹತುಶಾಹಿಗೆ ಹುಟ್ಟಿಕೊಂಡ ತಾತ್ವಿಕ ಪ್ರತಿರೋಧದ ಶಿಷ್ಟ ನೆಲೆಯೊಂದೆಡೆಯಾದರೆ ಮೌಖಿಕ ಪರಂಪರೆಯ ಮತ್ತೊಂದು ನೆಲೆಯೂ ಇದ್ದಿತು. ಸುಶಿಕ್ಷಿತ ಶಿಷ್ಟ ಪರಂಪರೆಗಿಂತ ಭಿನ್ನವಾಗಿ ದೇಶೀ ನೆಲೆಯೊಂದಿಗೆ ಸಾವಯವ ಸಂಬಂಧವಿದ್ದ ಮೌಖಿಕ ಪರಂಪರೆಯು ಅಭಿವ್ಯಕ್ತಿಸುವ ತಾತ್ವಿಕತೆಯು ಭಿನ್ನ ಬಗೆಯದ್ದಾಗಿತ್ತು. ವಸಾಹತುಶಾಹಿಗೆ ಒಡ್ಡಿದ ಪ್ರತಿರೋಧದ ಅಂತಹ ತಾತ್ವಿಕ ಅಂಶಗಳನ್ನು ಲಾವಣಿಗಳಂತಹ ಗೇಯ ಪ್ರಕಾರವು ಅರ್ಥಪೂರ್ಣವಾಗಿ ಹಿಡಿದಿಟ್ಟಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ದಾಖಲಿಸಲಾಗಿದೆ.

ಅಧ್ಯಯನದ ತಾತ್ವಿಕ ವಸಾಹತುಶಾಹಿ ಕಾಲಘಟ್ಟದಲ್ಲಿ ಸ್ಥಿತ್ಯಂತರಗೊಳ್ಳುತ್ತಿದ್ದ ಭಾರತೀಯ ಸಾಂಸ್ಕೃತಿಕ ಚಹರೆಗಳನ್ನು ದಾಖಲಿಸಿರುವುದರಲ್ಲಿ ಜಾನಪದ ಸಾಹಿತ್ಯವೂ ಒಂದು ಪ್ರಮುಖ ಮಾಧ್ಯಮವಾಗಿದೆ. ಶಿಷ್ಟ ಸಾಹಿತ್ಯಕ್ಕಿಂತ ಭಿನ್ನವಾದ ಪಾಶ್ಚಿಮಾತ್ಯ ಸಾಹಿತ್ಯದ ವಸ್ತು, ತಂತ್ರ, ನಿರೂಪಣಾ ವಿಧಾನಗಳಿಗಿಂತ ಭಿನ್ನವಾದ ದೇಶೀ ಸಂಕಥನಗಳನ್ನು ಒಳಗೊಂಡ ಜಾನಪದ ಸಾಹಿತ್ಯ ಏಕ ಕಾಲಕ್ಕೆ ತನ್ನ ದೇಶೀ ನೆಲೆಯ ಬೇರುಗಳಿಂದ ವಸಾಹತುಶಾಹಿಯ ಆಕ್ರಮಣಶೀಲತೆಯ

ವಿರುದ್ಧ ಆಧುನಿಕತೆಯೊಂದಿಗಿನ ಸಂಘರ್ಷದ ಮೂಲಕ ಅರ್ಥಪೂರ್ಣವಾದ ಸಾಂಸ್ಕೃತಿಕ ಸಂಕಥನಗಳನ್ನು ತೆರೆದಿಡುವ ಕ್ರಮವು ವೈಶಿಷ್ಟ್ಯಪೂರ್ಣವಾದುದಾಗಿದೆ. ನಿದರ್ಶನಕ್ಕೆ ಹಲಗಲಿಯ ಬೇಡರು ಎನ್ನುವ ಜನಪದ ವೀರ ಕಾವ್ಯವನ್ನೇ ನೋಡಬಹುದಾಗಿದೆ. ಇಲ್ಲಿ ವಸಾಹತುಶಾಹಿಯ ಆಕ್ರಮಣಶೀಲತೆಗೆ ಪ್ರತಿರೋಧವೊಂದು ರೂಪುಗೊಂಡಿರುವುದನ್ನು ಅದು ಜನಪದ ಕಥನ ಕ್ರಮದ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದಾಗಿದೆ. ಪಾಶ್ಚಾತ್ಯರ ದೃಷ್ಟಿಕೋನದಿಂದ ಮೈದಳೆದ ಪೌರಾತ್ಯವಾದವೊಂದು ಮುನ್ನೆಲೆಗೆ ಬಂದ ಪಾಶ್ಚಾತ್ಯ ಸಿದ್ಧಾಂತಗಳಿಂದ ದೇಶೀ ಭಾಷೆಗಳಲ್ಲಿ ಹುಟ್ಟಿಕೊಂಡ ಸಾಹಿತ್ಯಿಕ ಪ್ರಕಾರಗಳಿಗಿಂತ ಭಿನ್ನವಾದ ಅಪ್ಪಟ ದೇಶೀ ಚಿಂತನೆಯ ಹೊಳಹುಗಳನ್ನು ಇಲ್ಲಿ ಕಾಣಬಹುದಾಗಿದೆ. ಈ ಅಂಶವನ್ನು ತಾತ್ವಿಕ ನೆಲೆಗಟ್ಟನ್ನಾಗಿಸಿಕೊಂಡು ರೂಪಿಸಿಕೊಂಡ ಅಧ್ಯಯನ ವಿಧಾನವನ್ನು ಮತ್ತು ಅಧ್ಯಯನದ ಉದ್ದೇಶವನ್ನು ಮೊದಲ ಅಧ್ಯಾಯದಲ್ಲಿ ಸ್ಪಷ್ಟಪಡಿಸಿಕೊಳ್ಳುವುದರ ಮೂಲಕ ಅಧ್ಯಯನದ ಪೂರ್ವ ಯೋಜನೆಯೊಂದನ್ನು ರೂಪಿಸಿಕೊಂಡ ಬಗೆಯನ್ನು ಮತ್ತು ತಾತ್ವಿಕ ಚೌಕಟ್ಟನ್ನು ನಿರೂಪಿಸಲಾಗಿದೆ.

ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಇನ್ನೂ ರಾಷ್ಟ್ರೀಯತೆಯ ಪರಿಕಲ್ಪನೆ ಅಸ್ಪಷ್ಟವಾಗಿದ್ದ ಕಾಲಘಟ್ಟದಲ್ಲಿ ಹುಟ್ಟಿಕೊಂಡ ಸ್ಥಳೀಯ ಪ್ರತಿಭಟನೆಗಳು, ವಸಾಹತುಶಾಹಿಯ ವಿರುದ್ಧದ ಪ್ರತಿರೋಧದ ಅಂಶಗಳು ಲಾವಣಿಗಳಲ್ಲಿ ಅಭಿವ್ಯಕ್ತಗೊಂಡಿರುವ ಸಂಗತಿಯನ್ನು ಈಗಾಗಲೇ ಸ್ಪಷ್ಟಪಡಿಸಲಾಗಿದೆ. ಆದರೆ ರಾಷ್ಟ್ರೀಯತೆಯ ಪ್ರಚಾರಾಂದೋಲನಕ್ಕೆ ಅಥವಾ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಹುಟ್ಟುಹಾಕಲು ಲಾವಣಿ ಸಾಹಿತ್ಯ ಕಾರಣವಾಯಿತೆಂಬುದು ಪೂರ್ಣ ಸತ್ಯವಲ್ಲ. ಹಾಗೆ ನೋಡಿದರೆ ಈ ಬಗೆಯ ಸ್ಥಳೀಯ ಪ್ರತಿರೋಧದ ನೆಲೆ ದೇಶೀ ನೆಲೆಯ, ಸೀಮಿತ ಪ್ರದೇಶಗಳ, ಬುಡಕಟ್ಟುಗಳ, ಸಮುದಾಯಗಳ ಅಸ್ತಿತ್ವಕ್ಕೆ ಸಂಬಂಧಿಸಿದುದಾಗಿತ್ತು. ಒಂದೆಡೆ ಮೈಸೂರಿನಂತಹ ದೊಡ್ಡ ಸಂಸ್ಥಾನಗಳು ಬ್ರಿಟಿಷ್ ಸಾಮ್ರಾಜ್ಯದೊಂದಿಗೆ ಹೊಂದಾಣಿಕೆಯ ತತ್ವವನ್ನು ಸಾಧಿಸಿ ಅಸ್ತಿತ್ವವನ್ನು ಕಾಪಾಡಿಕೊಂಡರೆ ಸ್ಥಳೀಯ ಪಾಳೆಯಪಟ್ಟುಗಳು, ಸಂಸ್ಥಾನಗಳು ಅಂತಹ ರಾಜಕೀಯ ಲೆಕ್ಕಾಚಾರಗಳಿಲ್ಲದೆ, ಆತ್ಮಾಭಿಮಾನದ ನೆಲೆಯಲ್ಲಿ ಹೋರಾಟಕ್ಕಿಳಿದು ದೈತ್ಯಶಕ್ತಿಯೆದುರು ನಾಶ ಹೊಂದಿದುದನ್ನು ಕಾಣಬಹುದು. ಇಂತಹ ದುರಂತ ಮತ್ತು ವಿಷಾದನೀಯ ಸಂಗತಿಗಳು ಮೌಖಿಕ ಪರಂಪರೆಯಲ್ಲಿ ದಾಖಲಾದ ಕ್ರಮಗಳು ಮತ್ತು ಅವು ಅಭಿವ್ಯಕ್ತಿಸುವ ವಿವಿಧ ಆಯಾಮಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ನಿರೂಪಿಸಲಾಗಿದೆಯಲ್ಲದೆ ಆ ಮೂಲಕ ಪ್ರಸ್ತುತ ಅಧ್ಯಯನದ ಸಾಧ್ಯತೆಗಳನ್ನು ವಿವರಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಈ ಸಮೀಕ್ಷೆಯ ಪ್ರಕಾರ ಲಾವಣಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಆಗಿರುವ ಬೆರಳೆಣಿಕೆಯಷ್ಟು ಅಧ್ಯಯನಗಳು ನಿರ್ದಿಷ್ಟ ಉದ್ದೇಶ ಮತ್ತು ಪೂರ್ವತೀರ್ಮಾನಗಳೊದಿಗೆ ಹೊರಟು ಅದೇ ತೀರ್ಮಾನಗಳನ್ನು ಕಾಣ್ಕೆಗಳೆಂದು ಬಿಂಬಿಸುವ ಪ್ರಯತ್ನ ಮಾಡಲಾಗಿದೆ. ಉದಾಹರಣೆಗ ಶಿವಾನಂದ ಗಬ್ಬಣ್ಣನವರ ***ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ*** ಪಿಎಚ್.ಡಿ.

ಮಹಾಪ್ರಬಂಧವು ರಾಷ್ಟ್ರೀಯತೆಯ ಪ್ರಚಾರಾಂದೋಲನಕ್ಕೆ ಲಾವಣಿಗಳು ಕಾರಣವಾದವು ಎಂಬ ಪೂರ್ವ ತೀರ್ಮಾನದೊಂದಿಗೆ ಹೊರಟು ಅಧ್ಯಯನದಲ್ಲಿ ಅದೇ ಅಂಶಗಳನ್ನು ಪೂರ್ವಾಗ್ರಹದಿಂದ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಆದರೆ ಇದು ಅಭಾಸಕರ ಸಂಗತಿಯಾಗಿದೆ. ಸ್ಥಳೀಯ ಸಮುದಾಯಗಳ, ಸ್ಥಳೀಯ ಆಳ್ವಿಕೆಗಳ ಸಂಕೀರ್ಣ ಜೀವನಾನುಭವವನ್ನು, ಸಾಮಾಜಿಕ, ರಾಜಕೀಯ ಸಂಬಂಧಗಳನ್ನು ರಾಷ್ಟ್ರೀಯತೆಯ ನೆಲೆಗೆ ಕಟ್ಟಿಹಾಕಿ, ಸುಶಿಕ್ಷಿತ ವಸಾಹತುಕಾಲದ ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯ ಸಮುದಾಯದೊಂದಿಗೆ ಹೋಲಿಕೆ ಮಾಡಿ ಜನಪದ ಕವಿಗಳಿಗೆ ಮತ್ತವರ ಅಭಿವ್ಯಕ್ತಿಗೆ ಆರೋಪಿಸಿರುವುದು ಸಮಂಜಸವಾದುದಲ್ಲ. ಈ ಅಂಶವನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪ್ರತಿರೋಧದ ತಾತ್ವಿಕ ಆಯಾಮಗಳ ಕುರಿತಾದ ಚರ್ಚೆಯನ್ನು ಕೈಗೊಳ್ಳಲಾಗಿದೆ. ಮನುಷ್ಯ ಆದಿಮ ಸ್ಥಿತಿಯಿಂದ ಮುಂದುವರೆದು ಸಾಮಾಜಿಕ ನೆಲೆಯನ್ನು ರೂಪಿಸಿಕೊಂಡಾಗಿನಿಂದ ಗ್ರೀಕ್ ಸಂಸ್ಕೃತಿಯ ಕಾಲದವರೆಗೂ ಮತ್ತು ಅಲ್ಲಿಂದ ಪ್ರಸ್ತುತ ಇಂದಿನ ದಿನಮಾನದವರೆಗೂ ಪ್ರತಿರೋಧದ ವಿವಿಧ ಆಯಾಮಗಳು ಪ್ರಕಟಗೊಳ್ಳುತ್ತಲೇ ಇರುತ್ತದೆ. ಇದು ಮನುಷ್ಯನ ವಿಕಾಸ ಕ್ರಮದ ಒಂದು ಭಾಗವೆಂಬಂತೆ ಪ್ರಕಟಗೊಳ್ಳುತ್ತಲೇ ಇರುವ ಒಂದು ಮನೋವ್ಯಾಪಾರವೇ ಆಗಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ಮನುಷ್ಯ ತನ್ನ ಸಾಮಾಜಿಕತೆಗಾಗಿ, ಭದ್ರತೆಗಾಗಿ ಸೃಷ್ಟಿಸಿಕೊಂಡ ವ್ಯವಸ್ಥೆಯೇ ಅವನನ್ನು ಬಂಧಿಸುವ ಬಂಧೀಖಾನೆಯಾಗಿ ನಿರಂತರ ನಡೆಸುವ ಹೋರಾಟದ ಪ್ರಕ್ರಿಯೆಯಾಗಿರುವುದನ್ನು ಚರಿತ್ರೆ ದಾಖಲಿಸಿದೆ. ಮಧ್ಯಕಾಲೀನ ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ಪ್ರತಿರೋಧದ ತಾತ್ವಿಕತೆಯನ್ನು ಮತ್ತು ಹೋರಾಟದ ನೆಲೆಗಳನ್ನು ಪ್ರೆಂಚ್ ಕ್ರಾಂತಿ ರೂಪಿಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಹಾಗೆಯೇ ಆಧುನಿಕದ ಅರುಣೋದಯದ ಮತ್ತು ಔದ್ಯೋಗೀಕರಣದ ವಿಸ್ತರಣಾ ಭಾಗವಾಗಿ ಯುರೋಪಿನ ರಾಷ್ಟ್ರಗಳು ವಿಸ್ತರಿಸಿದ ವಸಾಹತುಗಳಲ್ಲಿ ಮೈದಾಳಿದ ಪ್ರತಿರೋಧದ ಚರ್ಚೆಯ ಸ್ವರೂಪವನ್ನು ಈ ಅಧ್ಯಾಯದಲ್ಲಿ ಸ್ಪಷ್ಟಪಡಿಸಲು ಯತ್ನಿಸಿದೆಯಲ್ಲದೆ ಪ್ರಸ್ತುತ ಅಧ್ಯಯನದ ಕೇಂದ್ರ ಆಶಯಕ್ಕೆ ಪೂರಕವಾಗಿ ತಾತ್ವಿಕ ನೆಲೆಗಟ್ಟನ್ನು ರೂಪಿಸಿಕೊಂಡಿರುವ ಕ್ರಮವನ್ನು ಇಲ್ಲಿ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಲಾವಣಿ ಸಾಹಿತ್ಯದ ಸ್ವರೂಪ, ಲಾವಣಿ ಪದದ ನಿಷ್ಪತ್ತಿ ಅದರ ಸಾಹಿತ್ಯಿಕ ಭಾಷಿಕ ಸಂರಚನೆಗಳ ಕುರಿತಂತೆ ಚರ್ಚೆ ನಡೆಸಿದೆಯಲ್ಲದೆ ಅಧ್ಯಯನಕ್ಕೆ ಪೂರಕವಾಗಿ ಲಾವಣಿಗಳು ಒಳಗೊಂಡ ಸ್ಥಳೀಯ ವಸಾಹತುಶಾಹಿ ವಿರೋಧದ ಹೋರಾಟಗಳ ಕಥನಗಳ ಸ್ವರೂಪ ಮತ್ತು ಅಲ್ಲಿ ಅಭಿವ್ಯಕ್ತಗೊಂಡ ಪ್ರತಿರೋಧದ ಸ್ವರೂಪವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯದ ಐದರಲ್ಲಿ ಲಾವಣಿ ಸಾಹಿತ್ಯ ಮತ್ತು ಪ್ರತಿರೋಧದ ನೆಲೆಗಳು ಕುರಿತು ವ್ಯಾಖ್ಯಾನಿಸಲಾಗಿದೆ. ಈ ಅಧ್ಯಾಯವು ಇಡೀ ಮಹಾಪ್ರಬಂಧದ ಕೇಂದ್ರ ಆಶಯವನ್ನು

ಒಳಗೊಂಡ ಭಾಗವಾಗಿದೆ. ಇಲ್ಲಿ ವಸಾಹತುಶಾಹಿಗೆ ವಿರುದ್ಧದ ಪ್ರತಿರೋಧದ ರಾಜಕೀಯ, ಸಾಮಾಜಿಕ, ಆರ್ಥಿಕತೆಯ ಅಂಶಗಳನ್ನು ಅದರೆಲ್ಲ ಸಂಕೀರ್ಣ ಆಯಾಮಗಳೊಂದಿಗೆ ಚರ್ಚಿಸಲು ಪ್ರಯತ್ನಿಸಲಾಗಿದೆ. ಲಾವಣಿಗಳಲ್ಲಿ ಅಭಿವ್ಯಕ್ತಗೊಂಡ ಪ್ರಮುಖ ಹೋರಾಟದ ಸಂಕಥನಗಳನ್ನು ನಿರೂಪಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ ಆರರಲ್ಲಿ ಲಾವಣಿಗಳ ಸಾಹಿತ್ಯಿಕ ಸ್ವರೂಪವನ್ನು ಅರ್ಥೈಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ ಏಳು ಸಮಾರೋಪವಾಗಿದ್ದು, ಈ ಅಧ್ಯಯನಕ್ಕೆ ಸಂಬಂಧಿಸಿದ ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ ಹಾಗೂ ಪರಾಮರ್ಶನ ಗ್ರಂಥಗಳನ್ನು ನೀಡಲಾಗಿದೆ.

ಹೀಗೆ ಈ ಏಳು ಅಧ್ಯಾಯಗಳಲ್ಲಿ ಮಹಾಪ್ರಬಂಧದ ಪ್ರಮುಖ ಉದ್ದೇಶವಾದ ವಸಾಹತುಶಾಹಿಗೆ ಮೌಖಿಕ ಪರಂಪರೆಯು ಒಡ್ಡಿದ ಪ್ರತಿರೋಧದ ವಿವಿಧ ಆಯಾಮಗಳನ್ನು ಮಹಾಪ್ರಬಂಧದ ರೂಪದಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.



# ಪರಾಮರ್ಶನ ಗ್ರಂಥಗಳು


೧. ಅಯ್ಯಂಗಾರ್ ಮಾಸ್ತಿ ವೆಂಕಟೇಶ್, **ಕರ್ನಾಟಕ ಜನಪದ ಸಾಹಿತ್ಯ,** ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ೧೯೫೬.

೨. ಇಟ್ಟಣ್ಣವರ ಶ್ರೀರಾಮ, **ಹಗಲಿಗ್ರಾಮ ಜಾನಪದ,** ವೀರಶೈವ ಅಧ್ಯಯನ ಅಕಾಡೆಮಿ, ಶ್ರೀನಾಗರೂರು ರುದ್ರಾಕ್ಷಿ ಮಠ, ಬೆಳಗಾವಿ.

೩. ಇಟ್ಟಣ್ಣವರ ಶ್ರೀರಾಮ, **ಲಾವಣಿ,** ಬೀಳಗಿ, ೧೯೮೫.

೪. ಇಮ್ರಾಪೂರ ಸೋಮಶೇಖರ, **ಜಾನಪದ ಹಾಡುಗಳಲ್ಲಿ ನರಗುಂದ ಬಾಬಾಸಾಹೇಬ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬.

೫. ಇಟ್ಟೆಸ್ಕೆ, **ಅವಲೋಕನ-ಕರ್ನಾಟಕ ಪರಂಪರೆಯ ಸಮೀಕ್ಷೆ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

೬. ಎಮ್ಮಿರಾಚಯ್ಯ ಬಸವಯ್ಯ(ಸಂ), **ಹುಲಕುಂದ ಭೀಮಕವಿ ಕೃತ ಗೀಗೀ ಪದಗಳು,** ಶಿರಿಯೂರ, ೧೯೫೫.

೭. ಕುರ್ತುಕೋಟಿ ಹು.ರಾ., **ಹಂತಿಯ ಹೊಸ ಪದಗಳು,** ಜಗದ್ಗುರು ಅನ್ನದಾನೀಶ್ವರ ಸಂಸ್ಥಾನಮಠ, ಮುಂಡರಗಿ ಜಿ., ಧಾರವಾಡ, ೧೯೯೨.

೮. ಕ್ಯಾತನಹಳ್ಳಿ ರಾಮಣ್ಣ, **ಐದು ಐತಿಹಾಸಿಕ ಲಾವಣಿಗಳು.**

೯. ಕುಂಬಾರ ಶಂಕರ ಶಿ., **ಲಾವಣಿ ಹಾಡುಗಳು,** ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬.

೧೦. ಕುಬಸದ ನಿಜಲಿಂಗಪ್ಪ ರಾಚಪ್ಪ(ಸಂ), ಲಾವಣಿ ಹಾಡುಗಳು, ಎಂ.ಎಂ. ಕರಡಿ ಬುಕ್‌ಸೆಲರ್, ಹುಬ್ಬಳ್ಳಿ.

೧೧. ಕಾಪಸೆ ಜಿ. ಎಸ್. ಕಂಠಿ ಆರ್.ಬಿ.(ಸಂ), **ಶ್ರೀ ಚಿದಾನಂದಾವಧೂತ ವಿರಚಿತ ಜ್ಞಾನಸಿಂಧು,** ಶ್ರೀ ಹುರಕಡ್ಲಿ ಅಜ್ಜ ಶಿಕ್ಷಣ ಸಮಿತಿ, ಧಾರವಾಡ, ೧೯೯೦.

೧೨. ಕಿತ್ತೂರ ಮಾಸ್ತರ, **ಗೀಗೀ ಪದಗಳು,** ಎಂ.ಎಸ್. ಶಾಬಾದಿಮಠ ಬುಕ್ ಡಿಪೋ, ಗದಗ.

೧೩. ಕರಮಕರ ದತ್ತಾತ್ರೇಯ, **ಕಾಂಗ್ರೆಸ್ ಕಥೆ,** ಕರ್ನಾಟಕ ಪ್ರಾಂತೀಕ ಸಮಿತಿ, ಹುಬ್ಬಳ್ಳಿ, ೧೯೩೫.

೧೪. ಕಾಮತ್ ಸೂರ್ಯನಾಥ, **ಸ್ವಾತಂತ್ರ್ಯದ ಹೋರಾಟ ಹಲವು ಮುಖಗಳು,** ಮಿಂಚಿನ ಬಳ್ಳಿ ಗ್ರಂಥ ಭಂಡಾರ, ಹುಬ್ಬಳ್ಳಿ, ೧೯೮೮.

೧೫. ಕೃಷ್ಣರಾವ್ ಎಂ.ವ್ಹಿ. ಹಾಗೂ ಕೇಶವಭಟ್ಟ ಎಂ(ಸಂ), **ಕರ್ನಾಟಕ ಇತಿಹಾಸ ದರ್ಶನ,** ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೯.

೧೬. ಗಾಂಧಿ ಮೋ.ಕ., ಅಸ್ಪೃಶ್ಯ(ಅನು. ಜಿ.ಡಿ. ನಾಡಕರ್ಣಿ), **ಕನ್ನಡ ಗಾಂಧಿ ಸಾಹಿತ್ಯ ಮಾಲೆ,** ಧಾರವಾಡ, ೧೮೫೯

೧೭. ಗುತ್ತಲ ಜಯಶ್ರೀ, **ಜನಪದ ಮಂಗಳ ಗೀತೆಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೪.

೧೮. ಗುಬ್ಬಣ್ಣವರ ಶಿವಾನಂದ, **ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೯. ಗುಬ್ಬಣ್ಣವರ ಶಿವಾನಂದ, **ಗಾಂಧೀ ತತ್ವಗಳು ಹಾಗೂ ಇಂದಿನ ಭಾರತ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩.

೨೦. ಗುಬ್ಬಣ್ಣವರ ಶಿವಾನಂದ, **ರಾಷ್ಟ್ರ ಧರ್ಮನಿಷ್ಠ ಹರ್ಡೇಕರ ಮಂಜಪ್ಪ,** ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೧೯೮೬.

೨೧. ಗುಬ್ಬಣ್ಣವರ ಶಿವಾನಂದ, **ಶಿಶುನಾಳ ಶರೀಫ್ ಸಾಹೇಬರು,** ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ, ೧೯೮೯.

೨೨. ಗುಬ್ಬಣ್ಣವರ ಶಿವಾನಂದ (ಸಂ), **ಬರಕೋ ಪದ ಬರಕೋ... ಶಿಶುನಾಳ ಶರೀಫರ ಪದಗಳ ಸಂಗ್ರಹ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧.

೨೩. ಗುಬ್ಬಣ್ಣವರ ಶಿವಾನಂದ (ಸಂ), **ಬಸವಣ್ಣ ನಿನ್ನ ಹೆಸರು ದೆಸೆ ದೆಸೆ ಶಿವಮಂತ್ರ–ಜನಪದ ಗೀತೆಗಳಲ್ಲಿ ಬಸವಣ್ಣ,** ಬಸವ ಸಮಿತಿ, ಬೆಂಗಳೂರು, ೧೯೮೮.

೨೪. ಚನ್ನಬಸಪ್ಪ ಗೋ.ಕು., **ಕರ್ನಾಟಕ ಜನಪದ ಕಲೆಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.

೨೫. ಚವಲಾರ ಸರೋಜಿನಿ (ಸಂ), **ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು,** ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೮೮.

೨೬. ಜಕಾತಿ ಬ.ರು., ಹಿರೇಮಠ ಗುರುಪಾದಸ್ವಾಮಿ(ಸಂ), **ಕಿತ್ತೂರ ನಾಡಿನಲ್ಲಿ ಸ್ವಾತಂತ್ರ್ಯ ಸಮರ,** ಕಿತ್ತೂರ ಸ್ವಾತಂತ್ರ್ಯ ಯೋಧರ ಇತಿಹಾಸ ಮಂಡಲ, ೧೯೭೫.

೨೭. ಜೋಶಿ ಗುರುನಾಥ, ಕರ್ನಾಟಕದ ಬಲಿದಾನ(೧೯೩೦ ರಿಂದ ೧೯೩೪), ಬೆಂಗಳೂರು.

೨೮. ಜವರೇಗೌಡ ದೇ., **ಜನಪದ ಗೀತಾಂಜಲಿ,** ಕನ್ನಡ ಜಾನಪದ ಗೀತೆಗಳ ಸಂಕಲನ ಸಾಹಿತ್ಯ ಅಕಾಡೆಮಿ, ೧೯೯೦.

೨೯. ತಪಸ್ವೀಕುಮಾರ ನಾ., **ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ,** ೧೯೮೨.

೩೦. ದಿವಾಕರ ಆರ್.ಆರ್. (ಸಂ), **ಕಾಂಗ್ರೆಸ್ ರನ್ನ ಮಹೋತ್ಸವ,** ಹುಬ್ಬಳ್ಳಿ ಲೋಕ ಶಿಕ್ಷಣ ಟ್ರಸ್ಟ್, ೧೯೪೭.

೩೧. ದಿವಾಕರ ಆರ್.ಆರ್., **ರಾಷ್ಟ್ರೀಯ ಶಿಕ್ಷಣ,** ರಾಷ್ಟ್ರೀಯ ವಾಂಙ್ಮಯ ಪ್ರಕಾಶನ ಟ್ರಸ್ಟ್, ಹುಬ್ಬಳ್ಳಿ, ೧೯೨೮.

೩೨. ನಿಂಗಣ್ಣ ಸಣ್ಣಕ್ಕಿ, **ಹೇಳುವೆ ಮಜಕೂರಾ,** ಸಾಹಿತ್ಯ ಭಂಡಾರ, ಹುಬ್ಬಳ್ಳಿ.

೩೩. ನಿಂಗಣ್ಣ ಸಣ್ಣಕ್ಕಿ(ಸಂ), **ಜಾನಪದದಲ್ಲಿ ಕಿತ್ತೂರ ಅಕ್ಕತಂಗೇರ ಹಾಳ,** ಶ್ರೀಗಿರಿ ಪ್ರಕಾಶನ, ೧೯೭೯.

೩೪. ನಿಂಗಣ್ಣ ಸಣ್ಣಕ್ಕಿ, **ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ,** ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ೧೫೦ನೆಯ ವಿಜಯೋತ್ಸವ.

೩೫. ಪಂಚಮುಖಿ ಆರ್.ಎನ್.(ಸಂ), **ಕರ್ನಾಟಕ ಜಾನಪದ ಗೀತೆಗಳು,** ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ್, ೧೯೫೩, ಧಾರವಾಡ.

೩೬. ಪಂಚೆ ಮಂಗೇಶರಾಯ, **ಶ್ರೀರಂಗಪಟ್ಟಣದ ಲಾವಣಿ.**

೩೭. ಪಾವಟೆ ಚೆನ್ನಕ್ಕ, **ಹುಲಕುಂದ ಭೀಮಕವಿಯ ಸಾಹಿತ್ಯ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭.

೩೮. ಪಾಟೀಲ ಕಲ್ಲನಗೌಡರು, **ಅಸ್ಪೃಶ್ಯತಾ ನಿವಾರಣೆ,** ರಾಷ್ಟ್ರೀಯ ವಾಂಙ್ಮಯ ಪ್ರಕಾಶನ ಟ್ರಸ್ಟ್, ಹುಬ್ಬಳ್ಳಿ, ೧೯೪೫.

೩೯. ಪಾಟೀಲ ಪುಟ್ಟಪ್ಪ, **ಸರ್ ಸಾಹೇಬರು (ಸಿದ್ದಪ್ಪ ಕಂಬಳಿ),** ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೨.

೪೦. ಪುಟ್ಟಪ್ಪ ಕೆ.ವಿ. (ಸಂ), **ಕಮ್ಯುನಿಸಂ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೭.

೪೧. ಪರಮಶಿವಯ್ಯ ಜೀ.ಶಂ., **ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೨. ಬುರ್ಲಿ, ಬಿಂದು ಮಾಧವ(ಸಂ), **ಕರ್ನಾಟಕ ದರ್ಶನ**, ಮಿಂಚಿನ ಬಳ್ಳಿ, ಧಾರವಾಡ, ೧೯೩೭.

೪೩. ಬೆಟಗೇರಿ ಬಸಪ್ಪ ಸಂಗಪ್ಪ, **ರಾಷ್ಟ್ರೀಯ ಗೀಗೀ ಪದಗಳು, ಸೋಬಾನ, ಪದಗಳು**, ಎಚ್. ಚನ್ನಪ್ಪ ಬುಕ್‌ಸೆಲ್ಲರ್, ಮಹಂತೇಶ್ ಬುಕ್ ಡಿಪೋ, ಬಾಲಕೋಟೆ.

೪೪. ಬೆಟಗೇರಿ ಬಸಪ್ಪ ಸಂಗಪ್ಪ, **ರಾಷ್ಟ್ರೀಯ ಗೀಗೀ ಪದಗಳು**,ಮಹಂತೇಶ್ ಬುಕ್ ಡಿಪೋ, ಬಾಲಕೋಟೆ, ೧೯೫೭.

೪೫. ಬೆಟಗೇರಿ ಬಸಪ್ಪ ಸಂಗಪ್ಪ, **ಸರ್ವೋದಯ ಗ್ರಾಮೀಣ ಜನಪದ ಗೀತೆಗಳು**, ಹುಲಕುಂದ, ೧೯೬೭.

೪೬. ಬೀಳಗಿ ಹಸನಬಿ, **ಜಾನಪದ ಸೃಷ್ಟಿ-ದೃಷ್ಟಿ**, ಸಾಯಿ ಪ್ರಕಾಶನ, ಜಯನಗರ, ಧಾರವಾಡ, ೨೦೦೦.

೪೭. ಮಾರನಬಸರಿ ಎಂ.ಕೆ. ಕುಲಕರ್ಣಿ ಕೇಶವರಾವ್, **ರಾಷ್ಟ್ರೀಯ ಗೀಗೀ ಪದಗಳು**, ಶ್ರೀಬಸವೇಶ್ವರ ಪುಸ್ತಕ ಭಂಡಾರ, ಹುಬ್ಬಳ್ಳಿ, ೧೯೪೬.

೪೮. ಮಹೀಶವಾಡಿ ಬಿ.ಬಿ., **ಜಾನಪದ ವೀರಗೀತೆಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧.

೪೯. ಮರುಳಸಿದ್ದಪ್ಪ ಕೆ., **ಲಾವಣಿಗಳು**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೫೦. ಮಲಶೆಟ್ಟಿ ಬಸವರಾಜ, **ಮರಿಕಲ್ಲ ಕವಿಯ ಗೀಗೀ ಪದಗಳು**, ಬಸವೇಶ್ವರ ಪ್ರಕಾಶನ, ತೆಗಡೊಳ್ಳಿ(ಬೆಳಗಾವಿ ಜಿಲ್ಲೆ), ೨೦೦೧.

೫೧. ಮಲಶೆಟ್ಟಿ ಬಸವರಾಜ, **ಲಾವಣಿ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಕಲ್ಪನೆ.**

೫೨. ರಾಜಪ್ಪ ಟಿ.ಎಸ್. (ಸಂ), **ಧಾರವಾಡ ಜಿಲ್ಲೆಯ ಲಾವಣಿಗಳು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೮.

೫೩. ಲಿಂಗಣ್ಣ ಸಿಂ.ಪಿ, **ಜನಾಂಗದ ಜೀವಳಾ**, ಶ್ರೀ ಅರವಿಂದ ಗ್ರಂಥಾಲಯ, ಚಡಚಣ ಜಿಲ್ಲೆ, ವಿಜಾಪೂರ, ೧೯೯೨.

೫೪. ಲಿಂಗಣ್ಣ ಸಿಂಪಿ, **ಕನ್ನಡ ಲಾವಣಿಗಳು**, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ೧೯೭೭.

೫೫. ಸಬರದ ಬಸವರಾಜ, **ಬಂಡಾಯ ಜಾನಪದ**, ಮಂಟಮಾಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೫೬. ಸುಂಕಾಪುರ ಎಂ.ಎಸ್. (ಸಂ), **ಜಾನಪದ ಸಾಹಿತ್ಯ ದರ್ಶನ, ಸಂಪುಟ-೨, ಸಂಪುಟ-೪,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

೫೭. ಸಿಂಪಿ ವೀರೇಂದ್ರ, **ಸಮಗ್ರ ಜನಪದ ಸಂಪುಟ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೮ ಹಲಸಂಗಿ ಗೆಳೆಯರು, **ಗರತಿಯ ಹಾಡು,** ಜನಪ್ರಿಯ ಪುಸ್ತಕ ಮಾಲೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦.

೫೯. ಹಳೇಮನಿ ಲಿಂಗದೇವರ, **ಧೀರ ಟಿಪ್ಪುವಿನ ಲಾವಣಿಗಳು.**

೬೦. ಹೊರಕೇರಿ ಮೃತ್ಯುಂಜಯ್ಯ, **ಚದುರ ಜಾನಪದ,** ಮುರುಗು ಪ್ರಕಾಶನ, ಸಂ. ೫೦, ಪಂಚಶೀಲ ಸರಸ್ವತೀಪುರ ಗುಲಬರ್ಗಾ, ೨೦೦೩.

೬೧. ಹಾವನೂರ ಶ್ರೀನಿವಾಸ, **ಹೊಸಗನ್ನಡದ ಅರುಣೋದಯ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.

೬೨. ಹಿರೇಮಠ ಸೂಗಯ್ಯ, **ಜಾನಪದ ಸಂಸ್ಕೃತಿ,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮ, ಗುಲಬರ್ಗಾ.

೬೩. ಹೆಮ್ಮಿಗೆ ಕಮಲಾ, **ಹಾಡಿನ ಹಗೇವು,** ಯಕ್ಷ ಪ್ರಕಾಶನ, ಧಾರವಾಡ.

೬೪. ಹೂಗಾರ ಎ.ಎನ್. (ಸಂ), **ಜಾನಪದ ನರಗುಂದ,** ಬಾಬಾಸಾಹೇಬ ಗ್ರಂಥ ಪ್ರಕಾಶನ, ನರಗುಂದ, ೧೯೭೩.



